|| ಶ್ರೀಃ ||

–x–

# ಮುನ್ನುಡಿ



ಶ್ರೀ ಪದ್ಮಪುರಾಣವನ್ನು ಓದುಗರ ಅನುಕೂಲಕ್ಕೋಸ್ಕರ ಭಾಗಗಳನ್ನಾಗಿ ಪ್ರಕಟಿಸುತ್ತಿದ್ದುದು ಸರಿಯಷ್ಟೆ. ಆ ರೀತಿಯಲ್ಲಿ ಪ್ರಕಟವಾಗುವುದರಲ್ಲಿ ಇದು ಉತ್ತರಖಂಡದ ಎಂಟನೆಯ ಭಾಗ ಅಥವಾ ಕೊನೆಯ ಭಾಗವಾಗಿ ೨೬೯ ನೇ ಅಧ್ಯಾಯದಿಂದ ೨೮೨ ನೇ ಅಧ್ಯಾಯ ಪೂರ್ತಿಯಾಗಿ ಒಳಗೊಂಡು ಪ್ರಕಟವಾಗಿರುತ್ತದೆ.

ಇದರಲ್ಲಿ ರಾಮಾವತಾರದ ಕಥೆ ಕೃಷ್ಣಾವತಾರದ ಕಥೆಗಳು ಸಂಗ್ರಹವಾಗಿ ವಿವರಿಸಲ್ಪಟ್ಟಿವೆ. ಈ ಕಥೆಯು ಸಂಗ್ರಹವಾಗಿದ್ದರೂ ಲೋಕರೂಢಿಯಾದ ಕಥೆಯ ರೂಪದಲ್ಲಿರದೆ ಧರ್ಮಬೋಧಕವಾಗಿದ್ದುಕೊಂಡು ರಾಮನಾಮದ ಪ್ರಾಶಸ್ತ್ಯವು ಉತ್ತಮೋತ್ತಮ ರೀತಿಯಿಂದ ಪ್ರತಿಪಾದಿತವಾಗಿದೆ.

ಶಿವನು ತಾನು ಪಾರ್ವತಿಗೆ ರಾಮನಾಮದ ಮಹಿಮೆಯನ್ನು ಹೇಳುತ್ತಾ—

" ರಾಮ ರಾಮೇತಿ ರಾಮೇಽತಿ ರಮೇ ರಾಮೇ ಮನೋರಮೇ |
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ || "

ಎಂದು ಹೇಳಿರುವುದು ರಾಮಸ್ಮರಣೆಯ ವಿಷಯದಲ್ಲಿ ಗಮನಾರ್ಹವಾಗಿದೆ.

ಅನಂತರ ಕೃಷ್ಣಾವತಾರದ ಕಥೆಯನ್ನು ಸಂಗ್ರಹಿಸಿ ಹೇಳಿ ಅದರಲ್ಲಿ ಕೃಷ್ಣನ ಮಹಿಮೆಯನ್ನು ವಿವರಿಸುತ್ತಾ ಕೃಷ್ಣನು ಬ್ರಹ್ಮನನ್ನೂ ಇಂದ್ರನನ್ನೂ ಪರಾಜಯಗೊಳಿಸಿರುವ ವಿಷಯವು ಅದ್ಭುತವಾಗಿದೆ.

ಈ ಕೃಷ್ಣಾವತಾರದಲ್ಲಿ ಕೆಲವರನ್ನು ಮೇಲೆ ಬಿದ್ದು ಕೊಂದಿರುವುದನ್ನೂ ಕೆಲವರನ್ನು ಕೊಲ್ಲಿಸಿರುವುದನ್ನೂ ಕೆಲವರಿಂದ ತಾನು ಸೋತು ಅವರಿಗೆ ಬೇರೆಯವರಿಂದ ತೊಂದರೆ ಬರುವಂತೆ ಮಾಡಿರುವುದನ್ನೂ ನೋಡಿದರೆ ಕೃಷ್ಣನು

ಲೀಲಾಮಾನುಷಧಾರಿಯೆಂಬುದು ಮನಸ್ಸಿಗೆ ಬಂದರೂ, ಮನುಷ್ಯನಿಗೆ ಸಾವು ನೋವುಗಳೂ ಸುಖದುಃಖಗಳೂ ಅವನವನ ಪ್ರಾರಬ್ಧದಂತೆಯೇ ಬರುವುವು. ಎಂಬುದು ಪ್ರತ್ಯಕ್ಷವಾಗಿರುವಂತೆ ಕಾಣುತ್ತದೆ.

ಕೃಷ್ಣನಿಗೆ ಸಾವಿರಾರು ಜನ ಹೆಂಡಿರೂ ಸಾವಿರಾರು ಜನ ಮಕ್ಕಳೂ ಇದ್ದರೂ ಕೂಡ ಕೊನೆಗಾಲದಲ್ಲಿ ಒಬ್ಬರಿಗೊಬ್ಬರು ಸಹಾಯಕರಾಗದೆ ಬಡಿದಾಡಿ ತಾವೆಲ್ಲರೂ ಮಡಿದರು. ಅವರೊಡನೆ ತಾನೂ ಬಡಿದಾಡಿ ಆಯಾಸದಿಂದ ಒಂದು ಮರದ ನೆರಳಿನಲ್ಲಿ ಮಲಗಿರಲು ಬೇಡನಿಂದ ಏಟುತಿಂದು ಸತ್ತನು. ಅನಂತರ ಅರ್ಜುನನು ಈ ಕೃಷ್ಣನ ಹೆಂಡಿರನ್ನು ಕರೆದುಕೊಂಡು ಹೋಗುತ್ತಿರಲು ಕಳ್ಳರು ಬಂದು ಅರ್ಜುನನನ್ನು ಹೊಡೆದೋಡಿಸಿ ಆ ಹೆಂಗಸರನ್ನೆಲ್ಲಾ ಎತ್ತಿಕೊಂಡು ಹೋದರು. ಇದೆಲ್ಲಕ್ಕೂ ಶಾಪವೇ ಕಾರಣವೆಂದು ವ್ಯಾಸರು ಮುಕ್ತಕಂಠವಾಗಿ ಹೇಳಿದ್ದರೂ ಕೂಡ ಮನಸ್ಸಿನಲ್ಲಿ ಒಂದು ವಿಧವಾದ ಜುಗುಪ್ಸೆಯು ತಲೆದೋರದಿರಲಾರದು.

ಈ ರಾಮಾವತಾರ ಕೃಷ್ಣಾವತಾರಗಳನ್ನೇ ಹೋಲಿಸಿ ನೋಡಿದರೆ ರಾಮಾವತಾರವು ಶಕ್ತಿಯನ್ನು ಪ್ರದರ್ಶಿಸುವ ಅವತಾರವೆಂದೂ, ಕೃಷ್ಣಾವತಾರವು ಯುಕ್ತಿಯನ್ನು ಪ್ರದರ್ಶಿಸುವ ಅವತಾರವೆಂದೂ ಸ್ಥೂಲವಾಗಿ ಹೇಳಬಹುದಾಗಿದೆ.

ಒಟ್ಟಿನಲ್ಲಿ ಶ್ರೀರಾಮಾವತಾರ ಕೃಷ್ಣಾವತಾರಗಳೆರಡೂ ಮಹಾವತಾರಗಳು. ದಶಾವತಾರಗಳಲ್ಲಿ ಮುಖ್ಯವಾದುವು. ಉತ್ತಮೋತ್ತಮವಾದ ತಾರಕಮಂತ್ರಗಳು ಇವುಗಳಿಂದ ಹೊರಹೊಮ್ಮಿವೆ.

ನಾವು ಅನೇಕ ದೇವರನ್ನು ಅನೇಕ ಬಗೆಯಲ್ಲಿ ಪೂಜಿಸುತ್ತಿದ್ದೇವೆ. ಅಂತೆಯೇ ಕೃಷ್ಣನನ್ನು ಅನೇಕ ಬಗೆಯ ಮೂರ್ತಿಗಳ ರೂಪದಲ್ಲಿ ಪೂಜಿಸುತ್ತಿದ್ದೇವೆ. ಆದರೆ ಶಿವ ದೇವಸ್ಥಾನದಲ್ಲಿ ಮಾತ್ರ ಶಿವನ ಕೈಕಾಲುಗಳಿಲ್ಲದ ಬೇರೆಯ ರೂಪದಲ್ಲಿರುವ ಮೂರ್ತಿಯನ್ನು ಪೂಜೆಮಾಡುತ್ತಿದ್ದೇವೆ. ನಾವು ಈ ರೀತಿಯಾಗಿರುವ ಮೂರ್ತಿಯನ್ನು ಪೂಜೆಮಾಡಲು ಕಾರಣವು ಅನೇಕ ಬಗೆಯಲ್ಲಿದ್ದರೂ ಈ ಪದ್ಮ ಪುರಾಣದಲ್ಲಿ ಭೃಗುಋಷಿಯ ಶಾಪದ ವಿಷಯವು ಸಮಂಜಸವಾದ ಕಾರಣವಾಗಿರುವಂತೆ ತೋರುತ್ತದೆ.

ಐವತ್ತೈದು ಸಾವಿರ ಗ್ರಂಥಗಳನ್ನು ಯಾವರೀತಿಯಾದ ವಿಘ್ನಗಳೂ ಇಲ್ಲದೆ ಬರೆದು ಮುದ್ರಿಸುವುದೆಂದರೆ ಕಷ್ಟಸಾಧ್ಯವೇ ಸರಿ! ಇದುವರೆಗೂ ವಿಘ್ನಗಳಿಲ್ಲದೆ ಬರವಣಿಗೆಯೂ ಮುದ್ರಣವೂ ಸುಲಲಿತವಾಗಿ ನೆರವೇರಿದುದಕ್ಕೆ ಆ ಸರ್ವಶಕ್ತನಾದ ಪರಮಾತ್ಮನನ್ನು ಅನನ್ಯಭಾವದಿಂದ ವಂದಿಸುತ್ತೇನೆ.

ಪಂಡಿತರುಗಳಿಗೆ ಆಶ್ರಯವನ್ನು ಕೊಟ್ಟು ಅವರನ್ನು ಪ್ರೋತ್ಸಾಹಿಸುತ್ತ ಅವರುಗಳಿಂದ ಅನೇಕ ಗ್ರಂಥಗಳು ಕನ್ನಡದಲ್ಲಿ ಹೊರಹೊಮ್ಮುವಂತೆ ಮಾಡಿ ತನ್ಮೂಲಕ ತಮ್ಮ ಪ್ರಜಾವರ್ಗಕ್ಕೆ ಜ್ಞಾನಾಮೃತಪಾನವು ಬಹು ಸುಲಭವಾಗಿ ದೊರಕುವಂತೆ ಲೋಕೋಪಕಾರ ಮಾಡುತ್ತ ಸರ್ವಜನ ಹಿತೈಷಿಗಳಾಗಿ ನಮ್ಮನ್ನು ಆಳುತ್ತಲಿರುವ ಮಹಾಪ್ರಭುಗಳಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಬಿ., ಜಿ. ಸಿ. ಎಸ್. ಐ.** ಮಹಾಸ್ವಾಮಿಯವರಿಗೆ ರಾಜಮನೆತನಕ್ಕೆ ಕುಲದೇವತೆಯಾದ ಶ್ರೀ ಚಾಮುಂಡಾಂಬೆಯು ಪುತ್ರಸಂತಾನಾದಿ ಸತ್ಸೌಭಾಗ್ಯಗಳನ್ನೂ, ಆಯುರಾರೋಗ್ಯ ಸಕಲ ಸನ್ಮಂಗಳವನ್ನೂ ಕರುಣಿಸಿ ಕೊಟ್ಟು ಕಾಪಾಡಲೆಂದು ಅನನ್ಯಮನಸ್ಕನಾಗಿ ಪ್ರಾರ್ಥಿಸುತ್ತೇನೆ.

ಮೈಸೂರು,
17—10—1946.

ಅನುವಾದಕ,
**ಬೇಲದಕೆರೆ ಸೂರ್ಯನಾರಾಯಣಶಾಸ್ತ್ರಿ.**



|| ಶ್ರೀಃ ||

-X-

## ಪದ್ಮಮಹಾಪುರಾಣದ ಉತ್ತರಖಂಡದಲ್ಲಿ ಎಂಟನೆಯ ಭಾಗದ

# ವಿಷಯಾನುಕ್ರಮಣಿಕೆ

ಪುಟಸಂಖ್ಯೆ

ಪುಟಸಂಖ್ಯೆ

ಬಲರಾಮಕೃಷ್ಣರಿಗೆ ನಾಮಕರಣವೇ ಮುಂತಾದ ಸಂಸ್ಕಾರಗಳು. ಕೃಷ್ಣನು ಪೂತನಿಯನ್ನು ಕೊಂದುದು. ಕೃಷ್ಣನು ಶಕಟಾಸುರನನ್ನು ಕೊಂದುದು. ಕೃಷ್ಣನು ಕೋಳಿಯ ಆಕಾರವನ್ನು ಹೊಂದಿದ್ದ ರಾಕ್ಷಸನನ್ನು ಕೊಂದುದು. ಕೃಷ್ಣನು ಯಮಳಾರ್ಜುನರಿಗೆ ಮೋಕ್ಷವನ್ನು ಕೊಟ್ಟುದು. ದಾಮೋದರನೆಂಬ ಹೆಸರು ಬರಲು ಕಾರಣವು. ಕೃಷ್ಣನು ಬಕಾಸುರನನ್ನು ಕೊಂದುದು. ಬ್ರಹ್ಮನು ಗೋವುಗಳನ್ನು ಗೋವಿನ ಕರುಗಳನ್ನು ಗೋಪಾಲಕರನ್ನು ಅಪಹರಿಸಿಕೊಂಡುಹೋದಮೇಲೆ ಕೃಷ್ಣನು ಗೋವುಗಳನ್ನು ಗೋವಿನ ಕರುಗಳನ್ನೂ ಗೋಪಾಲಕರನ್ನೂ ಸೃಷ್ಟಿಸಿದುದು. ಬ್ರಹ್ಮನು ಕೃಷ್ಣನನ್ನು ಸ್ತುತಿಸುವುದು. ಕೃಷ್ಣನು ಕಾಳಿಯ ಸರ್ಪವನ್ನು ತುಳಿದುದು. ಕೃಷ್ಣನು ಖರಾಸುರನೇ ಮುಂತಾದವರನ್ನು ಕೊಂದುದು. ಕೃಷ್ಣನು ಗೋಪಿಯರೊಡನೆ ಕ್ರೀಡಿಸುವುದರ ವರ್ಣನೆ. ಕೃಷ್ಣನಿಗೆ ವ್ಯಭಿಚಾರಮಾಡಿದುದರ ದೋಷವಿಲ್ಲವೆಂದು ವಿವರಿಸುವುದು. ಇಂದ್ರಮಹೋತ್ಸವವನ್ನು ಮಾಡುತ್ತಿದ್ದುದನ್ನು ಪ್ರತಿಬಂಧಿಸಿದುದರಿಂದ ಕೋಪಗೊಂಡ ಇಂದ್ರನು ಏಳು ದಿನಗಳವರೆಗೂ ಎಡೆಬಿಡದೆ ಮಳೆಯನ್ನು ಸುರಿಸಲು ಕೃಷ್ಣನು ಆ ಮಳೆಯಿಂದ ತೊಂದರೆ ಬರದಂತೆ ಗೋವುಗಳನ್ನು ಗೋಪಾಲಕರನ್ನು ಕಾಪಾಡಿದುದು. ತಸ್ಮೈದೇವಾಯ ಹವಿಷಾವಿಧೇಮ ಎಂಬ ಸೂತ್ರದ ವ್ಯಾಖ್ಯಾನರೂಪವಾದ ಇಂದ್ರನು ಮಾಡಿದ ಕೃಷ್ಣನ ಸ್ತೋತ್ರವು. ಕಂಸನು ಅಕ್ರೂರನ ಕೈಯ್ಯಲ್ಲಿ ಹೇಳಿಕಳುಹಿಸಿದ್ದ ಮಾತನ್ನು ಕೇಳಿ ರಾಮಕೃಷ್ಣರೂ ನಂದನೇ ಮುಂತಾದ ಗೋಪರೂ ಯಶೋದೆಯೇ ಮುಂತಾದ ಗೋಪಿಯರೂ ಮಧುರಾಪಟ್ಟಣಕ್ಕೆ ಹೋಗುವುದು. ಮಧುರೆಗೆ ಬರುತ್ತಿರುವಾಗ ಮಧ್ಯದಲ್ಲಿ ಅಕ್ರೂರನು ಕೃಷ್ಣನನ್ನು ಸ್ತುತಿಸುವುದು. ಮಧುರೆಯಲ್ಲಿ ಕೃಷ್ಣನು ಅಗಸನನ್ನು ಕೊಂದುದು. ಕುಬ್ಜೆಯು ಕೊಟ್ಟ ಗಂಧವನ್ನು ರಾಮಕೃಷ್ಣರು ಸ್ವೀಕರಿಸಿದುದು. ಕಂಸನ ಯಜ್ಞಶಾಲೆಯಲ್ಲಿ ಕೃಷ್ಣನು ಧನುಸ್ಸನ್ನು ಮುರಿದುದು. ಕೃಷ್ಣನು ಕುವಲಯಾಪೀಡವೆಂಬ ಆನೆಯನ್ನು ಕೊಂದುದು. ಆ ಆನೆಯ ಕೊಂಬನ್ನು ತೆಗೆದುಕೊಂಡು ರಾಮಕೃಷ್ಣರು ಮಲ್ಲಯುದ್ಧಕ್ಕೆ ಹೋಗುವುದು. ಕೃಷ್ಣನು

## ಇನ್ನೂರ ಎಪ್ಪತ್ತೇಳನೆಯ ಅಧ್ಯಾಯವು

ಕೃಷ್ಣನಿಗೆ ರುಕ್ಮಿಣಿಯಲ್ಲಿ ಪ್ರದ್ಯುಮ್ನನೆಂಬ ಮಗನುಹುಟ್ಟುವುದು. ಪ್ರದ್ಯುಮ್ನನಿಗೆ ಅನಿರುದ್ಧನೆಂಬ ಮಗನು ಹುಟ್ಟಿದುದು. ಬಾಣಪುತ್ರಿಯಾದ ಉಷೆಯು ಅನಿರುದ್ಧನನ್ನು ಸ್ವಪ್ನದಲ್ಲಿ ವರಿಸುವುದು. ಬೆಳಗಾಗುತ್ತಲೂ ಭ್ರಾಂತಚಿತ್ತಳಾಗಿರುವ ಉಷೆಯನ್ನು ನೋಡಿ ಅವಳ ಸಖಿಯು ಎಲ್ಲಾ ಲೋಕಗಳಲ್ಲಿಯೂ ಇರುವ ಉತ್ಕೃಷ್ಟರಾದ ಪುರುಷರ ಆಕಾರವನ್ನು ಬರೆದು ಆ ಉಷೆಗೆ ತೋರಿಸುವುದು. ಸಖಿಯು ಬರೆದಿರುವ ಚಿತ್ರಗಳಲ್ಲಿ ಅನಿರುದ್ಧನ ಪ್ರತಿಮೆಯನ್ನು ನೋಡಿ ಉಷೆಯು ಅದನ್ನು ಆಲಿಂಗನಾದಿಗಳನ್ನು ಮಾಡಿಕೊಳ್ಳುವುದು. ಇದನ್ನು ಸಖಿಯು ನೋಡಿ ಇವನೇ ಇವಳಿಗೆ ಇಷ್ಟದವನಾಗಿರುವನೆಂದು ತಿಳಿದು ಉಷೆಯ ಸಖಿಯು ಮಾಯಗಾತಿಯರಿಂದ ಅನಿರುದ್ಧನನ್ನು ಅವನ ಅಂತಃಪುರದಿಂದ ಅಪಹರಿಸಿ ಉಷೆಯ ಅಂತಃಪುರದಲ್ಲಿಡುವಂತೆ ಮಾಡುವುದು. ಅನಿರುದ್ಧ ಬಾಣಾಸುರರಿಗೆ ಯುದ್ಧ ನಡೆಯುವುದು. ಬಾಣಾಸುರನು ಸರ್ಪಾಸ್ತ್ರದಿಂದ ಅನಿರುದ್ಧನನ್ನು ಕಟ್ಟಿಹಾಕುವುದು. ಈ ವಿಷಯವನ್ನು ಶ್ರೀಕೃಷ್ಣನು ತಿಳಿದು ಬಾಣಾಸುರನ ಪಟ್ಟಣಕ್ಕೆ ಬಂದು ಅಲ್ಲಿ ಬಾಗಿಲನ್ನು ಕಾಯುತ್ತಿರುವ ಹರನೊಡನೆ ಯುದ್ಧ ಮಾಡುವುದು. ಗಜಾನನನೊಡನೆ ಬಲರಾಮನು ಯುದ್ಧವನ್ನು ಮಾಡುವುದು. ಹರನು ತಾಪಜ್ವರವನ್ನು ಕಳುಹಿಸಲು ಕೃಷ್ಣನು ಶೀತಜ್ವರದಿಂದ ಅದನ್ನು ನಿವಾರಣೆಮಾಡುವುದು. ಆ ಹರಿಹರರಾಜ್ಞೆಯಂತೆ ಆ ಶೀತಜ್ವರ ತಾಪಜ್ವರಗಳೆರಡೂ ಎಲ್ಲಾ ಲೋಕಗಳಲ್ಲಿಯೂ ಸಂಚರಿಸುವುದು. ಹರಿಹರರ ಈ ಯುದ್ಧವನ್ನು ಕೇಳುವವರಿಗೆ ಈ ಜ್ವರವು ಬರುವುದಿಲ್ಲವೆಂದು ಹೇಳುವಿಕೆ. ಕೃಷ್ಣನು ಹರನನ್ನೂ ಗಜಾನನನನ್ನೂ ಮೋಹನಾಸ್ತ್ರದಿಂದ ಸೋಲಿಸಿ ಬಾಣಾಸುರನೊಡನೆ ಯುದ್ಧ ಮಾಡುವುದು. ಕೃಷ್ಣನು ಬಾಣಾಸುರನ ತೋಳುಗಳನ್ನು ಕತ್ತರಿಸುವುದು. ಪಾರ್ವತಿಯ ಪ್ರಾರ್ಥನೆಯಂತೆ ಕೃಷ್ಣನು ಮೋಹನಾಸ್ತ್ರವನ್ನು ಉಪಸಂಹರಿಸುವುದು. ಶಂಕರನು ಕೃಷ್ಣನನು ಸ್ತುತಿಸುವುದು. ಶಂಕರನ ಪ್ರಾರ್ಥನೆಯಂತೆ

ಮಕ್ಕಳೆಲ್ಲರೂ ಒಂದು ಸಾರಿ ವಿಹಾರಕ್ಕೋಸ್ಕರ ನರ್ಮದಾ ತೀರಕ್ಕೆ ಹೋಗಿರಲು ಅವರೆಲ್ಲರೂ ಸಾಂಬನೆಂಬ ತನ್ನ ಸಹೋದರನಿಗೆ ಹೆಂಗಸಿನ ವೇಷವನ್ನು ಹಾಕಿ ಅವನ ಹೊಟ್ಟೆಗೆ ಕಬ್ಬಿಣದ ಹಾರೆಯನ್ನು ಕಟ್ಟಿ ಅವನನ್ನು ಕಣ್ವಋಷಿಯ ಬಳಿಗೆ ಕರೆದುಕೊಂಡು ಹೋಗಿ ಈಕೆಗೆ ಹುಟ್ಟುವುದು ಗಂಡೋ ? ಹೆಣ್ಣೋ ? ಎಂಬುದಾಗಿ ಆ ಕಣ್ವನನ್ನು ಕೇಳುವುದು. ಕಣ್ವನು ಇದರಿಂದಲೇ ನಿಮ್ಮ ವಂಶವು ಕ್ಷಯಿಸಿ ಹೋಗುತ್ತದೆ ಎಂದು ಶಪಿಸುವಿಕೆ. ಅನಂತರದಲ್ಲಿ ಕೃಷ್ಣನು ಇದನ್ನು ತಿಳಿದು ಅದನ್ನು ಪುಡಿ ಮಾಡಿ ಮಡುವಿನಲ್ಲಿ ಹಾಕಿಸುವುದು. ಆ ಕಬ್ಬಿಣದ ಹಾರೆಯ ಚೂರ್ಣದಿಂದ ಜೊಂಡು ಹುಟ್ಟುವುದು. ಒಂದು ಸಾರಿ ಹೆಂಡವನ್ನು ಕುಡಿದು ಮತ್ತರಾದ ಯಾದವರು ಈ ಕಬ್ಬಿಣದ ಚೂರ್ಣದಿಂದ ಹುಟ್ಟಿದ್ದ ಜೊಂಡನ್ನು ತೆಗೆದುಕೊಂಡು ಒಬ್ಬರಿಗೊಬ್ಬರು ಹೊಡೆದಾಡಿ ಅದರಿಂದ ಸಾಯುವುದು. ಒಬ್ಬ ಬೇಡನು ಮೀನು ತಿಂದಿದ್ದ ಆ ಒನಕೆಯ ಚೂರನ್ನು ತೆಗೆದುಕೊಂಡು ಅದನ್ನು ತನ್ನ ಬಾಣದ ತುದಿಯ ಅಲಗನ್ನಾಗಿ ಮಾಡಿಸಿಕೊಳ್ಳುವುದು. ಕಲ್ಪವೃಕ್ಷದ ನೆರಳಿನಲ್ಲಿ ತೊಡೆಯಮೇಲೆ ಕಾಲನ್ನು ಹಾಕಿಕೊಂಡು ಆತ್ಮಚಿಂತನೆಯನ್ನು ಮಾಡುತ್ತಿದ್ದ ಕೃಷ್ಣನ ಕಾಲಿಗೆ ಆ ಬೇಡನು ಬಾಣವನ್ನು ಬಿಡುವುದು. ಅನಂತರ ಇವನು ಕೃಷ್ಣನೆಂದು ತಿಳಿಯಲುಬೇಡನು ಅವನನ್ನು ನಮಸ್ಕರಿಸಿ ಕೇಳಿಕೊಳ್ಳುವುದು. ಆಗ ಕೃಷ್ಣನು ನಿಷಾದನನ್ನು ಅಮೃತಹಸ್ತದಿಂದ ಎಬ್ಬಿಸಿ ನೀನು ತಪ್ಪುಮಾಡಲಿಲ್ಲವೆಂದು ಹೇಳುತ್ತ ಸಮಾಧಾನಪಡಿಸುವುದು. ನಿಷಾದನು ವೈಕುಂಠಕ್ಕೆ ಹೋಗುವುದು. ದಾರುಕನನ್ನು ಕಳುಹಿಸಿ ಅರ್ಜುನನನ್ನು ಕರೆಸಿಕೊಂಡು ಎಲೈ ಅರ್ಜುನನೆ ರುಕ್ಮಿಣಿಯೇ ಮುಂತಾದ ಎಂಟುಜನ ಹೆಂಡತಿಯರನ್ನು ನನ್ನೊಡನೆಯೇ ಸಹಗಮನ ಮಾಡಿಸೆಂದು ಅಪ್ಪಣೆಮಾಡುವುದು. ಕೃಷ್ಣನು ಮಾನುಷ ದೇಹವನ್ನು ಬಿಟ್ಟು ವೈಕುಂಠಕ್ಕೆ ಹೋಗುವುದು. ಅರ್ಜುನನಿಂದ ಕೃಷ್ಣನ ವಿಷಯವನ್ನು ಕೇಳಿ ಕೃಷ್ಣನ ಹೆಂಡತಿಯರೂ ವಸುದೇವ ಉಗ್ರಸೇನಾದಿಗಳೂ ಸಕಲ ಯಾದವರೂ ಕೃಷ್ಣನ ಬಳಿಗೆ ಹೋಗುವುದು. ವಸುದೇವ ಉಗ್ರಸೇನರು ವೈಕುಂಠಕ್ಕೆ ಹೋಗುವುದು. ಯಾದವ ಸ್ತ್ರೀಯರು ಅಗ್ನಿಪ್ರವೇಶವನ್ನು

ಪುಟಸಂಖ್ಯೆ

॥ ಶ್ರೀಃ ॥

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕೋನಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥



**॥ ರುದ್ರ ಉವಾಚ ॥**

**ಸ್ವಾಯಂಭುವೋ ಮನುಃ ಪೂರ್ವಂ ದ್ವಾದಶಾರ್ಣಂ ಮಹಾಮನುಂ ।**
**ಜಜಾಪ ಗೌತಮೀತಿರೇ ನೈಮಿಷೇ ವಿಮಲೇ ಶುಭೇ ॥ ೧ ॥**

**ತೇನ ವರ್ಷಸಹಸ್ರಾಣಿ ಪೂಜಿತಃ ಕಮಲಾಪತಿಃ ।**
**ಮತ್ತೋ ವರಂ ವೃಣೀಷ್ವೇತಿ ಪ್ರಾಹ ತಂ ಭಗವಾನ್ ಹರಿಃ ॥**
**ತತಃ ಪ್ರೋವಾಚ ಹರ್ಷೇಣ ಮನುಃ ಸ್ವಾಯಂಭುವೋ ಹರಿಂ ॥ ೨ ॥**

---

## ಇನ್ನೂರ ಅರವತ್ತೊಂಭತ್ತನೆಯ ಅಧ್ಯಾಯವು



೧. ರುದ್ರನು ಹೇಳಿದನು– ಸ್ವಾಯಂಭುವಮನುವು ಪೂರ್ವದಲ್ಲಿ ನೈಮಿಷಾರಣ್ಯದಲ್ಲಿ ಗೌತಮೀನದಿಯ ತೀರದಲ್ಲಿ ದ್ವಾದಶಾಕ್ಷರಿ ಮಹಾಮಂತ್ರವನ್ನು ಜಪಿಸಿದನು.

೨. ಅವನು ಆ ಗೌತಮೀನದಿಯ ದಡದಲ್ಲಿ ದ್ವಾದಶಾಕ್ಷರಿಯನ್ನು ಜಪಿಸುತ್ತಾ ಸಾವಿರ ವರ್ಷಗಳವರೆಗೂ ಕಮಲಾಪತಿಯಾದ ವಿಷ್ಣುವನ್ನು ಪೂಜಿಸಿದನು. ಆಗ ಪ್ರತ್ಯಕ್ಷನಾದ ಹರಿಯು ಹರ್ಷದಿಂದ ಅವನನ್ನು ಕುರಿತು ನಿನಗೆ ಬೇಕಾದ ವರವನ್ನು ಕೇಳಿಕೊ. ಎಂದನು. ಅದನ್ನು ಕೇಳಿ ಆ ಮನುವು ಹರ್ಷದಿಂದ ಆ ಹರಿಯನ್ನು ಕುರಿತು ಇಂತೆಂದನು.

॥ ಮನುರುವಾಚ ॥

ಪುತ್ರತ್ವಂ ಭಜ ದೇವೇಶ ತ್ರೀಣಿ ಜನ್ಮಾನಿ ಚಾಚ್ಯುತ ।
ತ್ವಾಂ ಪುತ್ರಲಾಲಸತ್ವೇನ ಭಜಾಮಿ ಪುರುಷೋತ್ತಮಂ ॥ ೩ ॥

॥ ರುದ್ರ ಉವಾಚ ॥

ಇತ್ಯುಕ್ತಸ್ತೇನ ಲಕ್ಷ್ಮೀಶಃ ಪ್ರೋವಾಚ ಸುಮಹಾಗಿರಾ ॥ ೪ ॥

॥ ಶ್ರೀ ವಿಷ್ಣುರುವಾಚ ॥

ಭವಿಷ್ಯತಿ ನೃಪಶ್ರೇಷ್ಠ ಯತ್ತೇ ಮನಸಿ ಕಾಂಕ್ಷಿತಂ ।
ಮಮ್ಯೈವ ಚ ಮಹಾಪ್ರೀತಿಸ್ತವ ಪುತ್ರತ್ವಹೇತವೇ ॥ ೫ ॥

ಸ್ಥಿತಿಪ್ರಯೋಜನೇ ಕಾಲೇ ತತ್ರ ತತ್ರ ನೃಪೋತ್ತಮ ।
ತ್ವಯಿ ಜಾತೇ ತ್ವಹಮಪಿ ಜಾತೋಸ್ಮಿ ತವ ಸುವ್ರತ ॥ ೬ ॥

---

೩. ಮನುವು ಹೇಳಿದನು–ಎಲೈ ದೇವೇಶನೆ! ನೀನು ನನಗೆ ಮೂರು ಜನ್ಮಗಳಲ್ಲಿ ಮಗನಾಗಿ ಹುಟ್ಟು. ಮಗನಾಗಿ ಹುಟ್ಟಿದ ಮೇಲೆ ಪುರುಷೋತ್ತಮನಾದ ನಿನ್ನನ್ನು ಮಗನ ರೀತಿಯಿಂದ ಸೇವಿಸುತ್ತೇನೆ.

೪. ರುದ್ರನು ಹೇಳಿದನು–ಆ ಲಕ್ಷ್ಮೀಪತಿಗೆ ಇಂತೆಂದು ಹೇಳಲು ಆತನು ಸಂತೋಷದಿಂದ ಇಂತೆಂದನು.

೫. ಶ್ರೀ ವಿಷ್ಣುವು ಹೇಳಿದನು–ಎಲೈ ದೊರೆಯೆ! ನಿನ್ನ ಮನಸ್ಸಿನಲ್ಲಿರುವಂತೆಯೇ ಆಗಲಿ. ನನಗೂ ಕೂಡ ನಿನಗೆ ಮಗನಾಗಿ ಹುಟ್ಟುವುದರಲ್ಲಿ ಬಹು ಪ್ರೀತಿಯೂ ಇರುವುದು.

೬. ಎಲೈ ದೊರೆಯೇ! ಕಾಲವನ್ನೂ ಪ್ರಯೋಜನವನ್ನೂ ಅನುಸರಿಸಿ ಆಯಾಯಾ ಕಾಲದಲ್ಲಿ ನೀನು ಹುಟ್ಟುತ್ತೀಯೆ. ನೀನು ಹುಟ್ಟಿದಾಗ ನಾನೂ ಕೂಡ ನಿನಗೆ ಮಗನಾಗಿ ಹುಟ್ಟುತ್ತೇನೆ.

ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ತವಾನಘ　　॥ ೭ ॥

॥ ರುದ್ರ ಉವಾಚ ॥

ಏವಂ ದತ್ವಾ ವರಂ ತಸ್ಮೈ ತತ್ರೈವಾಂತರ್ದಧೇ ಹರಿಃ ।
ಅಸ್ಯಾಭೂತ್ಪ್ರಥಮಂ ಜನ್ಮ ಮನೋಃ ಸ್ವಾಯಂಭುವಸ್ಯ ಚ　　॥ ೮ ॥

ರಘೂಣಾಮನ್ವಯೇ ಪೂರ್ವಂ ರಾಜಾ ದಶರಥೋ ಹ್ಯಭೂತ್ ।
ದ್ವಿತೀಯೋ ವಸುದೇವೋಽಭೂತ್ ವೃಷ್ಣೀನಾಮನ್ವಯೇ ವಿಭುಃ　　॥ ೯ ॥

ಕಲೇರ್ದಿವ್ಯಸಹಸ್ರಾಬ್ದಪ್ರಮಾಣಸ್ಯಾಂತ್ಯಪಾದಕೇ ।
ಶಂಭಲಗ್ರಾಮಕೇ ಮುಖ್ಯೇ ಬ್ರಾಹ್ಮಣಃ ಸಂಜನಿಷ್ಯತಿ　　॥ ೧೦ ॥

ಕೌಸಲ್ಯಾ ಸಮಭೂತ್ಪತ್ನೀ ರಾಜ್ಞೋ ದಶರಥಸ್ಯ ಹಿ ।
ಯದೋರ್ವಂಶಸ್ಯ ಸೇವಾರ್ಥಂ ದೇವಕೀ ನಾಮ ವಿಶ್ರುತಾ　　॥ ೧೧ ॥

---

೭. ಸಾಧುಗಳನ್ನು ಕಾಪಾಡುವುದಕ್ಕೋಸ್ಕರಲೂ ದುಷ್ಟರನ್ನು ನಾಶ ಮಾಡುವುದಕ್ಕೋಸ್ಕರಲೂ ಧರ್ಮವನ್ನು ನೆಲಸುವಂತೆ ಮಾಡುವುದಕ್ಕೂ ನಾನು ನಿನ್ನ ಹೊಟ್ಟೆಯಲ್ಲಿ ಹುಟ್ಟುತ್ತೇನೆ.

೮-೧೦. ರುದ್ರನು ಹೇಳಿದನು–ಹೀಗೆಂದು ಹರಿಯು ವರವನ್ನು ಕೊಟ್ಟು ಅಂತರ್ಧಾನನಾದನು. ಈ ಸ್ವಾಯಂಭುವಮನುವು ರಘುವಿನ ವಂಶದಲ್ಲಿ ದಶರಥ ನೆಂಬ ಹೆಸರಿನಿಂದ ಹುಟ್ಟಿದನು. ಎರಡನೆಯ ಬಾರಿ ವೃಷ್ಣಿಗಳ ವಂಶದಲ್ಲಿ ವಸುದೇವನೆಂಬ ಹೆಸರಿನಿಂದ ಹುಟ್ಟಿದನು. ಮೂರನೆಯ ಬಾರಿ ಕಲಿಯುಗದಲ್ಲಿ ದೇವತೆಗಳ ಸಾವಿರ ವರ್ಷಗಳು ಕಳೆದಮೇಲೆ ಕೊನೆಯ ಪಾದದಲ್ಲಿ ಶಂಭಲವೆಂಬ ಗ್ರಾಮದಲ್ಲಿ ಒಬ್ಬ ಬ್ರಾಹ್ಮಣ ಮುಖ್ಯನಾಗಿ ಹುಟ್ಟುತ್ತಾನೆ.

೧೧-೧೨. ರಾಜನಾದ ದಶರಥನಿಗೆ ಕೌಸಲ್ಯೆಯು ಹೆಂಡತಿಯಾಗಿ ಆ ಸ್ವಾಮಿಗೆ ತಾಯಿಯಾದಳು. ಯದುವಿನ ವಂಶದಲ್ಲಿ ದೇವಕಿ ಎಂಬುವಳಾಗಿ ಹುಟ್ಟಿ

**ಹರಿಗುಪ್ತಸ್ಯ ವಿಪ್ರಸ್ಯ ಭಾರ್ಯಾ ದೇವಪ್ರಭಾ ಪುನಃ ।**
**ಏವಂ ಮಾತೃತ್ವಮಾಪನ್ನಾ ತ್ರೀಣಿ ಜನ್ಮಾನಿ ಶಾಂರ್ಗಿಣಃ ॥ ೧೨ ॥**

**ಪೂರ್ವಂ ರಾಮಸ್ಯ ಚರಿತಂ ವಕ್ಷ್ಯಾಮಿ ತವ ಸುವ್ರತೇ ।**
**ಯಸ್ಯ ಸ್ಮರಣಮಾತ್ರೇಣ ವಿಮುಕ್ತಿಃ ಪಾಪಿನಾಮಪಿ ॥ ೧೩ ॥**

**ಹಿರಣ್ಯಕಹಿರಣ್ಯಾಕ್ಷೌ ದ್ವಿತೀಯಂ ಜನ್ಮ ಸಂಶ್ರಿತೌ ।**
**ಕುಂಭಕರ್ಣದಶಗ್ರೀವಾವಜಾಯೇತಾಂ ಮಹಾಬಲೌ ॥ ೧೪ ॥**

**ಪುಲಸ್ತ್ಯಸ್ಯ ಸುತೋ ವಿಪ್ರೋ ವಿಶ್ರವಾ ನಾಮ ಧಾರ್ಮಿಕಃ ।**
**ತಸ್ಯ ಪತ್ನೀ ವಿಶಾಲಾಕ್ಷೀ ರಾಕ್ಷಸೇಂದ್ರಸುತಾನಘೇ ॥ ೧೫ ॥**

**ಸುಕೇಶೀತನಯಾ ಸಾ ಸ್ಯಾತ್ ಸುಮಾಲೇರ್ದಾನವಸ್ಯ ಚ ।**
**ಕೇಕಸೀ ನಾಮ ಕನ್ಯಾಸೀತ್ ತಸ್ಯ ಭಾರ್ಯಾ ದೃಢವ್ರತಾ ॥ ೧೬ ॥**

---

ಆ ಸ್ವಾಮಿಗೆ ತಾಯಿಯಾದಳು. ಶಂಭಲವೆಂಬ ಗ್ರಾಮದಲ್ಲಿ ಹರಿಗುಪ್ತನೆಂಬ ಬ್ರಾಹ್ಮಣನಿಗೆ ದೇವಪ್ರಭೆ ಎಂಬುವಳು ಹೆಂಡತಿಯಾಗುತ್ತಾಳೆ. ಆಗ ಆ ಸ್ವಾಮಿಗೆ ಅವಳು ತಾಯಿಯಾಗುತ್ತಾಳೆ. ಈ ಮೂರು ಜನರೂ ಮೂರು ಜನ್ಮದಲ್ಲಿಯೂ ಆ ಸ್ವಾಮಿಗೆ ತಾಯಿಯರಾದರು.

೧೩. ಎಲೈ ಪಾರ್ವತಿಯೇ ! ನಿನಗೆ ಮೊದಲು ರಾಮನ ಚರಿತ್ರೆಯನ್ನು ಹೇಳುತ್ತೇನೆ. ಆ ಸ್ವಾಮಿಯಾದ ರಾಮನ ಸ್ಮರಣಮಾತ್ರದಿಂದಲೇ ಪಾಪಿಗಳೂ ಕೂಡ ಮುಕ್ತಿಯನ್ನು ಹೊಂದುತ್ತಾರೆ.

೧೪. ಹಿಂದೆ ಶಾಪವನ್ನು ಹೊಂದಿದ ಜಯ ವಿಜಯರು ಹಿರಣ್ಯಕ, ಹಿರಣ್ಯಾಕ್ಷರಾಗಿ ಮೊದಲನೆಯ ಜನ್ಮವನ್ನು ಹೊಂದಿದ್ದರಷ್ಟೆ! ಅವರು ರಾವಣ ಕುಂಭಕರ್ಣರಾಗಿ ಎರಡನೆಯ ಜನ್ಮವನ್ನು ತಾಳಿದರು.

೧೫-೧೬. ಪುಲಸ್ತ್ಯ ಬ್ರಹ್ಮನಿಗೆ ವಿಶ್ರವಸ್ಸೆಂಬ ಮಗನಾದನು. ಅವನು ಬಹು ಧರ್ಮಿಷ್ಠನು. ಅವನಿಗೆ ಒಬ್ಬ ದಾನವನ ಮಗಳೇ ಹೆಂಡತಿಯಾದಳು. ಆಕೆಯ ಹೆಸರು ಕೇಕಸೀ ಎಂದು. ಈಕೆಯು ಸುಮಾಲೀ ಎಂಬ ದಾನವನಿಗೆ ಸುಕೇಶಿಯಲ್ಲಿ ಹುಟ್ಟಿದವಳು. ಇವಳು ರೂಪವತಿಯು. ಇವಳನ್ನೇ ಆ ವಿಶ್ರವಸ್ಸಿಗೆ ಕೊಟ್ಟು ಮದುವೆ ಮಾಡಿದರು.

ಕಾಮೋದ್ರಿಕ್ತಾ ತು ಸಾ ದೇವೀ ಸಂಧ್ಯಾಕಾಲೇ ಮಹಾಮುನಿಂ ।
ರಮಯಾಮಾಸ ತನ್ವಂಗೀ ಯಥೇಷ್ಟಂ ಶುಭದರ್ಶನಂ ॥ ೧೭ ॥

ಸಂಧ್ಯಾಂಶತ್ವಾತ್ ತಮೋದ್ರಿಕ್ತೌ ತಸ್ಯಾಂ ಜಾತೌ ಮಹಾಬಲೌ ।
ರಾವಣಃ ಕುಂಭಕರ್ಣಶ್ಚ ರಾಕ್ಷಸೌ ಲೋಕವಿಶ್ರುತೌ ॥ ೧೮ ॥

ಕನ್ಯಾ ಶೂರ್ಪಣಖಾ ನಾಮ ಜಾತಾತಿವಿಕೃತಾನನಾ ।
ಕಸ್ಯ ಚಿತ್ವಥ ಕಾಲಸ್ಯ ತಸ್ಯಾಂ ಜಾತೋ ವಿಭೀಷಣಃ ॥ ೧೯ ॥

ಸುಶೀಲೋ ಭಗವದ್ಭಕ್ತಃ ಸತ್ಯವಾನ್ ಧರ್ಮವಾನ್ ಶುಚಿಃ ।
ರಾವಣಃ ಕುಂಭಕರ್ಣಶ್ಚ ಹಿಮವತ್ಪರ್ವತೋತ್ತಮೇ ॥ ೨೦ ॥

ಮಹೋಗ್ರತಪಸಾ ಮಾಂ ವೈ ಪೂಜಯಾಮಾಸತುರ್ಭೃಶಂ ।
ರಾವಣಸ್ತ್ವಥ ದುಷ್ಟಾತ್ಮಾ ಸ್ವಶಿರಃಕಮಲೈಶ್ಶುಭೈಃ ॥ ೨೧ ॥

---

೧೭. ಆಕೆಗೆ ಒಂದುಸಾರಿ ಕಾಮವು ಹೆಚ್ಚಿ ಸಂಧ್ಯಾಕಾಲದ ಸಮಯದಲ್ಲಿ ಆ ವಿಶ್ರವಸ್ಸು ಮುನಿಯೊಡನೆ ಯಥೇಷ್ಟವಾಗಿ ರಮಿಸಿದಳು.

೧೮. ಅವಳು ರಮಿಸಿದಾಗ ಸಂಧ್ಯಾಕಾಲವಾಗಿದ್ದು ತಮಸ್ಸಿನ ಅಂಶವು ಹೆಚ್ಚಾಗಿದ್ದಿತು. ಆದರಿಂದ ಬಲಿಷ್ಠರಾದ ರಾವಣಕುಂಭಕರ್ಣರು ಹುಟ್ಟಿದರು. ಅವರು ಲೋಕ ವಿಖ್ಯಾತರು.

೧೯. ಅನಂತರ ಶೂರ್ಪಣಖೆ ಎಂಬ ವಿಕಾರವಾದ ಒಬ್ಬ ಮಗಳು ಹುಟ್ಟಿದಳು. ಆದಾದ ಕೆಲವು ಕಾಲದಮೇಲೆ ಆ ಕೇಕಸಿಯಲ್ಲಿ ವಿಭೀಷಣನೆಂಬ ಮಗನು ಹುಟ್ಟಿದನು.

೨೦-೨೭. ಅವನು ಒಳ್ಳೆಯ ಶೀಲಸ್ವಭಾವವುಳ್ಳವನಾಗಿಯೂ ಭಗವದ್ಭಕ್ತನಾಗಿಯೂ ಇದ್ದನು. ರಾವಣ ಕುಂಭಕರ್ಣರು ಹಿಮವತ್ಪರ್ವತದಲ್ಲಿ ಉಗ್ರವಾದ ತಪಸ್ಸಿನಿಂದ ನನ್ನನ್ನು ಪೂಜಿಸಿ ಸಂತೋಷಪಡಿಸಿದರು. ಆ ರಾವಣನು ತನ್ನ ತಲೆಗಳನ್ನು ಕತ್ತರಿಸಿ ಆ ತಲೆಗಳೆಂಬ ಕಮಲಗಳಿಂದಲೇ ನನ್ನನ್ನು ಕ್ರೂರಮಾರ್ಗದಿಂದ

ಪೂಜಯಾಮಾಸ ಮಾಂ ದೇವಿ ದಾರುಣೇನ ಚ ಕರ್ಮಣಾ ।
ತತಸ್ತಮಬ್ರವಂ ಸುಭ್ರೂಃ ಪ್ರಹೃಷ್ಟೇನಾಂತರಾತ್ಮನಾ ॥ ೨೨ ॥

ವರಂ ವೃಣೀಷ್ವ ಮೇ ವತ್ಸ ಯತ್ತೇ ಮನಸಿ ವರ್ತತೇ ।
ತತಃ ಪ್ರೋವಾಚ ದುಷ್ಟಾತ್ಮಾ ದೇವದಾನವರಕ್ಷಸಾಂ ॥ ೨೩ ॥

ಅವಧ್ಯತ್ವಂ ಪ್ರದೇಹೀತಿ ಸರ್ವಲೋಕಜಿಗೀಷಯಾ ।
ತತೋಽಹಂ ದತ್ತವಾನಸ್ಮೈ ರಾಕ್ಷಸಾಯ ದುರಾತ್ಮನೇ ॥ ೨೪ ॥

ದೇವದಾನವಯಕ್ಷಾಣಾಮವಧ್ಯತ್ವಂ ವರಾನನೇ ।
ರಾಕ್ಷಸೋಽಸೌ ಮಹಾವೀರ್ಯೋ ವರದಾನಾತ್ತು ಗರ್ವಿತಃ ॥ ೨೫ ॥

ತ್ರೀಂಲ್ಲೋಕಾನ್ ಪೀಡಯಾಮಾಸ ದೇವದಾನವರಾಕ್ಷಸಾನ್ ।
ತೇನ ಸಂಬಾಧ್ಯಮಾನಾಶ್ಚ ದೇವಬ್ರಹ್ಮಪುರೋಗಮಾಃ ॥ ೨೬ ॥

ಭಯಾರ್ತಾಶ್ಶರಣಂ ಜಗ್ಮುಃ ಈಶ್ವರಂ ಕಮಲಾಪತಿಂ ।
ಜ್ಞಾತ್ವಾಥ ವೇದನಾಂ ತೇಷಾಮುಪಾಯಂ ಚ ಸನಾತನಃ ॥
ಉವಾಚ ತ್ರಿದಶಾನ್ ಸರ್ವಾನ್ ಬ್ರಹ್ಮರುದ್ರಪುರೋಗಮಾನ್ ॥ ೨೭ ॥

---

ಪೂಜಿಸಿದನು. ಅನಂತರ ಅವನ ತಪಸ್ಸಿಗೂ ಪೂಜೆಗೂ ಸಂತೋಷಪಟ್ಟು ಅವನನ್ನು ಕುರಿತು ಇಂತೆಂದು ಹೇಳಿದೆನು. ಎಲೈ ವತ್ಸನೆ ! ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ. ಎನ್ನಲು ಅನಂತರ ಆ ದುಷ್ಟನು ಸರ್ವಲೋಕವನ್ನೂ ಜಯಿಸಬೇಕೆಂಬ ಇಚ್ಛೆಯಿಂದ ದೇವ ದಾನವ ರಾಕ್ಷಸರಿಂದ ಅವಧ್ಯತ್ವವನ್ನು ಕೇಳಿಕೊಂಡನು. ಅನಂತರ ದುರಾತ್ಮನಾದ ರಾಕ್ಷಸನಿಗೆ ದೇವದಾನವಯಕ್ಷರಿಂದ ಅವಧ್ಯತ್ವವನ್ನು ಕೊಟ್ಟೆನು. ಆ ಮಹಾವೀರ್ಯನಾದ ರಾಕ್ಷಸನು ಈ ವರದಾನದಿಂದ ಗರ್ವಿತನಾಗಿ ಮೂರು ಲೋಕವನ್ನೂ ಪೀಡಿಸುತ್ತಾ ಬಂದನು. ಆ ರಾಕ್ಷಸನಿಂದ ತೊಂದರೆಪಡುತ್ತಿರುವ ಬ್ರಹ್ಮನೇ, ಮುಂದಾಳಾದ ದೇವತೆಗಳು ಭಯಗೊಂಡವರಾಗಿ ಕಮಲಾಪತಿಯಾದ ವಿಷ್ಣುವನ್ನು ಶರಣು ಹೊಂದಿದರು. ಆಗ ಸ್ವಾಮಿಯು ಆ ದೇವಾದಿಗಳ ತೊಂದರೆಯನ್ನು ತಿಳಿದುಕೊಂಡು ಅದಕ್ಕೆ ಉಪಾಯವನ್ನು ತಿಳಿದು ಬ್ರಹ್ಮ, ರುದ್ರರೇ ಮುಂತಾದ ದೇವತೆಗಳನ್ನು ಕುರಿತು ಇಂತೆಂದನು.

॥ ಭಗವಾನುವಾಚ ॥

ರಾಜ್ಞೋ ದಶರಥಸ್ಯಾಹಮುತ್ಪತ್ಸ್ಯಾಮಿ ರಘೋಃ ಕುಲೇ ।
ವಧಿಷ್ಯಾಮಿ ದುರಾತ್ಮಾನಂ ರಾವಣಂ ಸಹಬಾಂಧವಂ ॥ ೨೮ ॥

ಮಾನುಷಂ ವಪುರಾಸ್ಥಾಯ ಹನ್ಮಿ ದೈವತಕಂಟಕಂ ।
ಬ್ರಹ್ಮಶಾಪಾದ್ಭವಂತೋಽಪಿ ವಾನರತ್ವಮುಪಾಗತಾಃ ॥
ಕುರುಧ್ವಂ ಮಮ ಸಾಹಾಯ್ಯಂ ಗಂಧರ್ವಾಪ್ಸರಸೋತ್ತಮಾಃ ॥ ೨೯ ॥

॥ ರುದ್ರ ಉವಾಚ ॥

ಇತ್ಯುಕ್ತಾ ದೇವತಾಸ್ಸರ್ವಾ ದೇವದೇವೇನ ವಿಷ್ಣುನಾ ।
ವಾನರತ್ವಮುಪಾಗಮ್ಯ ಜಜ್ಞಿರೇ ಪೃಥಿವೀತಲೇ ॥ ೩೦ ॥

ಭಾರ್ಗವೇಣ ಪ್ರದತ್ತಾ ತು ಮಹೀ ಸಾಗರಮೇಖಲಾ ।
ದತ್ತಾ ಮಹರ್ಷಿಭಿಃ ಪೂರ್ವಂ ರಘೂಣಾಂ ಸುಮಹಾತ್ಮನಾಂ ॥ ೩೧ ॥

---

೨೮. ಭಗವಂತನು ಹೇಳಿದನು—ರಘುಕುಲದಲ್ಲಿ ರಾಜನಾದ ದಶರಥನಿಗೆ ಮಗನಾಗಿ ಹುಟ್ಟಿ ದುಷ್ಟನಾದ ರಾವಣನನ್ನು ಬಾಂಧವರೊಡನೆ ಕೊಲ್ಲುತ್ತೇನೆ.

೨೯. ಮನುಷ್ಯನ ಶರೀರವನ್ನು ಹೊಂದಿ ದೇವತೆಗಳಿಗೆ ಕಂಟಕಸ್ವರೂಪನಾದ ಆ ರಾಕ್ಷಸನನ್ನು ಕೊಲ್ಲುತ್ತೇನೆ. ನೀವೂ ಕೂಡ ಬ್ರಹ್ಮನ ಶಾಪದಿಂದ ಕಪಿಗಳಾಗಿ ಹುಟ್ಟಿ ನನಗೆ ಸಹಾಯಮಾಡಿರಿ.

೩೦. ರುದ್ರನು ಹೇಳಿದನು—ದೇವದೇವನಾದ ವಿಷ್ಣುವು ಇಂತೆಂದು ಹೇಳಲು ಆ ದೇವತೆಗಳೆಲ್ಲರೂ ಅಂತೆಯೇ ವಿಷ್ಣುವಿನ ಸಹಾಯಕ್ಕೋಸ್ಕರ ಭೂಮಿಯಲ್ಲಿ ಕಪಿಗಳಾಗಿ ಹುಟ್ಟಿದರು.

೩೧-೩೨. ಭಾರ್ಗವರಾಮನು ಹಿಂದೆ ಯಾಗಮಾಡಿದಾಗ ಭೂಮಿಯನ್ನು ಬ್ರಾಹ್ಮಣರಿಗೆ ದಾನಮಾಡಿದನಷ್ಟೆ! ಆ ಬ್ರಾಹ್ಮಣರು ತಮಗೆ ಆಳಲು ಸಾಧ್ಯವಾಗದೆ ಅದನ್ನು ರಘುವಂಶದವರಿಗೆ ಕೊಟ್ಟರು. ಆ ರಾಜ್ಯವನ್ನು

ವೈವಸ್ವತಮನೋಃ ಪುತ್ರೋ ರಾಜ್ಞಾಂ ಶ್ರೇಷ್ಠೋ ಮಹಾಬಲಃ |
ಇಕ್ಷ್ವಾಕುರಿತಿ ವಿಖ್ಯಾತಃ ಸರ್ವಧರ್ಮವಿದಾಂ ವರಃ ॥ ೩೨ ॥

ತದನ್ವಯೇ ಮಹಾತೇಜಾಃ ರಾಜಾ ದಶರಥೋ ಬಲೀ ।
ಅಜಸ್ಯ ನೃಪತೇಃ ಪುತ್ರಃ ಸತ್ಯವಾನ್ ಶೀಲವಾನ್ ಶುಚಿಃ ॥ ೩೩ ॥

ಸ ರಾಜಾ ಪೃಥಿವೀಂ ಸರ್ವಾಂ ಪಾಲಯಾಮಾಸ ವೀರ್ಯತಃ ।
ರಾಜ್ಯೇಷು ಸ್ಥಾಪಯಾಮಾಸ ಸರ್ವಾನ್ ಪಾರ್ಥಿವಸತ್ತಮಾನ್ ॥ ೩೪ ॥

ಕೋಶಲಸ್ಯ ನೃಪಸ್ಯಾಥ ಪುತ್ರೀ ಸರ್ವಾಂಗಶೋಭನಾ ।
ಕೋಸಲ್ಯಾ ನಾಮ ತಾಂ ಕನ್ಯಾಮುಪಯೇಮೇ ಸ ಪಾರ್ಥಿವಃ ॥ ೩೫ ॥

ಮಾಗಧಸ್ಯ ನೃಪಸ್ಯಾಥ ತನಯಾ ಚ ಶುಚಿಸ್ಮಿತಾ ।
ಸುಮಿತ್ರಾ ನಾಮ ನಾಮ್ನಾ ಚ ದ್ವಿತೀಯಾ ತಸ್ಯ ಭಾಮಿನೀ ॥ ೩೬ ॥

---

ಆಳುತ್ತಿರುವವರಲ್ಲಿ ವೈವಸ್ವತಮನುವಿನ ಕುಲದಲ್ಲಿ ಹುಟ್ಟಿದ ಇಕ್ಷ್ವಾಕುವೆಂಬ ರಾಜನು ಬಹು ಬಲಿಷ್ಠನಾಗಿಯೂ ಧರ್ಮಿಷ್ಠನಾಗಿಯೂ ಇದ್ದನು.

೩೩. ಆ ಇಕ್ಷ್ವಾಕುವಿನ ಕುಲದಲ್ಲಿ ದಶರಥನೆಂಬವನು ಹುಟ್ಟಿ ರಾಜನಾದನು. ಅವನು ಬಲಿಷ್ಠನು, ಅಜನ ಮಗನು, ಸತ್ಯವಂತನು. ಶೀಲವಂತನು ಶುಚಿಯು.

೩೪. ಆ ದಶರಥನೆಂಬ ರಾಜನು ಭೂಮಿಯನ್ನು ಬಹು ಪರಾಕ್ರಮದಿಂದ ಆಳುತ್ತಿದ್ದನು. ಮತ್ತು ಎಲ್ಲಾ ರಾಜರನ್ನೂ ಕೂಡ ದರ್ಪದಿಂದ ಆಳುತ್ತಿದ್ದನು. ಅವರು ನ್ಯಾಯವನ್ನು ಬಿಟ್ಟು ಹೋಗದಂತೆಯೂ ಅವರವರ ರಾಜ್ಯವನ್ನು ಸರಿಯಾಗಿ ಆಳುವಂತೆಯೂ ನೋಡಿಕೊಳ್ಳುತ್ತಿದ್ದನು.

೩೫. ಕೋಸಲರಾಜನಿಗೆ ಸುಂದರಿಯಾದ ಒಬ್ಬ ಮಗಳಿದ್ದಳು. ಅವಳ ಹೆಸರು ಕೌಸಲ್ಯೆಯು. ಅವಳನ್ನು ಆ ದಶಥನು ಮದುವೆಯಾದನು.

೩೬–೩೭. ಮಗಧ ದೇಶದ ದೊರೆಗೆ ಸುಮಿತ್ರೆಯೆಂಬುವಳು ಒಬ್ಬ ಮಗಳಿದ್ದಳು. ಅವಳನ್ನು ಈ ದಶರಥನು ಮದುವೆಯಾದನು. ಆಕೆಯು ದಶರಥನ

ತೃತೀಯಾ ಕೇಕಯಸ್ಯಾಥ ನೃಪತೇರ್ದುಹಿತಾ ತಥಾ ।
ಭಾರ್ಯಾಭೂತ್ಪದ್ಮಪತ್ರಾಕ್ಷೀ ಕೈಕೇಯೀ ನಾಮ ನಾಮತಃ ॥ ೩೭ ॥

ತಾಭಿಶ್ಚ ರಾಜಾ ಭಾರ್ಯಾಭಿಸ್ತಿಸೃಭಿರ್ಧರ್ಮಸಂಯುತಃ ।
ರಮಯಾಮಾಸ ಕಾಕುತ್‌ಸ್ಥಃ ಪೃಥಿವೀಂ ಚಾನುಪಾಲಯನ್ ॥ ೩೮ ॥

ಅಯೋಧ್ಯಾ ನಾಮ ನಗರೀ ಸರಯೂತೀರಸಂಸ್ಥಿತಾ ।
ಸರ್ವರತ್ನಸುಸಂಪೂರ್ಣಾ ಧನಧಾನ್ಯಸಮಾಕುಲಾ ॥ ೩೯ ॥

ಪ್ರಾಕಾರಗೋಪುರೈರ್ಜುಷ್ಟಾ ಹೇಮಪ್ರಾಕಾರಸಂಕುಲಾ ।
ಉತ್ತಮೈರ್ನಾಗತುರಗೈರ್ಮಹೇಂದ್ರಸ್ಯ ಯಥಾ ಪುರೀ ॥ ೪೦ ॥

ತಸ್ಯಾಂ ರಾಜಾ ಸ ಧರ್ಮಾತ್ಮಾ ಉವಾಸ ಮುನಿಸತ್ತಮೈಃ ।
ಪುರೋಹಿತೇನ ವಿಪ್ರೇಣ ವಸಿಷ್ಠೇನ ಮಹಾತ್ಮನಾ ॥ ೪೧ ॥

ರಾಜ್ಯಂ ಚ ಕಾರಯಾಮಾಸ ಸರ್ವಂ ನಿಹತಕಂಟಕಂ ।
ಯಸ್ಯಾಮುತ್ಪತ್ಸ್ಯತೇ ತಸ್ಯಾಂ ಭಗವಾನ್ ಪುರುಷೋತ್ತಮಃ ॥ ೪೨ ॥

---

ಎರಡನೆಯ ಪತ್ನಿಯಾದಳು. ಕೇಕಯರಾಜನಿಗೆ ಒಬ್ಬ ಸುಂದರಿಯಾದ ಕೈಕೇಯಿ ಎಂಬ ಮಗಳಿದ್ದಳು. ಆಕೆಯು ಆ ದಶರಥನಿಗೆ ಮೂರನೆಯ ಪತ್ನಿಯಾದಳು.

೩೮. ಆ ದಶರಥನು ಆ ಮೂವರು ಹೆಂಡಿರೊಡನೆಯೂ ಸುಖಿಸುತ್ತಾ ಧರ್ಮದಿಂದ ರಾಜ್ಯವಾಳುತ್ತಿದ್ದನು.

೩೯–೪೦. ಸರಯೂನದಿಯ ದಡದಲ್ಲಿ ಅಯೋಧ್ಯೆಯೆಂಬ ಪಟ್ಟಣವೊಂದಿರುವುದು. ಅದು ಸರ್ವ ರತ್ನಗಳಿಂದಲೂ ಪೂರ್ಣವಾಗಿದೆ. ಧನಧಾನ್ಯಗಳಿಂದ ಕೂಡಿದೆ. ಸುತ್ತಲೂ ಕೋಟೆ ಹೆಬ್ಬಾಗಿಲು ಇವುಗಳಿಂದ ಕೂಡಿದೆ. ಉತ್ತಮವಾದ ಆನೆ ಕುದುರೆಗಳಿಂದ ಕೂಡಿದೆ. ಮಹೇಂದ್ರನ ಪಟ್ಟಣವಂತೆ ಶೋಭಿಸುತ್ತಿದೆ.

೪೧-೪೪ ಆ ಪಟ್ಟಣದಲ್ಲಿ ರಾಜನಾದ ದಶರಥನು ಧರ್ಮದಿಂದ ರಾಜ್ಯವಾಳುತ್ತಾ ಮುನಿಗಳೊಡನೆ ಇದ್ದನು. ಮಹಾತ್ಮನಾದ ವಸಿಷ್ಠನು ಅವನಿಗೆ ಪುರೋಹಿತನಾಗಿದ್ದನು. ಅವನ ಅನುಮತಿಯಂತೆ ರಾಜ್ಯವಾಳುತ್ತಾ ಶತ್ರುಗಳನ್ನು ಜಯಿಸಿ ಸುಖವಾಗಿದ್ದನು. ಆ ಪಟ್ಟಣದಲ್ಲಿ ಭಗವಂತನಾದ ಪುರುಷೋತ್ತಮನು

ತಸ್ಮಾತ್ತು ನಗರೀ ಪುಣ್ಯಾ ಸಾಪ್ಯಯೋಧ್ಯೇತಿ ಕೀರ್ತಿತಾ ।
ನಗರಸ್ಯ ಪರಂ ಧಾಮ್ನೋ ನಾಮ ತಸ್ಯಾಪ್ಯಭೂಚ್ಛುಭೇ ॥ ೪೩ ॥

ಯತ್ರಾಸ್ತೇ ಭಗವಾನ್ ವಿಷ್ಣುಃ ತದೇವ ಪರಮಂ ಪದಂ ।
ತತ್ರ ಸರ್ವೋ ಭವೇನ್ಮೋಕ್ಷಃ ಸರ್ವಕರ್ಮನಿಕೃಂತನಃ ॥ ೪೪ ॥

ಜಾತೇ ತತ್ರ ಮಹಾವಿಷ್ಣೌ ನರಾಃ ಸರ್ವೇ ಮುದಂ ಯಯುಃ ।
ಸ ರಾಜಾ ಪೃಥಿವೀಂ ಸರ್ವಾಂ ಪಾಲಯಿತ್ವಾ ಶುಭಾನನೇ ॥ ೪೫ ॥

ಅಯಜದ್ವೈಷ್ಣವೇಷ್ಟ್ಯಾ ಚ ಪುತ್ರಾರ್ಥೀ ಹರಿಮಚ್ಯುತಂ ।
ತೇನ ಸಂಪೂಜಿತಃ ಶ್ರೀಶೋ ರಾಜ್ಞಾ ಸರ್ವಗತೋ ಹರಿಃ ॥ ೪೬ ॥

ವೈಷ್ಣವೇನ ತು ಯಜ್ಞೇನ ವರದಃ ಪ್ರಾಹ ಕೇಶವಃ ॥
ತಸ್ಮಿನ್ನಾವಿರಭೂದಗ್ನೌ ಯಜ್ಞರೂಪೋ ಹರಿಸ್ತದಾ ॥ ೪೭ ॥

---

ಹುಟ್ಟುವುದರಿಂದ ಆ ನಗರಿಯು ಪುಣ್ಯವಾದುದು. ಯುದ್ಧಮಾಡಿ ಕಸಿದು ಕೊಳ್ಳಲು ಆಗದಿರುವುದರಿಂದಲೇ ಅದು ಅಯೋಧ್ಯೆಯೆಂಬ ಹೆಸರನ್ನು ಹೊಂದಿತು. ಅದರಿಂದಲೇ ಪರಂಧಾಮವಾದ ಆ ಪಟ್ಟಣಕ್ಕೆ ಶುಭವಾದ ಈ ಹೆಸರು ಬಂದಿತು.

೪೪. ಭಗವಂತನಾದ ವಿಷ್ಣುವು ಎಲ್ಲಿರುವನೋ ಅದೇನೇ ಪರಮಪದವು. ಅಲ್ಲಿರುವುದೆಲ್ಲವೂ ಮೋಕ್ಷವೇ. ಸರ್ವಕರ್ಮಗಳನ್ನೂ ಕಳೆಯುತ್ತವೆ.

೪೫–೪೬. ಆ ಊರಿನಲ್ಲಿ ಆ ಮಹಾವಿಷ್ಣುವು ಹುಟ್ಟುತ್ತಲೂ ಎಲ್ಲರೂ ಸಂತೋಷಗೊಂಡರು. ಆ ದಶರಥನು ಭೂಮಿಯೆಲ್ಲವನ್ನೂ ಧರ್ಮದಿಂದ ಕಾಪಾಡಿಕೊಂಡು ಹರಿಯನ್ನು ಕುರಿತು ಪುತ್ರಕಾಮೇಷ್ಟಿಯನ್ನು ಮಾಡಿದನು. ಆ ಯಾಗದಿಂದ ಸರ್ವಗತನಾದ ಶ್ರೀಶನನ್ನು ತೃಪ್ತಿಪಡಿಸಿದನು.

೪೭–೪೮ ಆ ಪುತ್ರಕಾಮೇಷ್ಟಿಯಾಗದಿಂದ ಸಂತೋಷಗೊಂಡ ಹರಿಯು ಆಗ ಕಾಣಿಸಿಕೊಂಡು ಇಂತೆಂದು ಹೇಳಿದನು. ಅವನು ಪುಟಕ್ಕೆ ಹಾಕಿದ

ಶುದ್ಧಜಾಂಬೂನದಪ್ರಖ್ಯಃ ಶಂಖಚಕ್ರಗದಾಧರಃ ।
ಶುಕ್ಲಾಂಬರಧರಃ ಶ್ರೀಮಾನ್ ಬಹುಭೂಷಣಭೂಷಿತಃ ॥ ೪೮ ॥

ಶ್ರೀವತ್ಸಕೌಸ್ತುಭೋರಸ್ಕೋ ವನಮಾಲಾವಿಭೂಷಿತಃ ।
ಪದ್ಮಪತ್ರವಿಶಾಲಾಕ್ಷಶ್ಚತುರ್ಬಾಹುರುದಾರಧೀಃ ॥ ೪೯ ॥

ಸವ್ಯಾಂಕಸ್ಥಶ್ರಿಯಾ ಸಾರ್ಧಮಾವಿರಭೂತ್ಪರಮೇಶ್ವರಃ ।
ವರದೋಽಸ್ಮೀತಿ ತಂ ಪ್ರಾಹ ರಾಜಾನಂ ಭಕ್ತವತ್ಸಲಃ ॥ ೫೦ ॥

ತಂ ದೃಷ್ಟ್ವಾ ಸರ್ವಲೋಕೇಶಂ ರಾಜಾ ಹರ್ಷಸಮಾಕುಲಃ ।
ವವಂದೇ ಭಾರ್ಯಯಾ ಸಾರ್ಧಂ ಪ್ರಹೃಷ್ಟೇನಾಂತರಾತ್ಮನಾ ॥ ೫೧ ॥

ಪ್ರಾಂಜಲಿಃ ಪ್ರಣತೋ ಭೂತ್ವಾ ಹರ್ಷಗದ್ಗದಯಾ ಗಿರಾ ।
ಪುತ್ರತ್ವಂ ಮೇ ಭಜೇತ್ಯಾಹ ದೇವದೇವಂ ಜನಾರ್ದನಂ ॥
ತತಃ ಪ್ರಸನ್ನೋ ಭಗವಾನ್ ಪ್ರಾಹ ರಾಜಾನಮಚ್ಯುತಃ ॥ ೫೨ ॥

---

ಚಿನ್ನದಂತೆ ಇದ್ದನು. ಶಂಖ, ಚಕ್ರಗಳನ್ನು ಧರಿಸಿದ್ದನು. ಬೆಳ್ಳಗಿರುವ ಬಟ್ಟೆಗಳನ್ನು ಧರಿಸಿದ್ದನು. ಬಹುವಾದ ಆಭರಣಗಳನ್ನು ತೊಟ್ಟಿದ್ದನು.

೪೯. ಎದೆಯಲ್ಲಿ ಶ್ರೀವತ್ಸವೆಂಬ ಮಚ್ಚೆಯೂ ಕೌಸ್ತುಭರತ್ನವೂ ಇದ್ದುವು. ಕೊರಳಿಗೆ ವನಮಾಲೆಯನ್ನು ಹಾಕಿಕೊಂಡಿದ್ದನು. ಪದ್ಮಪತ್ರದಂತೆ ವಿಶಾಲವಾದ ಕಣ್ಣುಗಳಿದ್ದುವು. ನಾಲ್ಕು ತೋಳುಗಳಿಂದ ಕೂಡಿದ್ದನು.

೫೦. ಎಡಗಡೆಯಲ್ಲಿ ಲಕ್ಷ್ಮೀದೇವಿಯು ಇದ್ದಳು. ಆ ರೀತಿಯಾಗಿ ಕಾಣಿಸಿಕೊಂಡು ಭಕ್ತವತ್ಸಲನಾದ ಆ ಸ್ವಾಮಿಯು ವರವನ್ನು ಕೊಡಲು ಬಂದಿದ್ದೇನೆ ಎಂದನು.

೫೧. ಆ ರಾಜನಾದ ದಶರಥನು ಅವನನ್ನು ನೋಡಿ ಸಂತೋಷಪಟ್ಟು ಹೆಂಡತಿಯೊಡನೆ ನಮಸ್ಕರಿಸಿದನು.

೫೨. ಈ ರೀತಿಯಾಗಿ ನಮಸ್ಕರಿಸಿ ಕೈಮುಗಿದುಕೊಂಡು ಹರ್ಷದಿಂದ ಎಲೈ ಹರಿಯೇ! ನನಗೆ ಮಗನಾಗಿ ಹುಟ್ಟು ಎಂದನು. ಆದಕ್ಕೆ ಪ್ರಸನ್ನನಾದ ಆ ಸ್ವಾಮಿಯು ಸಂತೋಷದಿಂದ ಇಂತೆಂದನು.

॥ ವಿಷ್ಣುರುವಾಚ ॥

ಉತ್ಪತ್ಸ್ಯೇಽಹಂ ನೃಪಶ್ರೇಷ್ಠ ದೇವಲೋಕಹಿತಾಯ ವೈ ।
ಪರಿತ್ರಾಣಾಯ ಸಾಧೂನಾಂ ರಾಕ್ಷಸಾನಾಂ ವಧಾಯ ಚ ॥
ಮುಕ್ತಿಂ ಪ್ರದಾತುಂ ಲೋಕಾನಾಂ ಧರ್ಮಸಂಸ್ಥಾಪನಾಯ ಚ ॥ ೫೩ ॥

॥ ಮಹಾದೇವ ಉವಾಚ ॥

ಇತ್ಯುಕ್ತ್ವಾ ಪಾಯಸಂ ದಿವ್ಯಂ ಹೇಮಪಾತ್ರಸ್ಥಿತಂ ಶುಭಂ ।
ಲಕ್ಷ್ಮೀಹಸ್ತಸ್ಥಿತಂ ಶುಭ್ರಂ ಪಾರ್ಥಿವಾಯ ದದೌ ಹರಿಃ ॥ ೫೪ ॥

॥ ವಿಷ್ಣುರುವಾಚ ॥

ಇಮಂ ವೈ ಪಾಯಸಂ ರಾಜನ್ ಪತ್ನೀಭ್ಯಸ್ತವ ಸುವ್ರತ ।
ದೇಹಿ ತೇ ತನಯಾಸ್ತಾಸು ಉತ್ಪತ್ಸ್ಯಂತೇ ಮದಂಗಜಾಃ ॥ ೫೫ ॥

॥ ಮಹಾದೇವ ಉವಾಚ ॥

ಇತ್ಯುಕ್ತ್ವಾ ಮುನಿಭಿಸ್ಸರ್ವೈಸ್ಸ್ತೂಯಮಾನೋ ಜನಾರ್ದನಃ ।
ಸ್ವಾತ್ಮಾನಂ ದರ್ಶಯಿತ್ವಾಥ ತತ್ರೈವಾಂತರ್ದಧೇ ಹರಿಃ ॥ ೫೬ ॥

---

೫೩. ವಿಷ್ಣುವು ಹೇಳಿದನು—ಎಲೈ ರಾಜಶ್ರೇಷ್ಠನೆ! ನಾನು ದೇವಲೋಕದ ಹಿತಕ್ಕೋಸ್ಕರಲೂ ಸಾಧುಗಳನ್ನು ಕಾಪಾಡುವುದಕ್ಕೂ ರಾಕ್ಷಸರನ್ನು ಕೊಲ್ಲುವುದಕ್ಕೂ ಜನಗಳಿಗೆ ಮುಕ್ತಿಯನ್ನು ಕೊಡುವುದಕ್ಕೂ ಧರ್ಮವನ್ನು ಸ್ಥಾಪಿಸುವುದಕ್ಕೂ ಹುಟ್ಟುತ್ತೇನೆ.

೫೪. ಮಹಾದೇವನು ಹೇಳಿದನು—ಹೀಗೆಂದು ಹೇಳಿ ಆ ಹರಿಯು ಚಿನ್ನದ ಪಾತ್ರೆಯಲ್ಲಿ ಲಕ್ಷ್ಮಿಯು ಹಿಡಿದುಕೊಂಡಿದ್ದ ದಿವ್ಯವಾದ ಪಾಯಸವನ್ನು ತೆಗೆದು ಆ ರಾಜನಿಗೆ ಕೊಟ್ಟನು.

೫೫. ವಿಷ್ಣುವು ಹೇಳಿದನು---ಎಲೈ ರಾಜನೇ! ನೀನು ಈ ಪಾಯಸವನ್ನು ನಿನ್ನ ಹೆಂಡತಿಯರಿಗೆ ಕೊಡು. ಆ ಹೆಂಡಿರಲ್ಲಿ ನನ್ನ ಅವಯವಗಳ ರೂಪವಾದ ಮಕ್ಕಳು ಹುಟ್ಟುತ್ತಾರೆ.

೫೬. ಮಹಾದೇವನು ಹೇಳಿದನು–ಆ ರಾಜನಿಗೆ ಹೀಗೆ ಹೇಳಿ ಮುನಿಗಳು ಸ್ತುತಿಸುತ್ತಿರುವಂತೆಯೇ ತನ್ನ ದರ್ಶನವನ್ನು ಕೊಟ್ಟು ಅಂತರ್ಧಾನನಾದನು.

ಸ ರಾಜಾ ತತ್ರ ದೃಷ್ಟ್ವಾ ಚ ಪತ್ನೀಂ ಜ್ಯೇಷ್ಠಾಂ ಕನೀಯಸೀಂ ।
ವಿಭಜ್ಯ ಪಾಯಸಂ ದಿವ್ಯಂ ಪ್ರದದೌ ತು ಸಮಾಹಿತಃ ॥ ೫೭ ॥

ಏತಸ್ಮಿನ್ನಂತರೇ ಪತ್ನೀ ಸುಮಿತ್ರಾ ತಸ್ಯ ಮಧ್ಯಮಾ ।
ತತ್ಸಮೀಪಂ ಪ್ರಯಾತಾಶು ಪುತ್ರಕಾಮಾ ಸುಲೋಚನಾ ॥ ೫೮ ॥

ತಾಂ ದೃಷ್ಟ್ವಾ ತತ್ರ ಕೌಶಲ್ಯಾ ಕೈಕೇಯೀ ಚ ಸುಮಧ್ಯಮಾ ।
ಅರ್ಧಂ ಪ್ರದದತುಃ ಶೀಘ್ರಂ ತೇ ತಸ್ಯೈ ಪಾಯಸಂ ಸ್ವಕಂ ॥ ೫೯ ॥

ತತ್ಪ್ರಾಶ್ಯ ಪಾಯಸಂ ದಿವ್ಯಂ ರಾಜಪತ್ನ್ಯಃ ಸುಮಧ್ಯಮಾಃ ।
ಸಂಪನ್ನಗರ್ಭಾಸ್ಸರ್ವಾಸ್ತಾ ವಿರೇಜುಃ ಶುಭವರ್ಚಸಃ ॥ ೬೦ ॥

ತಾಸಾಂ ಸ್ವಪ್ನೇಷು ದೇವೇಶಃ ಪೀತವಾಸಾ ಜನಾರ್ದನಃ ।
ಶಂಖಚಕ್ರಗದಾಪಾಣಿರಾವಿರ್ಭೂತಸ್ತದಾ ಹರಿಃ ॥ ೬೧ ॥

---

೫೭. ಆ ಜಾಗದಲ್ಲಿ ಹಿರಿಯ ಮತ್ತು ಕಿರಿಯ ಹೆಂಡತಿಯರಿರಲು ಅವರಿಗೆ ಈ ಪಾಯಸವನ್ನು ಭಾಗಮಾಡಿಕೊಟ್ಟನು.

೫೮. ಇಷ್ಟರೊಳಗೆ ಮಧ್ಯದ ಹೆಂಡತಿಯಾದ ಸುಮಿತ್ರೆಯೂ ಕೂಡ ಮಕ್ಕಳಾಗಬೇಕೆಂಬ ಇಷ್ಟದಿಂದ ಆ ರಾಜನ ಬಳಿಗೆ ಹೋದಳು.

೫೯. ಆಕೆ ಬಂದುದನ್ನು ಆ ಕೌಸಲ್ಯೆ ಕೈಕೇಯಿಯರು ನೋಡಿ ತಮ್ಮ ತಮ್ಮ ಪಾಯಸದಲ್ಲಿ ಅರ್ಧ ಅರ್ಧವನ್ನು ತೆಗೆದು ಕೊಟ್ಟರು.

೬೦. ಆ ರಾಜನ ಹೆಂಡತಿಯರು ಆ ಪಾಯಸವನ್ನು ಕುಡಿದು ಗರ್ಭಿಣಿಯರಾಗಿ ಪ್ರಕಾಶಿಸಿದರು.

೬೧. ಅವರ ಸ್ವಪ್ನದಲ್ಲಿ ಜನಾರ್ದನನು ಶಂಖ ಚಕ್ರ ಗದಾಪಾಣಿಯಾಗಿ ಕಾಣಿಸಿಕೊಂಡನು.

ಅಥ ಕಾಲೇ ಮನೋರಮ್ಯೇ ಮಧುಮಾಸಿ ಶುಚಿಸ್ಮಿತೇ ।
ಶುಕ್ಲೇ ನವಮ್ಯಾಂ ವಿಮಲೇ ನಕ್ಷತ್ರೇ ದಿತಿದೈವತೇ ॥ ೬೨ ॥

ಮಧ್ಯಾಹ್ನಸಮಯೇ ಲಗ್ನೇ ಸರ್ವಗ್ರಹಶುಭಾನ್ವಿತೇ ।
ಕೌಸಲ್ಯಾ ಜನಯಾಮಾಸ ಪುತ್ರಂ ಲೋಕೇಶ್ವರಂ ಹರಿಂ ॥ ೬೩ ॥

ಇಂದೀವರದಳಶ್ಯಾಮಂ ಕೋಟಿಕಂದರ್ಪಸನ್ನಿಭಂ ।
ಪದ್ಮಪತ್ರವಿಶಾಲಾಕ್ಷಂ ಸರ್ವಾಭರಣಶೋಭಿತಂ ॥ ೬೪ ॥

ಶ್ರೀವತ್ಸಕೌಸ್ತುಭೋರಸ್ಕಂ ಸರ್ವಾಭರಣಭೂಷಿತಂ ।
ಉದ್ಯದ್ದಿನಕರಪ್ರಖ್ಯಕುಂಡಲಾಭ್ಯಾಂ ವಿರಾಜಿತಂ ॥ ೬೫ ॥

ಅನೇಕಸೂರ್ಯಸಂಕಾಶಂ ತೇಜಸಾ ಮಹತಾ ವೃತಂ ।
ಪರೇಶಸ್ಯ ತನೋ ರಮ್ಯಂ ದೀಪಾದುತ್ಪನ್ನದೀಪವತ್ ॥ ೬೬ ॥

---

೬೨-೬೩. ಹೀಗೆ ಅವರಿಗೆ ಮಾಸಗಳು ತುಂಬಲು ರಮ್ಯವಾಗಿರುವ ಚೈತ್ರ ಮಾಸದ ಶುದ್ಧ ನವಮಿಯು ಪುಷ್ಯ ನಕ್ಷತ್ರದಲ್ಲಿ ಮಧ್ಯಾಹ್ನ ಸಮಯದಲ್ಲಿ ಎಲ್ಲಾ ಗ್ರಹಗಳೂ ಸರಿಯಾಗಿರುವಾಗ ಶುಭಲಗ್ನದಲ್ಲಿ ಕೌಸಲ್ಯೆಯು ಲೋಕೇಶ್ವರನಾದ ಹರಿಯನ್ನು ಪುತ್ರನನ್ನಾಗಿ ಹೆತ್ತಳು.

೬೪-೬೬. ಆ ಸ್ವಾಮಿಯು ಇಂದೀವರದಳದಂತೆ ಶ್ಯಾಮವರ್ಣವುಳ್ಳವನಾಗಿದ್ದನು. ಕೋಟಿಜನ ಕಂದರ್ಪರಂತಿದ್ದನು. ಪದ್ಮಪತ್ರದಂತೆ ವಿಶಾಲವಾದ ಕಣ್ಣುಗಳಿದ್ದುವು ಎಲ್ಲಾ ಆಭರಣಗಳಿಂದಲೂ ಶೋಭಿಸುತ್ತಿದ್ದನು. ಶ್ರೀವತ್ಸವೆಂಬ ಮಚ್ಚೆ ಕೌಸ್ತುಭವೆಂಬ ಮಣಿಗಳು ಎದೆಯಮೇಲೆ ಪ್ರಕಾಶಿಸುತ್ತಿದ್ದುವು. ಎಲ್ಲಾ ಆಭರಣಗಳನ್ನೂ ತೊಟ್ಟಿದ್ದನು. ಉದಯಿಸುತ್ತಿರುವ ಸೂರ್ಯರಂತಿರುವ ಕರ್ಣಾಭರಣಗಳನ್ನು ಧರಿಸಿದ್ದನು. ಅನೇಕಜನ ಸೂರ್ಯರಂತೆ ಬೆಳಗುತ್ತಿದ್ದನು. ಬಹುವಾದ ತೇಜಸ್ಸನ್ನು ಹೊಂದಿದ್ದನು. ದೀಪದಿಂದ ಹುಟ್ಟಿದ ದೀಪದಂತೆ ಆ ಸ್ವಾಮಿಯ ದೇಹವು ಮನೋಹರವಾಗಿದ್ದಿತು.

ಈಶಾನಂ ಸರ್ವಲೋಕಾನಾಂ ಯೋಗಿಧ್ಯೇಯಂ ಸನಾತನಂ ।
ಸರ್ವೋಪನಿಷದಾಮರ್ಥಮನಂತಂ ಪರಮೇಶ್ವರಂ ॥ ೬೭ ॥

ಜಗತ್ಸರ್ಗಸ್ಥಿತಿಲಯಹೇತುಭೂತಮನಾಮಯಂ ।
ಶರಣ್ಯಂ ಸರ್ವಭೂತಾನಾಂ ಸರ್ವಭೂತಮಯಂ ಶುಭಂ ॥ ೬೮ ॥

ಸಮುತ್ಪನ್ನೇ ಜಗನ್ನಾಥೇ ದೇವದುಂದುಭಯೋ ದಿವಿ ।
ವಿನೇದುಃ ಪುಷ್ಪವರ್ಷಾಣಿ ವವೃಷುಃ ಸುರಸತ್ತಮಾಃ ॥ ೬೯ ॥

ಪ್ರಜಾಪತಿಮುಖಾ ದೇವಾ ವಿಮಾನಸ್ಥಾ ನಭಸ್ಥಲೇ ।
ತುಷ್ಟುವುರ್ಮುನಿಭಿಸ್ಸಾರ್ಧಂ ಹರ್ಷಪೂರ್ಣಾಂಗವಿಹ್ವಲಾಃ ॥ ೭೦ ॥

ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ।
ವವುಃ ಪುಣ್ಯಾಃ ಶಿವಾ ವಾತಾಃ ಸುಪ್ರಭೋಭೂದ್ದಿವಾಕರಃ ॥ ೭೧ ॥

---

೬೭–೬೮. ಸರ್ವಲೋಕಕ್ಕೂ ಈಶ್ವರನು. ಯೋಗಿಗಳು ಧ್ಯಾನಮಾಡಲು ಯೋಗ್ಯನು. ಸನಾತನನು. ಎಲ್ಲಾ ಉಪನಿಷತ್ತುಗಳಿಗೂ ಅರ್ಥರೂಪನಾದವನು. ಅಂತವಿಲ್ಲದವನು. ಪರಮೇಶ್ವರನು. ಜಗತ್ತಿನ ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣ ಭೂತನು. ನೀರೋಗನು. ಎಲ್ಲಾ ಲೋಕಗಳಿಗೂ ರಕ್ಷಕನು. ಸರ್ವಪ್ರಾಣಿಗಳ ರೂಪನು. ಶುಭನಾದವನು. ಈ ರೀತಿಯಾದ ಸ್ವಾಮಿಯನ್ನು ಹೆತ್ತಳು.

೬೯. ಈ ಜಗನ್ನಾಥನು ಹುಟ್ಟಲು ಆಕಾಶದಲ್ಲಿ ದೇವದುಂದುಭಿಗಳು ಮೊಳಗಿದುವು. ದೇವತೆಗಳು ಪುಷ್ಪವೃಷ್ಟಿಯನ್ನು ಮಾಡಿದರು

೭೦. ಬ್ರಹ್ಮನೇ ಮುಂತಾದ ದೇವತೆಗಳು ಅಂತರಿಕ್ಷದಲ್ಲಿದ್ದುಕೊಂಡು ಬಹುವಾದ ಸಂತೋಷದಿಂದ ಋಷಿಗಳೊಡನೆ ಸ್ತುತಿಸಿದರು.

೭೧. ಗಂಧರ್ವರು ಹಾಡಿದರು. ಅಪ್ಸರರು ಕುಣಿದರು. ಗಾಳಿಯು ನಿರ್ಮಲವಾಗಿ ಬೀಸಿತು. ಸೂರ್ಯನು ಚೆನ್ನಾಗಿ ಪ್ರಕಾಶಿಸಿದನು.

ಜಜ್ವಲುಶ್ಚಾಗ್ನಯಶ್ಶಾನ್ತಾ ವಿಮಲಾಶ್ಚ ದಿಶೋ ದಶ ।
ತತಸ್ಸ ರಾಜಾ ಹರ್ಷೇಣ ಪುತ್ರಂ ದೃಷ್ಟ್ವಾ ಸನಾತನಂ ॥ ೭೨ ॥

ಪುರೋಧಸಾ ವಸಿಷ್ಠೇನ ಜಾತಕರ್ಮ ತದಾಕರೋತ್ ।
ನಾಮ ಚಾಸ್ಯ ದದೌ ರಮ್ಯಂ ವಸಿಷ್ಠೋ ಭಗವಾಂಸ್ತದಾ ॥ ೭೩ ॥

ಶ್ರಿಯಃ ಕಮಲವಾಸಿನ್ಯಾ ರಮಣೋಽಯಂ ಮಹಾಪ್ರಭುಃ ।
ತಸ್ಮಾಚ್ಛ್ರೀರಾಮ ಇತ್ಯಸ್ಯ ನಾಮ ಸಿದ್ಧಂ ಪುರಾತನಂ ॥ ೭೪ ॥

ಸಹಸ್ರನಾಮ್ನಾಂ ಶ್ರೀಶಸ್ಯ ತುಲ್ಯಂ ಮುಕ್ತಿಪ್ರದಂ ನೃಣಾಂ ।
ವಿಷ್ಣುಮಾಸಿ ಸಮುತ್ಪನ್ನೋ ವಿಷ್ಣುರಿತ್ಯಭಿಧೀಯತೇ ॥ ೭೫ ॥

ಏವಂ ನಾಮಾಸ್ಯ ದತ್ವಾಥ ವಸಿಷ್ಠೋ ಭಗವಾನ್ ಋಷಿಃ ।
ಪರಿಣೀಯ ನಮಸ್ಕೃತ್ಯ ಸ್ತುತ್ವಾ ಸ್ತುತಿವರೇವ ಚ ॥ ೭೬ ॥

---

೭೨-೭೩. ಅಗ್ನಿಗಳು ಶಾಂತವಾಗಿ ಪ್ರಕಾಶಿಸುತ್ತಾ ಉರಿದುವು. ಹತ್ತು ದಿಕ್ಕುಗಳು ನಿರ್ಮಲವಾಗಿದ್ದುವು. ಆಗ ಈ ದಶರಥನು ಹರ್ಷದಿಂದ ಆ ಸನಾತನನಾದ ಮಗುವನ್ನು ನೋಡಿ ಸಂತೋಷದಿಂದ ಪುರೋಹಿತನಾದ ವಸಿಷ್ಠನಿಂದ ಜಾತಕರ್ಮವನ್ನು ಮಾಡಿಸಿ ಮನೋಹರವಾಗಿರುವ ಹೆಸರನ್ನು ಇಟ್ಟನು.

೭೪. ಈ ಮಹಾಪ್ರಭುವು ಕಮಲದಲ್ಲಿ ವಾಸಮಾಡುವ ಲಕ್ಷ್ಮಿಗೆ ರಮಣನಾದುದರಿಂದ ಶ್ರೀರಾಮ ಎಂಬ ಹಿಂದಿನ ಯೋಗರೂಢವಾದ ಹೆಸರನ್ನೇ ಇಟ್ಟರು.

೭೫. ಈ ಶ್ರೀರಾಮನು ಎಂಬ ನಾಮವು ಈ ಸ್ವಾಮಿಯ ಸಹಸ್ರನಾಮಗಳೊಳಗೆ ಮುಖ್ಯವಾದುದು. ಮತ್ತು ಆ ಸಹಸ್ರನಾಮಗಳಿಗೆ ಸಮವಾದುದು. ಮನುಷ್ಯರಿಗೆ ಮುಕ್ತಿಯನ್ನು ಕೊಡತಕ್ಕದ್ದು. ವಿಷ್ಣುಮಾಸವಾದ ಚೈತ್ರಮಾಸದಲ್ಲಿ ಹುಟ್ಟಿದುದರಿಂದ ವಿಷ್ಣುವೆನಿಸಿಕೊಂಡನು.

೭೬-೭೭. ಈ ರೀತಿಯಾಗಿ ಆ ಮಗುವಿಗೆ ಹೆಸರನ್ನು ಇಟ್ಟು ಪೂಜ್ಯನಾದ ವಸಿಷ್ಠನು ಆ ಸ್ವಾಮಿಗೆ ನಮಸ್ಕರಿಸಿ ಸ್ತುತಿಸಿ ಮಂಗಳಕ್ಕೋಸ್ಕರ

ಸಂಕೀರ್ತ್ಯ ನಾಮ ಸಾಹಸ್ರಂ ಮಂಗಳಾರ್ಥಂ ಮಹಾತ್ಮನಃ ।
ವಿನಿರ್ಯಯೌ ಮಹಾತೇಜಾಸ್ತಸ್ಮಾತ್ಪುಣ್ಯತಮಾದ್ಗೃಹಾತ್ ॥ ೭೭ ॥

ರಾಜಾಥ ವಿಪ್ರಮುಖ್ಯೇಭ್ಯೋ ದದೌ ಬಹುಧನಂ ಮುದಾ ।
ಗವಾಮಯುತದಾನಂ ಚ ಕಾರಯಾಮಾಸ ಧರ್ಮತಃ ॥ ೭೮ ॥

ಗ್ರಾಮಾಣಾಂ ಶತಸಾಹಸ್ರಂ ದದೌ ರಘುಕುಲೋತ್ತಮಃ ।
ವಸ್ತ್ರೈರಾಭರಣೈರ್ದಿವ್ಯೈರಸಂಖ್ಯೇಯೈರ್ಧನೈರಪಿ ॥ ೭೯ ॥

ವಿಷ್ಣೋಸ್ಸಂತುಷ್ಟಯೇ ತತ್ರ ತರ್ಪಯಾಮಾಸ ಭೂಸುರಾನ್ ।
ಕೌಸಲ್ಯಾ ಚ ಸುತಂ ದೃಷ್ಟ್ವಾ ರಾಮಂ ರಾಜೀವಲೋಚನಂ ॥ ೮೦ ॥

ಫುಲ್ಲಾರವಿಂದಹಸ್ತಾಭಂ ಪದ್ಮತುಲ್ಯಪದಾನ್ವಿತಂ ।
ತಸ್ಯ ಶ್ರೀಪಾದಕಮಲೇ ಹಸಾಬ್ಜೇ ಚ ವರಾನನೇ ॥ ೮೧ ॥

ಶಂಖಚಕ್ರಗದಾಪದ್ಮಧ್ವಜವಜ್ರಾದಿಚಿಹ್ನಿತೇ ।
ದೃಷ್ಟ್ವಾ ವಕ್ಷಸಿ ಶ್ರೀವತ್ಸಂ ಕೌಸ್ತುಭಂ ವನಮಾಲಯಾ ॥ ೮೨ ॥

---

ಸಹಸ್ರನಾಮಗಳನ್ನು ಪಠಿಸಿ ಆ ಪುಣ್ಯವಾದ ಮನೆಯಿಂದ ಹೊರಟು ಹೋದನು.

೭೮–೮೩. ರಾಜನಾದ ದಶರಥನು ಬ್ರಾಹ್ಮಣರಿಗೆ ಬಹುವಾದ ಧನವನ್ನು ದಾನ ಮಾಡಿದನು. ಹತ್ತುಸಾವಿರ ಗೋದಾನಗಳನ್ನು ಮಾಡಿದನು. ಲಕ್ಷಗ್ರಾಮಗಳನ್ನು ದಾನಮಾಡಿದನು. ವಸ್ತ್ರಗಳಿಂದಲೂ ಆಭರಣಗಳಿಂದಲೂ ಬಹುವಾದ ಧನಗಳಿಂದಲೂ ವಿಷ್ಣುವಿನ ತೃಪ್ತಿಗೋಸ್ಕರ ಬ್ರಾಹ್ಮಣರನ್ನು ತೃಪ್ತಿಪಡಿಸಿದನು. ಕೌಸಲ್ಯೆಯು ಆ ರಾಜೀವಲೋಚನನಾದ ರಾಮನನ್ನು ನೋಡಿದಳು. ಅರಳಿದ ಪದ್ಮಗಳಂತೆ ಕೈಗಳಿದ್ದುವು. ಕಾಲುಗಳು ಪದ್ಮಗಳಂತಿದ್ದುವು. ಅವನ ಕಾಲು ಕೈಗಳಲ್ಲಿ ಆಕೆಯು ಶಂಖ, ಚಕ್ರ, ಗದಾ, ಪದ್ಮ, ಧ್ವಜ, ವಜ್ರ ಮುಂತಾದ ಚಿಹ್ನೆಗಳನ್ನು ನೋಡಿದಳು. ಎದೆಯಲ್ಲಿ ಶ್ರೀ ವತ್ಸವೆಂಬ ಮಚ್ಚೆಯನ್ನು ನೋಡಿದಳು.

ತಸ್ಯಾಂಗೇ ಸಾ ಜಗತ್ಸರ್ವಂ ಸದೇವಾಸುರಮಾನುಷಂ ।
ಸ್ಮಿತವಕ್ತ್ರೇ ವಿಶಾಲಾಕ್ಷಿ ಭುವನಾನಿ ಚತುರ್ದಶ ॥ ೮೩ ॥

ನಿಶ್ವಾಸೇ ತಸ್ಯ ವೇದಾಂಶ್ಚ ಸೇತಿಹಾಸಾನ್ ಮಹಾತ್ಮನಃ ।
ದ್ವೀಪಾನಬ್ಧಿಗಿರೀಂಸ್ತಸ್ಯ ಜಘನೇ ವರವರ್ಣಿನಿ ॥ ೮೪ ॥

ನಾಭ್ಯಾಂ ಬ್ರಹ್ಮಶಿವೌ ತಸ್ಯ ಕರ್ಣಯೋಶ್ಚ ದಿಶಶ್ಶುಭಾಃ ।
ನೇತ್ರಯೋರ್ವಹ್ನಿಸೂರ್ಯೌ ಚ ಘ್ರಾಣೇ ವಾಯುಂ ಮಹಾಜವಂ ॥ ೮೫ ॥

ಸರ್ವೋಪನಿಷದಾಮರ್ಥಂ ದೃಷ್ಟ್ವಾ ತಸ್ಯ ವಿಭೂತಯಃ ।
ದೃಷ್ಟ್ವಾ ಭೀತಾ ವರಾರೋಹಾ ಪ್ರಣಮ್ಯ ಚ ಪುನಃ ಪುನಃ ॥ ೮೬ ॥

ಹರ್ಷಾಶ್ರುಪೂರ್ಣನಯನಾ ಪ್ರಾಂಜಲಿರ್ವಾಕ್ಯಮಬ್ರವೀತ್ । ॥ ೮೭ ॥

---

ಕೌಸ್ತುಭ ವನಮಾಲೆಗಳನ್ನೂ ನೋಡಿದಳು. ಅನಂತರ ಅವನ ದೇಹದಲ್ಲಿ ಆಕೆಯು ದೇವತೆಗಳು, ಅಸುರರು, ಮನುಷ್ಯರು, ಇವರಿಂದ ಕೂಡಿದ ಜಗತ್ತನ್ನೇ ಕಂಡಳು. ಅವನು ನಗುತ್ತಿರುವಾಗ ಅವನ ಬಾಯಲ್ಲಿ ಹದಿನಾಲ್ಕು ಲೋಕಗಳನ್ನೂ ನೋಡಿದಳು.

೮೪. ಅವನ ನಿಟ್ಟುಸಿರಿನಲ್ಲಿ ವೇದಗಳನ್ನೂ ವೇದಾಂಗಗಳನ್ನೂ ಪುರಾಣಗಳನ್ನೂ ಕಂಡಳು. ಅವನ ಮುಂಡಿಯಲ್ಲಿ ದ್ವೀಪಗಳನ್ನೂ ಸಮುದ್ರ ಗಳನ್ನೂ ಬೆಟ್ಟಗಳನ್ನೂ ನೋಡಿದಳು.

೮೫-೮೭. ಹೊಕ್ಕಳಿನಲ್ಲಿ ಬ್ರಹ್ಮಶಿವರನ್ನು ನೋಡಿದಳು. ಕಿವಿಗಳಲ್ಲಿ ದಿಕ್ಕುಗಳನ್ನು ನೋಡಿದಳು. ಕಣ್ಣುಗಳಲ್ಲಿ ವಹ್ನಿಸೂರ್ಯರನ್ನು ನೋಡಿದಳು. ಮೂಗಿನಲ್ಲಿ ಮಹಾವೇಗವುಳ್ಳ ವಾಯುವನ್ನು ನೋಡಿದಳು. ಈ ರೀತಿಯಾಗಿ ಎಲ್ಲಾ ಉಪನಿಷತ್ತುಗಳಲ್ಲಿಯೂ ವರ್ಣಿಸಿರುವಂತೆ ಅವಕ್ಕೆ ಅರ್ಥರೂಪವಾದ ವಿಭೂತಿಯನ್ನು ನೋಡಿದಳು. ಈ ರೀತಿಯಾಗಿ ನೋಡಿ ಆ ಕೌಸಲ್ಯೆಯು ಹೆದರಿ ಬಾರಿ ಬಾರಿಗೂ ನಮಸ್ಕರಿಸಿದಳು. ಹರ್ಷದಿಂದ ಕಣ್ಣೀರು ಸುರಿಸುತ್ತ ಕೈಮುಗಿದುಕೊಂಡು ಇಂತೆಂದಳು.

॥ ಕೌಸಲ್ಯೋವಾಚ ॥

ಧನ್ಯಾಸ್ಮಿ ದೇವದೇವೇಶ ಲಬ್ಧ್ವಾ ತ್ವಾಂ ತನಯಂ ಪ್ರಭೋ ।
ಪ್ರಸೀದ ಮೇ ಜಗನ್ನಾಥ ಪುತ್ರಸ್ನೇಹಂ ಪ್ರದರ್ಶಯ ॥ ೮೮ ॥

॥ ಈಶ್ವರ ಉವಾಚ ॥

ಏವಮುಕ್ತೋ ಹೃಷೀಕೇಶೋ ಮಾತ್ರಾ ಸರ್ವಗತೋ ಹರಿಃ ।
ಮಾಯಾಮಾನುಷತಾಂ ಪ್ರಾಪ್ಯ ಶಿಶುಭಾವಾದ್ರುರೋದ ಸಃ ॥ ೮೯ ॥

ಅಥ ಪ್ರಮುದಿತಾ ದೇವೀ ಕೌಸಲ್ಯಾ ಶುಭಲಕ್ಷಣಂ ।
ಪುತ್ರಮಾಲಿಂಗ್ಯ ಹರ್ಷೇಣ ಸ್ತನಂ ಪ್ರಾದಾತ್ಸುಮಧ್ಯಮಾ ॥ ೯೦ ॥

ತಸ್ಯಾಃ ಸ್ತನಂ ಪಪೌ ದೇವೋ ಬಾಲಭಾವಾತ್ಸನಾತನಃ ।
ಉವಾಸ ಮಾತುರುತ್ಸಂಗೇ ಜಗದ್ಭರ್ತಾ ಮಹಾವಿಭುಃ ॥ ೯೧ ॥

---

೮೮. ಕೌಸಲ್ಯೆಯು ಹೇಳಿದಳು–ಎಲೈ ದೇವದೇವನೇ ! ನಿನ್ನನ್ನು ಮಗನನ್ನಾಗಿ ಹೊಂದಿ ಧನ್ಯಳಾದೆನು. ಎಲೈ ಜಗನ್ನಾಥನೆ ! ಪ್ರಸನ್ನನಾಗಿ ಪುತ್ರಸ್ನೇಹವನ್ನು ತೋರಿಸು.

೮೯. ಈಶ್ವರನು ಹೇಳಿದನು-ಸರ್ವಗತನಾದ ಹರಿಗೆ ತಾಯಿಯು ಹೀಗೆಂದು ಹೇಳಲು ಒಡನೆಯೇ ಮಾಯೆಯ ಮನುಷ್ಯನಾಗಿ ಮಗುವಾಗಿ ಮಗುವಿಗೆ ತಕ್ಕಂತೆ ಅಳಲು ಮೊದಲುಮಾಡಿದನು.

೯೦. ಆಮೇಲೆ ಕೌಸಲ್ಯೆಯು ಸಂತೋಷಗೊಂಡು ಶುಭಲಕ್ಷಣಗಳುಳ್ಳ ಮಗನನ್ನು ಆಲಿಂಗಿಸಿಕೊಂಡು ಹಾಲನ್ನು ಕೊಟ್ಟಳು.

೯೧. ಆ ಸನಾತನನಾದ ಸ್ವಾಮಿಯು ಬಾಲ ಭಾವದಿಂದ ಆಕೆಯ ಹಾಲನ್ನು ಕುಡಿದನು. ಮತ್ತು ಲೋಕವನ್ನೇ ಕಾಪಾಡತಕ್ಕವನಾದರೂ ಆಕೆಯ ತೊಡೆಯಮೇಲೆ ಮಲಗಿದನು.

ತಸ್ಮಿನ್ ದಿನೇ ಶುಭೇ ರಮ್ಯೇ ಸರ್ವಕಾಮಪ್ರದೇ ನೃಣಾಂ ।
ಉತ್ಸವಂ ಚಕ್ರಿರೇ ಪೌರಾ ಹೃಷ್ಟಾ ಜನಪದಾ ನರಾಃ ॥ ೯೨ ॥

ಕೈಕೇಯ್ಯಾಂ ಭರತೋ ಜಜ್ಞೇ ಪಾಂಚಜನ್ಯಾಂಶಸಂಭವಃ ।
ಸುಮಿತ್ರಾ ಜನಯಾಮಾಸ ಲಕ್ಷ್ಮಣಂ ಶುಭಲಕ್ಷಣಂ ॥ ೯೩ ॥

ಶತ್ರುಘ್ನಂ ಚ ಮಹಾಭಾಗಾ ದೇವಶತ್ರುಪ್ರತಾಪನಂ ।
ಅನಂತಾಂಶೇನ ಸಂಭೂತೋ ಲಕ್ಷ್ಮಣಃ ಪರವೀರಹಾ ॥ ೯೪ ॥

ಸುದರ್ಶನಾಂಶಾಚ್ಛತ್ರುಘ್ನಃ ಸಂಜಜ್ಞೇಽಮಿತವಿಕ್ರಮಃ ।
ತೇ ಸರ್ವೇ ವವೃಧುಸ್ತತ್ರ ವೈವಸ್ವತಮನೋಃ ಕುಲೇ ॥ ೯೫ ॥

ಸಂಸ್ಕೃತಾಸ್ತೇ ಸುತಾಸ್ಸಮ್ಯಕ್ ವಸಿಷ್ಠೇನ ಮಹೌಜಸಾ ।
ಅಧೀತವೇದಾಸ್ತೇ ಸರ್ವೇ ಶ್ರುತವಂತಸ್ತಥಾ ನೃಪಾಃ ॥ ೯೬ ॥

---

೯೨. ಸಕಲ ಇಷ್ಟಾರ್ಥಗಳನ್ನೂ ಕೊಡುವ ಆ ದಿನದಲ್ಲಿ ಪಟ್ಟಣಿಗರೆಲ್ಲರೂ ಸಂತೋಷಗೊಂಡು ಉತ್ಸವವನ್ನು ಮಾಡಿದರು.

೯೩–೯೫. ಕೈಕೇಯಿಯಲ್ಲಿ ಭರತನು ಹುಟ್ಟಿದನು. ಅವನು ಪಾಂಚಜನ್ಯವೆಂಬ ವಿಷ್ಣುವಿನ ಶಂಖದ ಅಂಶದವನು. ಸುಮಿತ್ರೆಯು ಕೌಸಲ್ಯೆ ಸುಮಿತ್ರೆಯರು ಇಬ್ಬರಿಂದಲೂ ಒಂದೊಂದು ಭಾಗ ಪಾಯಸವನ್ನು ತೆಗೆದುಕೊಂಡು ಕುಡಿದುದರಿಂದ ಇಬ್ಬರು ಮಕ್ಕಳಾದರು. ಅವರಲ್ಲಿ ಒಬ್ಬನು ಲಕ್ಷ್ಮಣನು. ಮತ್ತೊಬ್ಬನು ಶತ್ರುಘ್ನನು. ಇದರಲ್ಲಿ ಲಕ್ಷ್ಮಣನು ಅನಂತನ ಅಂಶದಿಂದ ಹುಟ್ಟಿದನು. ಶತ್ರುಘ್ನನು ಸುದರ್ಶನವೆಂಬ ಚಕ್ರದ ಅಂಶದಿಂದ ಹುಟ್ಟಿದನು. ಈ ರೀತಿಯಾಗಿ ಆ ಮನುವಿನ ಕುಲದಲ್ಲಿ ಮೂವರು ಹೆಂಡತಿಯರಲ್ಲಿ ನಾಲ್ವರು ಮಕ್ಕಳು ಹುಟ್ಟಿ ಸಂತೋಷದಿಂದ ಬೆಳೆಯುತ್ತಿದ್ದರು.

೯೬–೯೭. ಆ ಮಕ್ಕಳೆಲ್ಲರಿಗೂ ಗುರುವಾದ ವಸಿಷ್ಠನು ಉಪನಯನಾದಿ ಸಂಸ್ಕಾರವನ್ನು ಮಾಡಿದನು. ಅನಂತರ ಅವರೆಲ್ಲರೂ ವೇದವನ್ನು ಓದಿದರು.

**ಸರ್ವಶಾಸ್ತ್ರಾರ್ಥತತ್ವಜ್ಞಾ ಧನುರ್ವೇದೇ ಚ ನಿಷ್ಠಿತಾಃ |**
**ಬಭೂವುಃ ಪರಮೋದಾರಾ ಲೋಕಾನಾಂ ಹರ್ಷವರ್ಧನಾಃ || ೯೭ ||**

**ಯುಗ್ಮಂ ಬಭೂವತುಸ್ತತ್ರ ರಾಜಾನೌ ರಾಮಲಕ್ಷ್ಮಣೌ |**
**ತಥಾ ಭರತಶತ್ರುಘ್ನೌ ತಯೋರ್ಯುಗ್ಮಂ ಬಭೂವ ಹ || ೯೮ ||**

**ಅಥ ಲೋಕೇಶ್ವರೀ ಲಕ್ಷ್ಮೀಃ ಜನಕಸ್ಯ ನಿವೇಶನೇ |**
**ಶುಭಕ್ಷೇತ್ರೇ ಹಲೋತ್ಖಾತೇ ಶುನಾಸೀರೇ ಶುಭೇಕ್ಷಣಾ || ೯೯ ||**

**ಬಾಲಾರ್ಕಕೋಟಿಸಂಕಾಶಾ ರಕ್ತೋತ್ಪಲಕರಾಂಬುಜಾ |**
**ಸರ್ವಲಕ್ಷಣಸಂಪನ್ನಾ ಸರ್ವಾಭರಣಭೂಷಿತಾ || ೧೦೦ ||**

**ಧೃತ್ವಾ ವಕ್ಷಸಿ ಚಾರ್ವಂಗೀ ಮಾಲಾಮಮ್ಲಾನಪಂಕಜಾಂ |**
**ಸೀತಾಮುಖೇ ಸಮುತ್ಪನ್ನಾ ಬಾಲಭಾವೇನ ಸುಂದರೀ || ೧೦೧ ||**

---

ಶಾಸ್ತ್ರಗಳನ್ನೂ ಕಲಿತರು. ಎಲ್ಲಾ ಶಾಸ್ತ್ರಗಳ ವಿಷಯವನ್ನು ಚೆನ್ನಾಗಿ ತಿಳಿದು ಕೊಂಡು ಧನುರ್ವೇದದಲ್ಲಿಯೂ ಗಟ್ಟಿಗರಾದರು. ಬಹುವಾಗಿ ಧರ್ಮಿಷ್ಠರೂ ಆಗಿ ಜನಗಳಿಗೆಲ್ಲರಿಗೂ ಸಂತೋಷವನ್ನುಂಟುಮಾಡುತ್ತ ಬಂದರು.

೯೮. ರಾಜಪುತ್ರರಾದ ಆ ರಾಮಲಕ್ಷ್ಮಣರು ಒಂದು ಜೊತೆಯಾದರು. ಅಂತೆಯೇ ಭರತ ಶತ್ರುಘ್ನರೂ ಕೂಡ ಒಂದು ಜೊತೆಯಾದರು.

೯೯–೧೦೧. ಇತ್ತ ಲೋಕೇಶ್ವರಿಯಾದ ಲಕ್ಷ್ಮಿಯು ಜನಕನ ಮನೆಯಲ್ಲಿ ಬೆಳೆದಳು. ಅವಳು ಅವನ ಯಜ್ಞದ ಭೂಮಿಯಲ್ಲಿ ನೇಗಿಲಿನ ಮೊನೆಯಲ್ಲಿ ಹುಟ್ಟಿದಳು. ಕೋಟಿಜನ ಬಾಲಸೂರ್ಯರಂತೆ ಪ್ರಕಾಶಿಸುತ್ತಿದ್ದಳು. ರಕ್ತಕಮಲ ದಂತೆ ಕೈಗಳಿದ್ದುವು. ಎಲ್ಲಾ ಲಕ್ಷಣಗಳೂ ತುಂಬಿದ್ದುವು. ಎಲ್ಲಾ ಒಡವೆಗಳನ್ನೂ ಧರಿಸಿದ್ದಳು ಕತ್ತಿನಲ್ಲಿ ಬಾಡದಿರುವ ಕಮಲದ ಮಾಲೆಯಿದ್ದಿತು. ಇಂತಹ ಲಕ್ಷ್ಮಿಯು ನೇಗಿಲಿನ ಮೊನೆಯಲ್ಲಿ ಹುಟ್ಟಿ ಬಾಲಭಾವದಿಂದ ಬೆಳೆಯುತ್ತಿದ್ದಳು.

ತಾಂ ದೃಷ್ಟ್ವಾ ಜನಕೋ ರಾಜಾ ಕನ್ಯಾಂ ವೇದಮಯೀಂ ಶುಭಾಂ ।
ಉದ್ಧೃತ್ಯಾಪತ್ಯಭಾವೇನ ಪುಪೋಷ ಮಿಥಿಲಾಪತಿಃ ॥ ೧೦೨ ॥

ಜನಕಸ್ಯ ಗೃಹೇ ರಮ್ಯೇ ಸರ್ವಲೋಕೇಶ್ವರಪ್ರಿಯಾ ।
ವವೃಧೇ ಸರ್ವಲೋಕಸ್ಯ ರಕ್ಷಣಾರ್ಥಂ ಸುರೇಶ್ವರೀ ॥ ೧೦೩ ॥

ಏತಸ್ಮಿನ್ನಂತರೇ ದೇವಿ ಕೌಶಿಕೋ ಲೋಕವಿಶ್ರುತಃ ।
ಸಿದ್ಧಾಶ್ರಮೇ ಮಹಾಪುಣ್ಯೇ ಭಾಗೀರಥ್ಯಾಸ್ತಟೇ ಶುಭೇ ॥ ೧೦೪ ॥

ಕ್ರತುಂ ಪ್ರವರಮಾರೇಭೇ ಯಷ್ಟುಂ ತತ್ರ ಮಹಾಮುನಿಃ ।
ವರ್ತಮಾನಸ್ಯ ತಸ್ಯಾಥ ಯಜ್ಞಸ್ಯಾಸ್ಯ ದ್ವಿಜನ್ಮನಃ ॥ ೧೦೫ ॥

ಕ್ರತುವಿಧ್ವಂಸಿನೋಽಭೂವನ್ ರಾವಣಸ್ಯ ನಿಶಾಚರಾಃ ।
ಕೌಶಿಕಶ್ಚಿಂತಯಿತ್ವಾಥ ರಘುವಂಶೋದ್ಭವಂ ಹರಿಂ ॥ ೧೦೬ ॥

ಆನೇತುಮೈಚ್ಛದ್ಧರ್ಮಾತ್ಮಾ ಲೋಕಾನಾಂ ಹಿತಕಾಮ್ಯಯಾ ।
ಸ ಗತ್ವಾ ನಗರೀಂ ರಮ್ಯಾಮಯೋಧ್ಯಾಂ ರಘುಪಾಲಿತಾಂ ॥ ೧೦೭ ॥

---

೧೦೨. ಜನಕರಾಜನು ವೇದಮಯಳಾದ ಆ ಕನ್ಯೆಯನ್ನು ನೋಡಿ ಮಗಳೆಂಬ ಭಾವದಿಂದ ಎತ್ತಿಕೊಂಡು ಹೋಗಿ ಕಾಪಾಡಿದನು.

೧೦೩. ಆ ಸರ್ವಲೋಕೇಶ್ವರಿಯಾದ ಲಕ್ಷ್ಮಿಯು ಮನೋಹರವಾದ ಜನಕನ ಮನೆಯಲ್ಲಿ ಸಮಸ್ತಲೋಕಗಳ ರಕ್ಷಣಾರ್ಥವಾಗಿ ಬೆಳೆದಳು.

೧೦೪-೧೦೯. ಇಷ್ಟರೊಳಗೆ ಲೋಕಪ್ರಸಿದ್ಧನಾದ ಕೌಶಿಕನು ಭಾಗೀರಥೀನದಿಯ ದಡದಲ್ಲಿರುವ ಸಿದ್ಧಾಶ್ರಮದಲ್ಲಿ ಉತ್ತಮವಾದ ಯಾಗವನ್ನು ಮಾಡಲು ಮನಸ್ಸುಮಾಡಿದನು. ಅವನು ಯಜ್ಞಮಾಡುತ್ತಿರಲು ಆ ಬ್ರಾಹ್ಮಣನ ಯಜ್ಞವನ್ನು, ರಾವಣನ ಆಳುಗಳಾದ ರಾಕ್ಷಸರು ನಾಶಮಾಡುವವರಾದರು. ಅನಂತರ ಏನುಮಾಡಬೇಕೆಂದು ಆ ಕೌಶಿಕನು ಯೋಚಿಸಿ ರಘುವಂಶದಲ್ಲಿ ಹರಿಯು ಅವತರಿಸಿರುವುದನ್ನು ತಿಳಿದು ಲೋಕಹಿತಕ್ಕೋಸ್ಕರ ಆತನನ್ನು ಅಲ್ಲಿಗೆ ಕರೆತರಲು ನಿಶ್ಚಯಿಸಿದನು. ಆದುದರಿಂದ ಆ ಕೌಶಿಕನು ರಘುಗಳಿಂದ

ನೃಪಶ್ರೇಷ್ಠಂ ದಶರಥಂ ದದರ್ಶ ಮುನಿಸತ್ತಮಃ ।
ರಾಜಾಪಿ ಕೌಶಿಕಂ ದೃಷ್ಟ್ವಾ ಪ್ರತ್ಯುತ್ಥಾಯ ಕೃತಾಂಜಲಿಃ ।　　॥ ೧೦೮ ॥

ಪುತ್ರೈಸ್ಸಹ ಮಹಾತೇಜಾ ವವಂದೇ ಮುನಿಸತ್ತಮಂ ॥
ಧನ್ಯೋಽಹಮಸ್ಮೀತಿ ವದನ್ ಹರ್ಷೇಣ ರಘುನಂದನಃ　　॥ ೧೦೯ ॥

ಅರ್ಚಯಾಮಾಸ ವಿಧಿನಾ ನಿವೇಶ್ಯ ಪರಮಾಸನೇ ।
ಪರಿಣೀಯ ನಮಸ್ಕೃತ್ಯ ಕಿಂ ಕರೋಮೀತ್ಯುವಾಚ ತಂ　　॥ ೧೧೦ ॥

ತತಃ ಪ್ರೋವಾಚ ಹೃಷ್ಟಾತ್ಮಾ ವಿಶ್ವಾಮಿತ್ರೋ ಮಹಾತಪಾಃ　॥ ೧೧೧ ॥

॥ ವಿಶ್ವಾಮಿತ್ರ ಉವಾಚ ॥

ದೇಹಿ ಮೇ ರಾಘವಂ ರಾಜನ್ ರಕ್ಷಣಾರ್ಥಂ ಕ್ರತೋರ್ಮಮ ।
ಸಾಫಲ್ಯಮಸ್ತು ಮೇ ಯಜ್ಞೇ ರಾಘವಸ್ಯ ಸಮೀಪತಃ ॥
ತಸ್ಮಾದ್ರಾಮಂ ರಕ್ಷಣಾರ್ಥಂ ದಾತುಮರ್ಹಸಿ ಭೂಪತೇ　　॥ ೧೧೨ ॥

---

ಪಾಲಿತವಾದ ರಮ್ಯವಾದ ಅಯೋಧ್ಯೆಗೆ ಹೋಗಿ ಅಲ್ಲಿ ರಾಜಶ್ರೇಷ್ಠನಾದ ದಶರಥನನ್ನು ನೋಡಿದನು. ದಶರಥನೂ ಕೂಡ ಆ ಕೌಶಿಕನನ್ನು ನೋಡಿ ಎದುರುಗೊಂಡು ಕೈಮುಗಿದುಕೊಂಡು ಮಕ್ಕಳೊಡನೆ ಆತನಿಗೆ ನಮಸ್ಕರಿಸಿದನು. ಎಲೈ ಮುನಿಯೇ ! ನೀನು ನಮ್ಮ ಮನೆಗೆ ಬಂದುದರಿಂದ ಧನ್ಯನಾದೆನು. ಎಂದು ಹೇಳಿದನು.

೧೧೦-೧೧೧. ಆ ಋಷಿಯನ್ನು ಉತ್ತಮವಾದ ಆಸನದಲ್ಲಿ ಕೂರಿಸಿ ಶಾಸ್ತ್ರ ರೀತಿಯಿಂದ ಸತ್ಕರಿಸಿದನು. ಅನಂತರ ಅವನು ಶ್ರಮವನ್ನು ಕಳೆದುಕೊಂಡ ಮೇಲೆ ನನ್ನಿಂದ ತಮಗೇನು ಆಗಬೇಕೆಂದು ಕೇಳಿಕೊಂಡನು. ಆಗ ವಿಶ್ವಾಮಿತ್ರನು ಆ ರಾಜನನ್ನು ಕುರಿತು ಇಂತೆಂದನು.

೧೧೨. ವಿಶ್ವಾಮಿತ್ರನು ಹೇಳಿದನು–ಎಲೈ ರಾಜನೇ ! ನನಗೆ ಯಾಗರಕ್ಷಣಾರ್ಥವಾಗಿ ಈ ರಾಮನನ್ನು ಕಳುಹಿಸಿಕೊಡು. ಈ ರಾಘವನ ಸಮೀಪದಲ್ಲಿ ನಡೆಯುವುದರಿಂದ ನನ್ನ ಯಜ್ಞವು ಸಾರ್ಥಕವಾಗಲಿ. ನನ್ನ ಯಾಗವನ್ನು ರಕ್ಷಿಸುವುದಕ್ಕೋಸ್ಕರ ನೀನು ಈತನನ್ನು ಕಳುಹಿಸಿಕೊಡಬೇಕು.

॥ ಈಶ್ವರ ಉವಾಚ ॥

ತಚ್ಛ್ರುತ್ವಾ ಮುನಿವರ್ಯಸ್ಯ ವಾಕ್ಯಂ ಸರ್ವವಿದಾಂ ವರಃ ।
ಪ್ರದದೌ ಮುನಿವರ್ಯಾಯ ರಾಘವಂ ಸಹಲಕ್ಷ್ಮಣಂ ॥ ೧೧೩ ॥

ಆದಾಯ ರಾಘವೌ ತತ್ರ ವಿಶ್ವಾಮಿತ್ರೋ ಮಹಾತಪಾಃ ।
ಸ್ವಮಾಶ್ರಮಮತಿಪ್ರೀತಃ ಪ್ರಯಯೌ ದ್ವಿಜಸತ್ತಮಃ ॥ ೧೧೪ ॥

ತತಃ ಪ್ರಹೃಷ್ಟಾಸ್ತ್ರಿದಶಾಃ ಪ್ರಯಾತೇ ರಘುಸತ್ತಮೇ ।
ವವೃಷುಃ ಪುಷ್ಪವರ್ಷಾಣಿ ತುಷ್ಟುವುಶ್ಚ ಮಹೌಜಸಃ ॥ ೧೧೫ ॥

ಅಥಾಜಗಾಮ ಹೃಷ್ಟಾತ್ಮಾ ವೈನತೇಯೋ ಮಹಾಬಲಃ ।
ಅದೃಶ್ಯಭೂತೋ ಭೂತಾನಾಂ ಸಂಪ್ರಾಪ್ಯ ರಘುಸತ್ತಮಂ ॥ ೧೧೬ ॥

ತಾಭ್ಯಾಂ ದಿವ್ಯೇ ಚ ಧನುಷೀ ತೂಣೌ ಚಾಕ್ಷಯಸಾಯಕೌ ।
ದಿವ್ಯಾಸ್ತ್ರಾಣಿ ಚ ಶಸ್ತ್ರಾಣಿ ದತ್ವಾ ಚ ಪ್ರಯಯೌ ದ್ವಿಜಃ ॥ ೧೧೭ ॥

---

೧೧೩. ಈಶ್ವರನು ಹೇಳಿದನು–ಎಲ್ಲಾ ವಿಷಯವನ್ನೂ ತಿಳಿದ ಆ ದಶರಥನು ಆ ಋಷಿಯ ಮಾತನ್ನು ಕೇಳಿ ಅವನಿಗೆ ರಾಮಲಕ್ಷ್ಮಣರನ್ನು ಕೊಟ್ಟನು.

೧೧೪. ಆ ಮಹಾತಪಸ್ವಿಯಾದ ವಿಶ್ವಾಮಿತ್ರನು ಆ ರಾಮಲಕ್ಷ್ಮಣರನ್ನು ಕರೆದುಕೊಂಡು ಬಹು ಸಂತೋಷದಿಂದ ತನ್ನ ಆಶ್ರಮಕ್ಕೆ ಹೋದನು.

೧೧೫. ರಘುರಾಮನು ಕೌಶಿಕನ ಜೊತೆಯಲ್ಲಿ ಹೋಗಲು ದೇವತೆಗಳು ಸಂತೋಷಪಟ್ಟರು. ಮತ್ತು ಪುಷ್ಪವೃಷ್ಟಿಯನ್ನು ಸುರಿಸಿದರು. ಸ್ತುತಿಸಿದರು.

೧೧೬-೧೧೭. ಅನಂತರ ಮಹಾಬಲಿಷ್ಠನಾದ ಗರುಡನು ಸಂತೋಷಗೊಂಡು ಒಬ್ಬರಿಗೂ ಕಾಣದಂತೆ ಆ ರಾಮಲಕ್ಷ್ಮಣರ ಬಳಿಗೆ ಬಂದು ಅವರಿಬ್ಬರಿಗೂ ಅಕ್ಷಯಬಾಣಗಳುಳ್ಳ ಬತ್ತಳಿಕೆಯನ್ನೂ ಶಸ್ತ್ರಗಳನ್ನೂ ಕೊಟ್ಟು ಹೊರಟು ಹೋದನು.

ತೌ ರಾಮಲಕ್ಷ್ಮಣೌ ವೀರೌ ಕೌಶಿಕೇನ ಮಹಾತ್ಮನಾ ।
ದರ್ಶಿತಾಂ ಚ ಮಹಾರಣ್ಯೇ ರಾಕ್ಷಸೀಂ ಘೋರದರ್ಶನಾಂ　　॥ ೧೧೮ ॥

ನಾಮ್ನಾ ತು ತಾಟಿಕಾಂ ದೇವಿ ಭಾರ್ಯಾಂ ಸುಂದರರಕ್ಷಸಃ ।
ಜಘ್ನತುಸ್ತಾಂ ಮಹಾವೀರ್ಯೌ ಬಾಣೈರ್ದಿವ್ಯಧನುಶ್ಚ್ಯುತೈಃ　　॥ ೧೧೯ ॥

ನಿಹತಾ ರಾಘವೇಣಾಥ ರಾಕ್ಷಸೀ ಘೋರದರ್ಶನಾ ।
ತ್ಯಕ್ತ್ವಾ ತನುಂ ಘೋರರೂಪಾಂ ದಿವ್ಯರೂಪಾ ಬಭೂವ ಸಾ　　॥ ೧೨೦ ॥

ಜಾಜ್ವಲ್ಯಮಾನಾ ವಪುಷಾ ಸರ್ವಾಭರಣಭೂಷಿತಾ ।
ಪ್ರಯಯೌ ವೈಷ್ಣವಂ ಲೋಕಂ ಪ್ರಣಮ್ಯ ಚ ರಘೂತ್ತಮಂ　　॥ ೧೨೧ ॥

ತಾಂ ಹತ್ವಾ ರಾಘವಃ ಶ್ರೀಮಾನ್ ಕೌಶಿಕಸ್ಯಾಶ್ರಮಂ ಶುಭಂ ।
ಪ್ರವಿವೇಶ ಮಹಾತೇಜಾ ಲಕ್ಷ್ಮಣೇನ ಮಹಾತ್ಮನಾ　　॥ ೧೨೨ ॥

---

೧೧೮-೧೧೯. ಆ ಮಹಾರಣ್ಯದಲ್ಲಿ ಘೋರಸ್ವರೂಪಳಾದ ಸುಂದರನ ಹೆಂಡತಿಯಾದ ತಾಟಕೆಯನ್ನು ತೋರಿಸಲು ಅವರು ದಿವ್ಯವಾದ ಬಾಣಗಳನ್ನು ಬಿಟ್ಟು ಅವಳನ್ನು ಕೊಂದರು.

೧೨೦–೧೨೧. ಆ ಘೋರಳಾದ ತಾಟಕೆಯನ್ನು ರಾಮನು ಸಂಹರಿಸಲು ಅವಳು ಆ ಘೋರವಾದ ದೇಹವನ್ನು ಬಿಟ್ಟು ದಿವ್ಯವಾದ ರೂಪವನ್ನು ಹೊಂದಿದಳು. ಪ್ರಕಾಶಮಾನವಾದ ದೇಹವನ್ನು ಹೊಂದಿ ಆಭರಣಗಳನ್ನು ತೊಟ್ಟುಕೊಂಡು ಇದ್ದಳು. ಈಕೆಯು ರಾಮನಿಗೆ ನಮಸ್ಕರಿಸಿ ವಿಷ್ಣುಲೋಕಕ್ಕೆ ಹೋದಳು.

೧೨೨. ಬಲಶಾಲಿಯಾದ ರಾಮನು ಆ ತಾಟಕೆಯನ್ನು ಕೊಂದು ಕೌಶಿಕನ ಆಶ್ರಮಕ್ಕೆ ಹೋದನು. ಮತ್ತು ಮಹಾತ್ಮನಾದ ಲಕ್ಷ್ಮಣನೊಡನೆ ಯಾಗಮಂಟಪಕ್ಕೂ ಹೋದನು.

ತತಃ ಪ್ರಹೃಷ್ಟಾ ಮುನಯಃ ಪ್ರತ್ಯುದ್ಗಮ್ಯ ರಘೂತ್ತಮಂ ।
ನಿವೇಶ್ಯ ಪೂಜಯಾಮಾಸುರರ್ಘ್ಯಾದ್ಯೈಃ ಪರಮಾಸನೇ ॥ ೧೨೩ ॥

ಕೌಶಿಕಃ ಕೃತದೀಕ್ಷಸ್ತು ಯಷ್ಟುಂ ಯಜ್ಞಮನುತ್ತಮಂ ।
ಆರೇಭೇ ಮುನಿಭಿಸ್ಸಾರ್ಧಂ ವಿಧಿನಾ ದ್ವಿಜಸತ್ತಮಃ ॥ ೧೨೪ ॥

ವರ್ತಮಾನೇ ಮಹಾಯಜ್ಞೇ ಮಾರೀಚೋ ನಾಮ ರಾಕ್ಷಸಃ ।
ಭ್ರಾತ್ರಾ ಸುಬಾಹುನಾ ತತ್ರ ವಿಘ್ನಂ ಕರ್ತುಮವಸ್ಥಿತಃ ॥ ೧೨೫ ॥

ದೃಷ್ಟ್ವಾ ತೌ ರಾಕ್ಷಸೌ ಘೋರೌ ರಾಘವಃ ಪರವೀರಹಾ ।
ಜಘಾನೈಕೇನ ಬಾಣೇನ ಸುಬಾಹುಂ ರಾಕ್ಷಸೇಶ್ವರಂ ॥ ೧೨೬ ॥

ಪವನಾಸ್ತ್ರೇಣ ಮಹತಾ ಮಾರೀಚಂ ಚ ನಿಶಾಚರಂ ।
ಸಾಗರೇ ಪಾತಯಾಮಾಸ ಶುಷ್ಕಪರ್ಣಮಿವಾನಿಲಃ ॥ ೧೨೭ ॥

---

೧೨೩–೧೨೪. ಆಗ ಅಲ್ಲಿದ್ದ ಋಷಿಗಳೆಲ್ಲರೂ ಸಂತೋಷಗೊಂಡು ಆ ರಾಮನನ್ನು ಉತ್ತಮವಾದ ಆಸನದಲ್ಲಿ ಕೂರಿಸಿ ಪಾದ್ಯ ಅರ್ಘ್ಯಗಳನ್ನು ಕೊಟ್ಟು ಪೂಜಿಸಿದರು. ಕೌಶಿಕನು ಯಾಗದಲ್ಲಿ ದೀಕ್ಷೆಯನ್ನು ಹೊಂದಿ ಮುನಿಗಳೊಡನೆ ಸೇರಿಕೊಂಡು ಯಜ್ಞಮಾಡಲು ಮೊದಲು ಮಾಡಿದನು.

೧೨೫. ಈ ಯಜ್ಞವು ನಡೆಯುತ್ತಿರುವಾಗ ಮಾರೀಚನೆಂಬ ರಾಕ್ಷಸನು ಸಹೋದರನಾದ ಸುಬಾಹುವಿನೊಡನೆ ಆ ಯಾಗಕ್ಕೆ ವಿಘ್ನವನ್ನುಂಟುಮಾಡಲು ಮೊದಲುಮಾಡಿದನು.

೧೨೬–೧೨೭. ಬಲಿಷ್ಠನಾದ ರಾಮನು ಆ ರಾಕ್ಷಸರನ್ನು ನೋಡಿ ಒಂದು ಬಾಣವನ್ನು ಬಿಟ್ಟು ಸುಬಾಹುವನ್ನು ಕೊಂದನು. ಮತ್ತೊಂದು ಬಾಣವನ್ನು ಬಿಟ್ಟು ಗಾಳಿಯು ಒಣಗಿದ ಎಲೆಯನ್ನು ಹಾರಿಸಿಕೊಂಡು ಹೋಗುವಂತೆ ಆ ಮಾರೀಚನನ್ನು ಹಾರಿಸಿ ಸಮುದ್ರಕ್ಕೆ ಎಸೆದುಬಿಟ್ಟನು.

ಸ ರಾಮಸ್ಯ ಮಹಾವೀರ್ಯಂ ದೃಷ್ಟ್ವಾ ರಾಕ್ಷಸಸತ್ತಮಃ |
ನ್ಯಸ್ತಶಸ್ತ್ರಸ್ತಪಸ್ತಪ್ತುಂ ಪ್ರಯಯೌ ಮಹದಾಶ್ರಮಂ　　　　|| ೧೨೮ ||

ವಿಶ್ವಾಮಿತ್ರೋ ಮಹಾತೇಜಾಃ ಸಮಾಪ್ತೇ ಮಹತಿ ಕ್ರತೌ |
ಪ್ರಹೃಷ್ಟಮನಸಾ ತತ್ರ ಪೂಜಯಾಮಾಸ ರಾಘವಂ　　　　|| ೧೨೯ ||

ಸಮಾಶ್ಲಿಷ್ಯ ಮಹಾತ್ಮಾನಂ ಕಾಕಪಕ್ಷಧರಂ ಹರಿಂ |
ನೀಲೋತ್ಪಲದಳಶ್ಯಾಮಂ ಪದ್ಮಪತ್ರಾಯತೇಕ್ಷಣಂ　　　　|| ೧೩೦ ||

ಉಪಾಘ್ರಾಯ ತದಾ ಮೂರ್ಧ್ನಿ ತುಷ್ಟಾವ ಮುನಿಸತ್ತಮಃ |
ಏತಸ್ಮಿನ್ನಂತರೇ ರಾಜಾ ಮಿಥಿಲಾಯಾ ಅಧೀಶ್ವರಃ　　　　|| ೧೩೧ ||

ವಾಜಪೇಯಂ ಕ್ರತುಂ ಯಷ್ಟುಮಾರೇಭೇ ದ್ವಿಜಸತ್ತಮೈಃ |
ತಂ ದ್ರಷ್ಟುಂ ಪ್ರಯಯುಃ ಸರ್ವೇ ವಿಶ್ವಾಮಿತ್ರಪುರೋಗಮಾಃ　|| ೧೩೨ ||

---

೧೨೮. ಆ ಮಾರೀಚನು ರಾಮನ ಪರಾಕ್ರಮವನ್ನು ತಿಳಿದು ಶಸ್ತ್ರಗಳನ್ನು ಬಿಸುಟು ತಪಸ್ಸುಮಾಡಲು ಒಂದು ದೊಡ್ಡ ಆಶ್ರಮಕ್ಕೆ ಹೋದನು.

೧೨೯. ಆ ಮಹಾಮಹಿಮನಾದ ವಿಶ್ವಾಮಿತ್ರನು ಆ ದೊಡ್ಡಯಾಗವು ಪೂರೈಸಲು ಸಂತೋಷಗೊಂಡು ಆ ರಾಮನನ್ನು ಪೂಜಿಸಿದನು.

೧೩೦–೧೩೨. ಅನಂತರ ಸಂತೋಷಪಟ್ಟ ಆ ಕೌಶಿಕನು ಕಾಕಪಕ್ಷವನ್ನು ಧರಿಸಿದ, ನಿಲೋತ್ಪಲದಂತೆ ಶ್ಯಾಮವರ್ಣವುಳ್ಳ, ಪದ್ಮದಂತೆ ಕಣ್ಣುಗಳುಳ್ಳ ಆ ರಾಮನ ತಲೆಯನ್ನು ಮೂಸಿನೋಡಿ ವಿಶ್ವಾಸದಿಂದ ಸ್ತುತಿಸಿದನು. ಈ ಯಾಗವು ಮುಗಿದೊಡನೆಯೇ ಮಿಥಿಲೆಗೆ ರಾಜನಾದ ಜನಕನು ಬ್ರಾಹ್ಮಣರೆಲ್ಲರನ್ನೂ ಸೇರಿಸಿ ಕೊಂಡು ವಾಜಪೇಯಯಾಗವನ್ನು ಮಾಡಲು ಆರಂಭಿಸಿದನು. ಅದನ್ನು ನೋಡಲು ವಿಶ್ವಾಮಿತ್ರನೇ ಮುಂತಾದವರು ಹೋದರು.

ಮುನಯೋ ರಘುಶಾರ್ದೂಲಸಹಿತಾಃ ಪುಣ್ಯಚೇತಸಃ ।
ಗಚ್ಛತಸ್ತಸ್ಯ ರಾಮಸ್ಯ ಪಾದಾಬ್ಜೇನ ಮಹಾತ್ಮನಃ ॥ ೧೩೩ ॥

ಅಭೂತ್ಸಾ ಪಾವನೀಭೂತಾ ಸಮಾಕ್ರಾನ್ತಾ ಮಹಾಶಿಲಾ ।
ಸಾಪಿ ಶಪ್ತಾ ಪುರಾ ಭರ್ತ್ರಾ ಗೌತಮೇನ ದ್ವಿಜನ್ಮನಾ ॥ ೧೩೪ ॥

ಅಹಲ್ಯಾ ರಘುನಾಥಸ್ಯ ಪಾದಸ್ಪರ್ಶಾಚ್ಛುಭಾಭವತ್ ।
ಅಥ ಸಂಪ್ರಾಪ್ಯ ನಗರೀಂ ಮಿಥಿಲಾಂ ಮುನಿಸತ್ತಮಾಃ ॥ ೧೩೫ ॥

ರಾಘವಾಭ್ಯಾಂ ತು ತೇ ಸರ್ವೇ ಬಭೂವುಃ ಪ್ರೀತಮಾನಸಾಃ ।
ಸಮಾಗತಾನ್ ಮಹಾಭಾಗಾನ್ ದೃಷ್ಟ್ವಾ ರಾಜಾ ಮಹಾಬಲಃ ॥ ೧೩೬ ॥

ಪ್ರತ್ಯುದ್ಗಮ್ಯ ಪ್ರಣಮ್ಯಾಥ ಪೂಜಯಾಮಾಸ ಮೈಥಿಲಃ ।
ರಾಮಂ ಪದ್ಮವಿಶಾಲಾಕ್ಷಮಿಂದೀವರದಳಪ್ರಭಂ ॥ ೧೩೭ ॥

ಪೀತಾಂಬರಧರಂ ಮುಗ್ಧಂ ಕೋಮಲಾವಯವೋಜ್ಜ್ವಲಂ ।
ಅವಧೀರಿತಕಂದರ್ಪಕೋಟಿಲಾವಣ್ಯಮುತ್ತಮಂ ॥ ೧೩೮ ॥

---

೧೩೩-೧೪೧ ಪುಣ್ಯವಂತರಾದ ಆ ಋಷಿಗಳು ರಾಮನೊಡನೆ ಹೋದರು. ಪುಣ್ಯವಂತನಾದ ರಾಮನು ಹೋಗುತ್ತಿರುವಾಗ ಅವನು ಅಲ್ಲೊಂದು ಕಲ್ಲಿನ ಮೇಲೆ ಕಾಲನ್ನು ಇಡಲು ಅವನ ಪಾದದ ಧೂಳಿಯಿಂದ ಆ ಕಲ್ಲು ಪಾವನವಾಯಿತು ಅದರಿಂದ ಅದು ಹೆಂಗಸಾಗಿ ಮೇಲಕ್ಕೆದ್ದಿತು. ಆಕೆಯು ಅಹಲ್ಯೆಯು. ಪೂರ್ವದಲ್ಲಿ ಗಂಡನಾದ ಗೌತಮನಿಂದ ಶಾಪವನ್ನು ಹೊಂದಿ ಈ ರೀತಿಯಾಗಿ ಕಲ್ಲಾಗಿದ್ದಳು. ಈಗ ರಾಮನ ಪಾದಸ್ಪರ್ಶದಿಂದ ಆ ಶಾಪವು ಹೋಗಿ ಸರಿಯಾದ ಹೆಂಗಸಾದಳು. ಮಿಥಿಲೆಗೆ ಅವರೆಲ್ಲರೂ ರಾಮನೊಡನೆ ಹೋಗಿ ಸಂತೋಷದಿಂದ ಯಾಗಮಂಟಪಕ್ಕೆ ಹೋದರು. ಇವರೆಲ್ಲರೂ ಬಂದುದನ್ನು ನೋಡಿ ಆ ಜನಕನು ಅವರನ್ನು ಎದುರುಗೊಂಡು ಗೌರವಿಸಿ ಪೂಜಿಸಿದನು. ಅಲ್ಲಿಗೆ ಬಂದಿರುವವರ ಮಧ್ಯದಲ್ಲಿ ಈ ಜನಕನು ರಾಮನನ್ನು ನೋಡಿದನು. ಆ ರಾಮನು ಇಂದೀವರದಂತೆ ಶ್ಯಾಮವರ್ಣಕ್ಕಿದ್ದನು. ಪೀತಾಂಬರವನ್ನು ಧರಿಸಿದ್ದನು. ಕೋಮಲವಾದ ಅವಯವಗಳನ್ನು ಹೊಂದಿದ್ದನು ಕೋಟಿಜನ ಮನ್ಮಥರನ್ನು ತಿರಸ್ಕರಿಸುವಂತೆ ಸೌಂದರ್ಯವಿದ್ದಿತು. ಎಲ್ಲಾ ಲಕ್ಷಣಗಳೂ

ಸರ್ವಲಕ್ಷಣಸಂಪನ್ನಂ ಸರ್ವಾಭರಣಭೂಷಿತಂ |
ಸ್ವಸ್ಯ ಹೃತ್ಪದ್ಮಮಧ್ಯೇ ಯಃ ಪರೇಶಸ್ಯ ತನೋರ್ಹರಿಃ || ೧೩೯ ||

ಉತ್ಪನ್ನೋ ದೀಪವದ್ದೀಪಾತ್ಸೌಶೀಲ್ಯಾದಿಗುಣೈಃ ಪರೈಃ |
ತಂ ದೃಷ್ಟ್ವಾ ರಘುನಾಥಂ ಸಃ ಜನಕೋ ಹರ್ಷಮಾನಸಃ || ೧೪೦ ||

ಪರೇಶಮೇವ ತಂ ಮೇನೇ ರಾಮಂ ದಶರಥಾತ್ಮಜಂ |
ಪೂಜಯಾಮಾಸ ಕಾಕುತ್‌ಸ್ಥಂ ಧನ್ಯೋಽಸ್ಮೀತಿ ಬ್ರುವನ್ನೃಪಃ || ೧೪೧ ||

ಪ್ರಸಾದಂ ವಾಸುದೇವಸ್ಯ ವಿಷ್ಣೋರ್ಮೇನೇ ನರೇಶ್ವರಃ |
ಪ್ರದಾನಂ ದುಹಿತುಸ್ತಸ್ಮೈ ಮನಸಾಽಚಿಂತಯತ್ಪ್ರಭುಃ || ೧೪೨ ||

ಆತ್ಮಜೌ ರಘುವಂಶಸ್ಯ ಜ್ಞಾತ್ವಾ ತತ್ರ ನೃಪೋತ್ತಮಃ |
ಪೂಜಯಾಮಾಸ ಧರ್ಮೇಣ ವಸ್ತ್ರೈರಾಭರಣೈಶ್ಶುಭೈಃ || ೧೪೩ ||

---

ಇದ್ದುವು. ಎಲ್ಲಾ ಆಭರಣಗಳನ್ನೂ ಹೊಂದಿದ್ದನು. ತನ್ನ ಹೃದಯದಲ್ಲಿ ಯಾವಾಗಲೂ ವಾಸಿಸುತ್ತಿರುವ ಪರಮಾತ್ಮನಾದ ಹರಿಯೇ ಆಗಿದ್ದನು. ಸೌಶೀಲ್ಯವೇ ಮುಂತಾದ ಗುಣಗಳಿಂದ ದೀಪದಿಂದ ಹುಟ್ಟಿದ ದೀಪವು ಪ್ರಕಾಶಿಸುವಂತೆ ಇದ್ದನು. ಜನಕನು ಆ ರಾಮನನ್ನು ನೋಡಿ ಸಂತೋಷಗೊಂಡನು. ಮತ್ತು ಅವನನ್ನು ಪರಬ್ರಹ್ಮನೆಂದೇ ತಿಳಿದನು. ಆಗ ಧನ್ಯನಾದೆನೆಂದು ಹೇಳುತ್ತ ಅವನನ್ನು ಪೂಜಿಸಿದನು.

೧೪೨. ವಿಷ್ಣುವು ತನಗೆ ಅನುಗ್ರಹಮಾಡಿ ಬಂದಿರುವನೆಂದೇ ತಿಳಿದನು. ಮತ್ತು ತನ್ನ ಮನೆಗೆ ಬಂದ ಆ ಸ್ವಾಮಿಗೆ ತನ್ನ ಮಗಳನ್ನು ಕೊಡುವುದಾಗಿ ಮನಸ್ಸಿನಲ್ಲಿ ಯೋಚಿಸಿಕೊಂಡನು.

೧೪೩. ಅವರನ್ನು ಆ ಋಷಿಗಳಿಂದ ಇವರು ದಶರಥನ ಮಕ್ಕಳೆಂದು ತಿಳಿದು ಧರ್ಮಕ್ಕನುಗುಣವಾಗಿ ವಸ್ತ್ರ ಆಭರಣಗಳಿಂದ ಪೂಜಿಸಿದನು.

ಋಷೀನ್ ಸಮರ್ಚಯಾಮಾಸ ಮಧುಪರ್ಕಾದಿಪೂಜನೈಃ ।
ತತೋಽವಸಾನೇ ಯಜ್ಞಸ್ಯ ರಾಮೋ ರಾಜೀವಲೋಚನಃ ॥ ೧೪೪ ॥

ಭಂಕ್ತ್ವಾ ಶೈವಂ ಧನುರ್ದಿವ್ಯಂ ಜಿತವಾನ್ ಜನಕಾತ್ಮಜಾಂ ।
ಅಥಾಽಸೌ ವೀರ್ಯಶುಲ್ಕೇನ ಮಹತಾ ಪರಿತೋಷಿತಃ ॥ ೧೪೫ ॥

ತತೋ ಧರಣಿಜಾಂ ತಸ್ಮೈ ಪ್ರದದೌ ಮಿಥಿಲಾಧಿಪಃ ।
ಕೇಶವಾಯ ಶ್ರಿಯಮಿವ ಯಥಾಪೂರ್ವಂ ಮಹಾರ್ಣವಃ ॥ ೧೪೬ ॥

ಸ ದೂತಂ ಪ್ರೇಷಯಾಮಾಸ ರಾಘವಂ ಮಿಥಿಲಾಧಿಪಃ ।
ಪುತ್ರಾಭ್ಯಾಂ ಸಹ ಧರ್ಮಾತ್ಮಾ ಮಿಥಿಲಾಯಾಂ ವಿವೇಶ ಹ ॥ ೧೪೭ ॥

ವಸಿಷ್ಠವಾಮದೇವಾದ್ಯೈಃ ಸೈನ್ಯೈಸ್ಸಹ ಮಹೀಪತಿಃ ।
ಉವಾಸ ನಗರೇ ರಮ್ಯೇ ಜನಕಸ್ಯ ರಘೂತ್ತಮಃ ॥ ೧೪೮ ॥

---

೧೪೪-೧೪೬. ಅನಂತರ ಆ ಜನಕನು ಋಷಿಗಳನ್ನೂ ಮಧುಪರ್ಕದಿಂದ ಪೂಜಿಸಿದನು. ಯಜ್ಞದ ಸಮಾಪ್ತಿಯಾದ ಮೇಲೆ ಸೀತೆಗೋಸ್ಕರ ಪಣವಾಗಿ ಇಟ್ಟಿದ್ದ ಶೈವಧನುಸ್ಸನ್ನು ರಾಮನು ಮುರಿದು ಸೀತೆಯನ್ನು ಗೆದ್ದನು. ಆಮೇಲೆ ಆ ವೀರ್ಯದಿಂದ ಸಂತೋಷಪಟ್ಟ ಜನಕನು ಆ ರಾಮನಿಗೆ ಸೀತೆಯನ್ನು ಕೊಡಲು ನಿಶ್ಚಯಿಸಿದನು. ಇದನ್ನು ನೋಡಿದರೆ ಪೂರ್ವದಲ್ಲಿ ಸಮುದ್ರರಾಜನು ಕೇಶವನಿಗೆ ಲಕ್ಷ್ಮಿಯನ್ನು ಕೊಡುವಂತಿದ್ದಿತು.

೧೪೭. ಜನಕನು ದಶರಥನನ್ನು ಕರೆತರಲು ಅಯೋಧ್ಯೆಗೆ ದೂತರನ್ನು ಕಳುಹಿಸಿದನು. ಆ ಧಶರಥನು ಭರತಶತ್ರುಘ್ನರನ್ನೂ ಕರೆದುಕೊಂಡು ಅಲ್ಲಿಗೆ ಬಂದನು.

೧೪೮. ಆ ದಶರಥನು ಬರುವಾಗ ಸೈನ್ಯವನ್ನೂ ವಸಿಷ್ಠ ವಾಮದೇವರನ್ನೂ ಕರೆದುಕೊಂಡು ಬಂದು ಆ ಜನಕನ ಪಟ್ಟಣದಲ್ಲಿ ನಿಂತನು.

**ತಸ್ಮಿನ್ನೇವ ಶುಭೇ ಕಾಲೇ ರಾಮಸ್ಯ ಧರಣೀಸುತಾಂ ।**
**ವಿವಾಹಮಕರೋದ್ರಾಜಾ ಮೈಥಿಲೇನ ಸಮರ್ಚಿತಃ ॥ ೧೪೯ ॥**

**ಲಕ್ಷ್ಮಣಸ್ಯೋರ್ಮಿಳಾಂ ನಾಮ ಕನ್ಯಾಂ ಜನಕಸಂಭವಾಂ ।**
**ಜನಕಸ್ಯಾನುಜಸ್ಯಾಥ ತನಯೇ ಶುಭವರ್ಚಸೀ ॥ ೧೫೦ ॥**

**ಮಾಂಡವೀ ಶ್ರುತಕೀರ್ತಿಶ್ಚ ಸರ್ವಲಕ್ಷಣಲಕ್ಷಿತೇ ।**
**ಭರತಸ್ಯ ಚ ಸೌಮಿತ್ರೇರ್ವಿವಾಹಮಕರೋನ್ನೃಪಃ ॥ ೧೫೧ ॥**

**ನಿವರ್ತ್ಯ ವೈವಾಹಿಕಂ ತತ್ರ ರಾಜಾ ದಶರಥೋ ಬಲೀ ।**
**ಅಯೋಧ್ಯಾಂ ಪ್ರಸ್ಥಿತಶ್ಶ್ರೀಮಾನ್ ಪೌರೈರ್ಜಾನಪದೈರ್ವೃತಃ ॥ ೧೫೨ ॥**

**ಪಾರಿಬರ್ಹಂ ಸಮಾದಾಯ ಮೈಥಿಲೇನ ಚ ಪೂಜಿತಃ ।**
**ಸಸುತಃ ಸಸ್ನುಷಃ ಸಾಶ್ವಃ ಸಗಜಃ ಸಬಲಾನುಗಃ ॥ ೧೫೩ ॥**

---

೧೪೯. ಆ ಶುಭಮುಹೂರ್ತದಲ್ಲಿಯೇ ರಾಮನಿಗೆ ಸೀತೆಯನ್ನು ಕೊಟ್ಟು ಮದುವೆಯನ್ನು ಮಾಡಿದನು. ಮತ್ತು ಅದಕ್ಕೆ ಅನುಗುಣವಾಗಿ ವಸ್ತ್ರಾದಿಗಳಿಂದ ಗೌರವಿಸಿದನು.

೧೫೦–೧೫೧. ಲಕ್ಷ್ಮಣನಿಗೆ ಜನಕನು ತನ್ನ ಮಗಳಾದ ಊರ್ಮಿಳೆಯನ್ನು ಕೊಟ್ಟನು. ಅನಂತರ ಜನಕನ ತಮ್ಮನ ಇಬ್ಬರು ಹೆಣ್ಣುಮಕ್ಕಳಾದ ಮಾಂಡವೀ ಶ್ರುತಕೀರ್ತಿಯರನ್ನು ಭರತ ಶತ್ರುಘ್ನರಿಗೆ ಕೊಟ್ಟು ಮದುವೆ ಮಾಡಿದನು.

೧೫೨. ಆ ಮಿಥಿಲಾಪಟ್ಟಣದಲ್ಲಿ ವಿವಾಹ ಕರ್ಮವನ್ನು ಮುಗಿಸಿಕೊಂಡು ದಶರಥನು ಪಟ್ಟಣಿಗರಿಂದಲೂ ತನ್ನವರಿಂದಲೂ ಕೂಡಿಕೊಂಡು ಹೊರಟನು.

೧೫೩. ಅವನು ಕೊಟ್ಟ ಬಳುವಳಿಯನ್ನು ತೆಗೆದುಕೊಂಡು ಮಕ್ಕಳು ಸೊಸೆಯರು ಆನೆ ಕುದುರೆ ಸೈನ್ಯಗಳೊಡನೆ ಹೊರಟನು.

ತದಧ್ವನಿ ಮಹಾವೀರ್ಯೋ ಜಾಮದಗ್ನಿಃ ಪ್ರತಾಪವಾನ್ ।
ಗೃಹೀತ್ವಾ ಪರಶುಂ ಚಾಪಂ ಸಂಕ್ರುದ್ಧ ಇವ ಕೇಸರೀ ॥ ೧೫೪ ॥

ಅಭ್ಯಧಾವಚ್ಚ ಕಾಕುತ್‌ಸ್ಥಂ ಯೋದ್ಧುಕಾಮೋ ನೃಪಾಂತಕಃ ।
ಸಂಪ್ರಾಪ್ಯ ರಾಘವಂ ದೃಷ್ಟ್ವಾ ವಚನಂ ಪ್ರಾಹ ಭಾರ್ಗವಂ ॥ ೧೫೫ ॥

॥ ಪರಶುರಾಮ ಉವಾಚ ॥

ರಾಮ ರಾಮ ಮಹಾಬಾಹೋ ಶೃಣುಷ್ವ ವಚನಂ ಮಮ ।
ಬಹುಶಃ ಪಾರ್ಥಿವಾನ್ ಹತ್ವಾ ಸಂಯುಗೇ ಭೂರಿವಿಕ್ರಮಾನ್ ॥ ೧೫೬ ॥

ಬ್ರಾಹ್ಮಣೇಭ್ಯೋ ಮಹೀಂ ದತ್ವಾ ತಪಸ್ತಪ್ತುಮಹಂ ಗತಃ ।
ತವ ವೀರ್ಯಬಲಂ ಶ್ರುತ್ವಾ ತ್ವಯಾ ಯೋದ್ಧುಮಿಹಾಗತಃ ॥ ೧೫೭ ॥

ಇಕ್ಷ್ವಾಕವೋ ನ ವಧ್ಯಾ ಮೇ ಮಾತಾಮಹಕುಲೋದ್ಭವಾಃ ।
ವೀರ್ಯಕ್ಷತ್ರಬಲಂ ಶ್ರುತ್ವಾ ನ ಶಕ್ಯಂ ಸಹಿತುಂ ಮಮ ॥ ೧೫೮ ॥

---

೧೫೪–೧೫೫. ಈ ದಶರಥನು ಹೋಗುತ್ತಿರುವ ದಾರಿಯಲ್ಲಿ ಬಹು ಪರಾಕ್ರಮಶಾಲಿಯಾದ ಜಾಮದಗ್ನಿರಾಮನು ಬಂದನು. ಕೈಯ್ಯಲ್ಲಿ ಕೊಡಲಿಯನ್ನೂ ಧನುಸ್ಸನ್ನೂ ಹಿಡಿದಿದ್ದನು, ಮತ್ತು ಕೋಪಗೊಂಡ ಸಿಂಹದಂತೆ ಇದ್ದನು. ರಾಮನ ಬಳಿಗೆ ಬಂದು ಅವನನ್ನು ನೋಡಿ ಇಂತೆಂದನು.

೧೫೬-೧೫೭. ಪರಶುರಾಮನು ಹೇಳಿದನು—ಎಲೈ ಮಹಾಬಾಹುವುಳ್ಳ ರಾಮನೆ! ನಾನು ಹೇಳುವುದನ್ನು ಕೇಳು. ಯುದ್ಧದಲ್ಲಿ ದುರ್ಮದರಾದ ರಾಜರನ್ನು ಅನೇಕಸಾರಿ ಸುತ್ತಿ ಕೊಂದು ಅವರಿಂದ ಭೂಮಿಯನ್ನು ತೆಗೆದುಕೊಂಡು ಅದನ್ನು ಬ್ರಾಹ್ಮಣರಿಗೆ ದಾನಮಾಡಿ ತಪಸ್ಸನ್ನು ಮಾಡಲು ಹೊರಟು ಹೋಗಿದ್ದೆನು. ಈಗ ನಿನ್ನ ಬಾಹುಬಲವನ್ನೂ ವೀರ್ಯವನ್ನೂ ಕೇಳಿ ನಿನ್ನೊಡನೆ ಯುದ್ಧಮಾಡಲು ಬಂದಿದ್ದೇನೆ.

೧೫೮. ಇಕ್ಷ್ವಾಕುವಿನ ವಂಶದವರನ್ನು ನಾನು ಕೊಲ್ಲಬಾರದು. ಅವರು ನಮ್ಮ ತಾಯಿಯ ತಂದೆಯ ವಂಶದವರು. ಆದರೆ ನಿನ್ನ ಈ ಪರಾಕ್ರಮವನ್ನು ಕೇಳಿ ಸಹಿಸುವುದಕ್ಕಾಗದೆ ಬಂದಿದ್ದೇನೆ.

ತಸ್ಮಾದ್ವದಾನ್ಯ ಯುದ್ಧಂ ಮೇ ದೀಯತಾಂ ರಘುಸತ್ತಮ ।
ರೌದ್ರಂ ಚಾಪಂ ದುರಾಧರ್ಷಂ ಭಜ್ಯಮಾನಂ ತ್ವಯಾ ನೃಪ ॥ ೧೫೯ ॥

ಇದಂ ತು ವೈಷ್ಣವಂ ಚಾಪಂ ತೇನ ತುಲ್ಯಮರಿಕ್ಷಯಂ ।
ಆರೋಪಯಸ್ವ ವೀರ್ಯೇಣ ನಿರ್ಜಿತೋಽಸ್ಮಿ ಸ್ವಯೈವ ಹಿ ॥ ೧೬೦ ॥

ಅಥವಾ ತ್ಯಜ ಶಸ್ತ್ರಾಣಿ ಪುರಸ್ತಾದ್ಬಲಿನೋ ಮಮ ।
ಶರಣಂ ಭಜ ಕಾಕುತ್‌ಸ್ಥ ಕಾತರೋಽಸ್ಯಥ ಚೇತಸಿ ॥ ೧೬೧ ॥

॥ ಈಶ್ವರ ಉವಾಚ ॥

ಏವಮುಕ್ತಸ್ತು ಕಾಕುತ್‌ಸ್ಥೋ ಭಾರ್ಗವೇಣ ಪ್ರತಾಪವಾನ್ ।
ತಚ್ಚಾಪಂ ತಸ್ಯ ಜಗ್ರಾಹ ತಚ್ಛಕ್ತಿಂ ವೈಷ್ಣವೀಮಪಿ ॥ ೧೬೨ ॥

ಶಕ್ತ್ಯಾ ವಿಯುಕ್ತಸ್ಸ ತದಾ ಜಾಮದಗ್ನಿಃ ಪ್ರತಾಪವಾನ್ ।
ನಿರ್ವೀರ್ಯೋ ನಷ್ಟತೇಜಾಶ್ಚ ಕರ್ಮಹೀನೋ ಯಥಾ ದ್ವಿಜಃ ॥ ೧೬೩ ॥

---

೧೫೯–೧೬೧. ಎಲೈ ಬಲಿಷ್ಠನಾದ ರಾಮನೆ! ನನಗೆ ಯುದ್ಧವನ್ನು ಕೊಡು. ನೀನು ಮುರಿದ ಆ ರುದ್ರಚಾಪವೂ ಮತ್ತು ನನ್ನಲ್ಲಿರುವ ಈ ವೈಷ್ಣವ ಚಾಪವೂ ಎರಡೂ ಸಮವಾದುವೇನೆ. ಈ ವೈಷ್ಣವ ಚಾಪದಿಂದ ನಾನು ಶತ್ರುಗಳನ್ನು ಗೆದ್ದಿದ್ದೇನೆ. ಇದನ್ನು ನಿನ್ನ ಪರಾಕ್ರಮದಿಂದ ಬಗ್ಗಿಸು. ಆಗ ಅದು ಬಗ್ಗಿದರೆ ಅದರ ಜೊತೆಯಲ್ಲಿಯೇ ನಾನೂ ಬಗ್ಗಿದಂತಾಗಿ ಜಿತನಾಗುತ್ತೇನೆ. ಇದನ್ನು ಬಗ್ಗಿಸುವುದಕ್ಕೆ ಆಗದೆ ನಿನಗೆ ಹೆದರಿಕೆಯಾದರೆ ಬಲಿಷ್ಠನಾದ ನನ್ನೆದುರಿಗೆ ನಿನ್ನ ಶಸ್ತ್ರಗಳೆಲ್ಲವನ್ನೂ ಬಿಸುಟು ನನ್ನನ್ನು ಶರಣು ಹೊಂದು.

೧೬೨. ಈಶ್ವರನು ಹೇಳಿದನು–ಭಾರ್ಗವರಾಮನು ಹೀಗೆಂದು ಹೇಳಲು ರಘುರಾಮನು ಅವನ ಆ ಚಾಪವನ್ನು ತೆಗೆದುಕೊಳ್ಳುತ್ತಾ ಅದರ ಜೊತೆಯಲ್ಲಿಯೇ ಅವನ ವೈಷ್ಣವಶಕ್ತಿಯನ್ನೂ ತೆಗೆದುಕೊಂಡು ಬಿಟ್ಟನು.

೧೬೩. ಜಮದಗ್ನಿಗೆ ಆ ಶಕ್ತಿಯೆಲ್ಲವೂ ಹೋಗಲು ಕರ್ಮಭ್ರಷ್ಟನಾದ ಬ್ರಾಹ್ಮಣನಂತೆ ನಿರ್ವೀರ್ಯನೂ ತೇಜೋಹೀನನೂ ಆದನು.

ವಿನಷ್ಟತೇಜಸಂ ದೃಷ್ಟ್ವಾ ಭಾರ್ಗವಂ ನೃಪಸತ್ತಮಾಃ ।
ಸಾಧು ಸಾಧ್ವಿತಿ ಕಾಕುತ್ಸ್ಥಂ ಪ್ರಶಶಂಸುರ್ಮುಹುರ್ಮುಹುಃ ॥ ೧೬೪ ॥

ಕಾಕುತ್ಸ್ಥಸ್ತು ಮಹಚ್ಚಾಪಂ ಗೃಹೀತ್ವಾರೋಪ್ಯ ಲೀಲಯಾ ।
ಸಂಧಾಯ ಬಾಣಂ ತಚ್ಚಾಪೇ ಭಾರ್ಗವಂ ಪ್ರಾಹ ವಿಸ್ಮಿತಂ ॥ ೧೬೫ ॥

॥ ರಾಮ ಉವಾಚ ॥

ಅನೇನ ಶರಮುಖ್ಯೇನ ಕಿಂ ಕರ್ತವ್ಯಂ ತವ ದ್ವಿಜ ।
ಛೇದ್ಮಿ ಲೋಕದ್ವಯಂ ಚಾಪಿ ಸ್ವರ್ಗಂ ವಾ ಹನ್ಮಿ ತೇ ದ್ವಿಜ ॥ ೧೬೬ ॥

॥ ಈಶ್ವರ ಉವಾಚ ॥

ತಂ ದೃಷ್ಟ್ವಾ ಘೋರಸಂಕಾಶಂ ಬಾಣಂ ರಾಮಸ್ಯ ಭಾರ್ಗವಃ ।
ಜ್ಞಾತ್ವಾ ತಂ ಪರಮಾತ್ಮೇತಿ ಪ್ರಹೃಷ್ಟೋ ರಾಮಮಬ್ರವೀತ್ ॥ ೧೬೭ ॥

---

೧೬೪. ಆ ಭಾರ್ಗವನಾದ ರಾಮನು ತೇಜೋಹೀನನಾದ ಮೇಲೆ ಅದನ್ನು ನೋಡಿ ಅಲ್ಲಿದ್ದ ರಾಜರೆಲ್ಲರೂ ಸಾಧು ಸಾಧು ಎಂಬುದಾಗಿ ರಘುರಾಮನನ್ನು ಹೊಗಳಿದರು.

೧೬೫. ರಘುರಾಮನು ಆ ಬಿಲ್ಲನ್ನು ತೆಗೆದುಕೊಂಡು ಸರಾಗವಾಗಿಯೇ ಬಗ್ಗಿಸಿ ಅದರಲ್ಲಿ ಬಾಣವನ್ನು ಹೂಡಿ ಭಾರ್ಗವ ರಾಮನನ್ನು ಕುರಿತು ನಗುತ್ತಾ ಇಂತೆಂದನು.

೧೬೬. ಎಲೈ ಬ್ರಾಹ್ಮಣನೇ! ಈ ಬಾಣವನ್ನು ಹೂಡಿದ್ದೇನೆ. ಇದು ವ್ಯರ್ಥವಾಗಕೂಡದು. ನಿನ್ನದು ಯಾವುದನ್ನು ಇದರಿಂದ ನಾಶಪಡಿಸಲಿ? ನಿನ್ನ ಎರಡು ಲೋಕಗಳನ್ನೂ ನಾಶಮಾಡಲೇ? ಅಥವಾ ಸ್ವರ್ಗವನ್ನು ನಾಶ ಮಾಡಲೇ? ಎರಡು ಲೋಕಗಳ ಪುಣ್ಯವನ್ನೂ ನಾಶಮಾಡಲೇ? ಅಥವಾ ಸ್ವರ್ಗದ ಪುಣ್ಯವನ್ನು ನಾಶಮಾಡಲೇ?

೧೬೭. ಈಶ್ವರನು ಹೇಳಿದನು-ರಾಮನು ಹಿಡಿದಿರುವ ಆ ಘೋರವಾದ ಬಾಣವನ್ನು ನೋಡಿ ಭಾರ್ಗವರಾಮನು ರಘುರಾಮನನ್ನು ಪರಮಾತ್ಮನೆಂದೇ ತಿಳಿದು ಸಂತೋಷದಿಂದ ಇಂತೆಂದನು.

॥ ಪರಶುರಾಮ ಉವಾಚ ॥

ರಾಮ ರಾಮ ಮಹಾಬಾಹೋ ನ ವೇದ್ಮಿ ತ್ವಾಂ ಸನಾತನಂ ।
ಜಾನಾಮ್ಯದ್ಯೈವ ಕಾಕುತ್‌ಸ್ಥ ತವ ವೀರ್ಯಗುಣಾದಿಭಿಃ ॥ ೧೬೮ ॥

ತ್ವಮಾದಿಪುರುಷಸ್ಸಾಕ್ಷಾತ್ಪರಂ ಬ್ರಹ್ಮ ಪರೋಽವ್ಯಯಃ ।
ತ್ವಮನಂತೋ ಮಹಾವಿಷ್ಣುರ್ವಾಸುದೇವಃ ಪರಾತ್ಪರಃ ॥ ೧೬೯ ॥

ನಾರಾಯಣಸ್ತ್ವಂ ಶ್ರೀಮಾಂಸ್ತ್ವಂ ಈಶ್ವರಸ್ತ್ವಂ ತ್ರಯೀಮಯಃ ।
ತ್ವಂ ಕಾಲಸ್ತ್ವಂ ಜಗತ್ಸರ್ವಂ ಮಕರಾದ್ಯಸ್ತ್ವಮೇವ ಹಿ ॥ ೧೭೦ ॥

ಸ್ರಷ್ಟಾ ಧಾತಾ ಚ ಸಂಹರ್ತಾ ತ್ವಮೇವ ಪರಮೇಶ್ವರಃ ।
ತ್ವಮಚಿಂತ್ಯೋ ಮಹದ್ಭೂತಂ ವಿಶ್ವರೂಪಸ್ತ್ವಣುರ್ಮಹಾನ್ ॥ ೧೭೧ ॥

---

೧೬೮. ಪರಶುರಾಮನು ಹೇಳಿದನು-ಎಲೈ ಮಹಾ ಬಾಹುವಾದ ರಾಮನೇ ! ನೀನು ಸನಾತನನಾದ ವಿಷ್ಣುವೆಂದು ತಿಳಿದಿರಲಿಲ್ಲ. ಈಗ ನಿನ್ನ ವೀರ್ಯ ಗುಣ ಮುಂತಾದುವುಗಳಿಂದ ಪರಮ ಪುರುಷನೆಂದು ತಿಳಿದೆನು.

೧೬೯. ನೀನೇ ಸಾಕ್ಷಾತ್ ಆದಿಪುರುಷನು. ಪರಬ್ರಹ್ಮನು. ಅವ್ಯಯನು. ನೀನೇ ಅನಂತನು. ಮಹಾವಿಷ್ಣುವು. ವಾಸುದೇವನು. ಪರಾತ್ಪರನು.

೧೭೦. ನೀನೇ ನಾರಾಯಣನು. ಶ್ರೀಮಂತನು. ಈಶ್ವರನು. ವೇದ ಸ್ವರೂಪನು. ಕಾಲನು. ಸಕಲವಾದ ಜಗತ್ತೂ ನೀನೇನೆ. ನೀನೇ ಮತ್ಸ್ಯಾದಿ ಅವತಾರಗಳನ್ನು ಮಾಡಿದವನು.

೧೭೧. ನೀನೇ ಸೃಷ್ಟಿಕರ್ತನು. ಕಾಪಾಡುವವನು. ನಾಶಮಾಡುವವನು. ನೀನೇ ಪರಮೇಶ್ವರನು. ನಿನ್ನನ್ನು ಚಿಂತಿಸಿ ಯಾರೆಂದು ತಿಳಿಯಲೇ ಆಗುವುದಿಲ್ಲ. ನೀನೇ ಮಹದ್ಭೂತವು. ವಿಶ್ವರೂಪನು. ಅಣುಸ್ವರೂಪನು. ಮಹದ್ರೂಪನೂ ಆಗಿದ್ದೀಯೆ.

ಚತುಷ್ಷಟ್‌ಪಂಚಗುಣವಾ‌ ತ್ವಮೇವ ಪುರುಷೋತ್ತಮಃ ।
ತ್ವಂ ಯಜ್ಞಸ್ತ್ವಂ ವಷಟ್ಕಾರಃ ತ್ವಮೋಂಕಾರಸ್ತ್ರಯೀಮಯಃ ॥ ೧೭೨ ॥

ವ್ಯಕ್ತಾವ್ಯಕ್ತಸ್ವರೂಪಸ್ತ್ವಂ ಗುಣಭೃನ್ನಿರ್ಗುಣಃ ಪರಃ ।
ಸ್ತೋತುಂ ತ್ವಾಹಮಶಕ್ತಶ್ಚ ವೇದಾನಾಮಪ್ಯಗೋಚರಂ ॥ ೧೭೩ ॥

ಯಚ್ಚಾಪಮಾನಂ ಕೃತವಾಂಸ್ತ್ವಾಂ ಯುಯುತ್ಸುತಯಾ ಪ್ರಭೋ ।
ತತ್ ಕ್ಷಂತವ್ಯಂ ತ್ವಯಾ ನಾಥ ಕೃಪಯಾ ಕೇವಲೇನ ತು ॥ ೧೭೪ ॥

ತವ ಶಕ್ತ್ಯಾ ನೃಪಾ‌ ಸರ್ವಾ‌ ಜಿತ್ವಾ ದತ್ವಾ ಮಹೀಂ ದ್ವಿಜಾನ್ ।
ತ್ವತ್ಪ್ರಸಾದವಶಾದೇವ ಶಾಂತಿಮಾಪ್ನೋಮಿ ನೈಷ್ಠಿಕೀಂ ॥ ೧೭೫ ॥

---

೧೭೨. ನೀನೇ ಧರ್ಮಾರ್ಥಕಾಮಮೋಕ್ಷಸ್ವರೂಪನು. ಷಡ್ಗುಣ ಮತ್ತು ಪಂಚಭೂತಗಳ ಸ್ವರೂಪನು. ನೀನೇ ಪುರುಷೋತ್ತಮನು. ನೀನೇ ಯಜ್ಞವು. ನೀನೇ ವಷಟ್ಕಾರನು. ನೀನೇ ಓಂಕಾರನು. ನೀನೇ ವೇದಗಳ ಸ್ವರೂಪನು.

೧೭೩. ನೀನೇ ವ್ಯಕ್ತಸ್ವರೂಪನು. ಅವ್ಯಕ್ತಸ್ವರೂಪನು. ಗುಣವಂತನು. ನಿರ್ಗುಣನು. ನಿನ್ನನ್ನು ಸ್ತೋತ್ರಮಾಡಲು ನನಗೆ ಆಗುವುದಿಲ್ಲ. ನೀನು ವೇದಗಳಿಗೂ ಗೋಚರವಾಗದವನು.

೧೭೪. ಯುದ್ಧಮಾಡಬೇಕೆಂಬ ಅಪೇಕ್ಷೆಯಿಂದ ನಿನಗೆ ಮಾಡಿದ ಅಪಮಾನವನ್ನು ನೀನು ಕೃಪೆಮಾಡಿ ಕ್ಷಮಿಸು.

೧೭೫. ಎಲೈ ಸ್ವಾಮಿಯೇ! ನಿನ್ನ ಶಕ್ತಿಯಿಂದಲೇ ಈ ರಾಜರೆಲ್ಲರನ್ನೂ ಜಯಿಸಿ ಭೂಮಿಯನ್ನು ಸಂಪಾದಿಸಿ ಬ್ರಾಹ್ಮಣರಿಗೆ ಕೊಟ್ಟೆನು. ಈಗ ನಿನ್ನ ಅನುಗ್ರಹದಿಂದಲೇ ಸ್ವಭಾವವಾದ ಶಾಂತಿಯನ್ನು ಹೊಂದುತ್ತೇನೆ.

|| ಈಶ್ವರ ಉವಾಚ ||

ಏವಮುಕ್ತ್ವಾ ತು ಕಾಕುತ್‌ಸ್ಥಂ ಜಾಮದಗ್ನಿರ್ಮಹಾತಪಾಃ ।
ಪರಿಣೀಯ ನಮಸ್ಕೃತ್ವಾ ರಾಘವಂ ಲೋಕರಕ್ಷಕಂ || ೧೭೬ ||

ಶತಕ್ರತುಕೃತಂ ಸ್ವರ್ಗಂ ತದಸ್ತ್ರಾಣಿ ನ್ಯವೇದಯತ್ |
ರಾಘವೋಽಥ ಮಹಾತೇಜಾ ವವಂದೇ ತಂ ಮಹಾಮುನಿಂ || ೧೭೭ ||

ವಿಧಿವತ್ಪೂಜಯಾಮಾಸ ಪಾದ್ಯಾರ್ಘ್ಯಾಚಮನಾದಿಭಿಃ |
ತೇನ ಸಂಪೂಜಿತಸ್ತತ್ರ ಜಾಮದಗ್ನಿರ್ಮಹಾತಪಾಃ || ೧೭೮ ||

ತಪಸ್ತಪ್ತುಂ ಯಯೌ ರಮ್ಯಂ ನರನಾರಾಯಣಾಶ್ರಮಂ |
ರಾಜಾ ದಶರಥಸ್ಸೋಽಥ ಪುತ್ರೈರ್ದಾರಸಮನ್ವಿತೈಃ || ೧೭೯ ||

ಸ್ವಾಂ ಪುರೀಂ ಸುಮುಹೂರ್ತೇನ ಪ್ರವಿವೇಶ ಮಹಾಬಲಃ ।
ರಾಘವೋ ಲಕ್ಷ್ಮಣಶ್ಚೈವ ಶತ್ರುಘ್ನೋ ಭರತಸ್ತಥಾ || ೧೮೦ ||

---

೧೭೬-೧೭೭. ಈಶ್ವರನು ಹೇಳಿದನು—ಮಹಾತಪಸ್ವಿಯಾದ ಜಾಮದಗ್ನಿ ರಾಮನು ರಘುರಾಮನಿಗೆ ಹಿಂಗೆ ಹೇಳಿ ಲೋಕರಕ್ಷಕನಾದ ಅವನಿಗೆ ನಮಸ್ಕರಿಸಿ ಇಂದ್ರನ ಬಳಿಯಲ್ಲಿ ತಾನು ಸಂಪಾದಿಸಿದ್ದ ಸ್ವರ್ಗವನ್ನು ನಾಶಮಾಡುವಂತೆ ಆ ಅಸ್ತ್ರವನ್ನು ಬಿಡುವುದಕ್ಕೆ ಹೇಳಿದನು. ರಾಮನು ಹಾಗೆಯೇ ಮಾಡಿ ಆ ಜಮದಗ್ನಿ ರಾಮನಿಗೆ ನಮಸ್ಕರಿಸಿದನು.

೧೭೮. ಶಾಸ್ತ್ರರೀತಿಯಿಂದ ಪಾದ್ಯ ಅರ್ಘ್ಯಗಳನ್ನೂ ಆಚಮನವನ್ನೂ ಕೊಟ್ಟು ಪೂಜಿಸಿದನು. ಆವನಿಂದ ಪೂಜಿತನಾಗಿ ಜಮದಗ್ನಿರಾಮನು ಹೊರಟು ಹೋದನು.

೧೭೯-೧೮೪. ಹಾಗೆ ಹೊರಟ ಜಾಮದಗ್ನಿರಾಮನು ನರನಾರಾಯಣಾಶ್ರಮಕ್ಕೆ ತಪಸ್ಸುಮಾಡಲು ಹೋದನು. ರಾಜನಾದ ದಶರಥನು ಹೆಂಡತಿ ಮಕ್ಕಳೊಡನೆ ತನ್ನ ಊರಿಗೆ ಹೊರಟು ಒಳ್ಳೆಯ ಮುಹೂರ್ತದಲ್ಲಿ ಪಟ್ಟಣದ ಒಳಕ್ಕೆ ಪ್ರವೇಶಿಸಿದನು. ರಾಮ ಲಕ್ಷ್ಮಣ ಭರತ ಶತ್ರುಘ್ನರು ತಮ್ಮ ತಮ್ಮ

ಸ್ವಾ್ವ ಸ್ವಾ್ವ ದಾರಾನುಪಾಗಮ್ಯ ರೇಮಿರೇ ಹೃಷ್ಟಮಾನಸಾಃ |
ತತ್ರ ದ್ವಾದಶವರ್ಷಾಣಿ ಸೀತಯಾ ಸಹ ರಾಘವಃ || ೧೮೧ ||

ರಮಯಾಮಾಸ ಧರ್ಮಾತ್ಮಾ ನಾರಾಯಣ ಇವ ಶ್ರಿಯಾ |
ತಸ್ಮಿನ್ನೇವ ತು ರಾಜಾಥ ಕಾಲೇ ದಶರಥಃ ಸುತಂ || ೧೮೨ ||

ಜ್ಯೇಷ್ಠಂ ರಾಜ್ಯೇನ ಸಂಯೋಕ್ತುಮೈಚ್ಛತ್ಪ್ರೀತ್ಯಾ ಮಹೀಪತಿಃ |
ತಸ್ಯ ಭಾರ್ಯಾಥ ಕೈಕೇಯೀ ಪುರಾ ದತ್ತವರಾ ಪ್ರಿಯಾ || ೧೮೩ ||

ಅಯಾಚತ ನೃಪಶ್ರೇಷ್ಠಂ ಭರತಸ್ಯಾಭಿಷೇಚನಂ ||
ವಿವಾಸನಂ ಚ ರಾಮಸ್ಯ ವತ್ಸರಾಣಿ ಚತುರ್ದಶ || ೧೮೪ ||

ಸ ರಾಜಾ ಸತ್ಯವಚನಾದ್ರಾಮಂ ರಾಜ್ಯಾದಥೋ ಸುತಂ |
ವಿವಾಸಯಾಮಾಸ ತದಾ ದುಃಖೇನ ಹತಚೇತನಃ || ೧೮೫ ||

ಶಕ್ತೋಽಪಿ ರಾಘವಸ್ತಸ್ಮಿ ರಾಜ್ಯಂ ಸಂತ್ಯಜ್ಯ ಧರ್ಮತಃ |
ದಶಗ್ರೀವವಧಾರ್ಥಾಯ ಪಿತುರ್ವಚನಹೇತುನಾ || ೧೮೬ ||

---

ಹೆಂಡತಿಯರೊಡನೆ ಸಂತೋಷವಾಗಿ ಸುಖದಿಂದಿದ್ದರು. ಈ ರೀತಿಯಾಗಿ ರಾಮನು ಸೀತೆಯೊಡನೆ ಹನ್ನೆರಡು ವರ್ಷಗಳ ಕಾಲದವರೆಗೂ ಶ್ರೀಮನ್ನಾರಾಯಣನು ಲಕ್ಷ್ಮಿಯೊಡನೆ ಸುಖಿಸುವಂತೆ ಸುಖಿಸಿದನು. ಆ ಕಾಲದಲ್ಲಿ ರಾಜನಾದ ದಶರಥನು ದೊಡ್ಡವನಾದ ರಾಮನನ್ನು ರಾಜ್ಯದಲ್ಲಿ ಅಭಿಷೇಕಮಾಡಲು ಇಷ್ಟಪಟ್ಟನು. ಪೂರ್ವದಲ್ಲಿ ದಶರಥನಿಂದ ವರವನ್ನು ಹೊಂದಿದ್ದ ಪ್ರೀತಿಪಾತ್ರ ಹೆಂಡತಿಯಾದ ಕೈಕೇಯಿಯು ರಾಜನನ್ನು ಕುರಿತು ಭರತನಿಗೆ ರಾಜ್ಯಾಭಿಷೇಕವನ್ನೂ ರಾಮನಿಗೆ ಹದಿನಾಲ್ಕು ವರ್ಷಗಳವರೆಗೆ ರಾಜ್ಯದಿಂದ ಹೊರಗೆ ಹೋಗುವಿಕೆಯನ್ನೂ ಕೇಳಿಕೊಂಡಳು.

೧೮೫. ಸತ್ಯವಚನವುಳ್ಳ ಆ ದಶರಥನು ಮಗನಾದ ರಾಮನನ್ನು ಬಹು ದುಃಖದಿಂದ ರಾಜ್ಯದಿಂದ ಹೊರಗೆ ಕಳುಹಿಸಿದನು.

೧೮೬–೧೮೭. ರಾಮನು ರಾಜ್ಯವನ್ನು ತೆಗೆದುಕೊಳ್ಳಲು ಸಾಮರ್ಥ್ಯವನ್ನು ಹೊಂದಿದ್ದರೂ ಧರ್ಮಕ್ಕೆ ಕಟ್ಟುಬಿದ್ದು ರಾಜ್ಯವನ್ನು ಬಿಟ್ಟು ದಶಗ್ರೀವನ

ವನಂ ಜಗಾಮ ಕಾಕುತ್ಸ್ಥೋ ಲಕ್ಷ್ಮಣೇನ ಚ ಸೀತಯಾ ।
ರಾಜಾ ಪುತ್ರವಿಯೋಗಾತ್ತು ಶೋಕೇನ ಚ ಮಮಾರ ಸಃ　　|| ೧೮೭ ||

ನಿಯುಜ್ಯಮಾನೋ ಭರತಃ ತಸ್ಮಿನ್ ರಾಜ್ಯೇ ಸ ಮಂತ್ರಿಭಿಃ ।
ನೈಚ್ಛದ್ರಾಜ್ಯಂ ಸ ಧರ್ಮಾತ್ಮಾ ಸೌಭ್ರಾತ್ರಮನುದರ್ಶಯನ್　　|| ೧೮೮ ||

ವನಮಾಗಮ್ಯ ಕಾಕುತ್ಸ್ಥಮಯಾಚದ್ಭ್ರಾತರಂ ತತಃ ।
ರಾಮಸ್ತು ಪಿತುರಾದೇಶಾನ್ನೈಚ್ಛದ್ರಾಜ್ಯಮರಿಂದಮಃ　　|| ೧೮೯ ||

ಸ್ವಪಾದುಕೇ ದದೌ ತಸ್ಮೈ ಭಕ್ತ್ಯಾ ಸೋಪಗೃಹೀತ್ತಥಾ ।
ರಾಮಸ್ಯ ಪಾದುಕೇ ರಾಜ್ಯಮವಾಪ್ಯ ಭರತಃ ಶುಭೇ　　|| ೧೯೦ ||

ಪ್ರತ್ಯಹಂ ಗಂಧಪುಷ್ಪೈಶ್ಚ ಪೂಜಯತ್ಯೈಕಯೀಸುತಃ ।
ತಪಶ್ಚರಣಯುಕ್ತೇನ ತಸ್ಮಿನ್ ತಸ್ಥೌ ನೃಪೋತ್ತಮಃ　　|| ೧೯೧ ||

---

ವಧೆಗೋಸ್ಕರ ಸೀತೆಯೊಡನೆಯೂ ಲಕ್ಷ್ಮಣನೊಡನೆಯೂ ಕಾಡಿಗೆ ಹೋದನು. ಇತ್ತ ದಶರಥನು ಪುತ್ರವಿಯೋಗವನ್ನು ಸಹಿಸಲಾರದೆ ಸತ್ತುಹೋದನು.

೧೮೮. ಆ ಭರತನನ್ನು ರಾಜ್ಯದಲ್ಲಿ ಮಂತ್ರಿಗಳಿರಬೇಕೆಂದು ಹೇಳಿದರೂ ತನ್ನ ಅಣ್ಣನಲ್ಲಿರುವ ಸ್ನೇಹದಿಂದ ಆ ರಾಜ್ಯವನ್ನು ಅನುಮೋದಿಸದೆ ಹೋದನು.

೧೮೯. ಅನಂತರ ರಾಮನ ಬಳಿಗೆ ಕಾಡಿಗೂ ಹೋಗಿ ಅವನನ್ನು ಬರುವಂತೆ ಕೇಳಿಕೊಂಡನು. ರಾಮನು ತಂದೆಯ ಅಪ್ಪಣೆಯಂತೆ ರಾಜ್ಯವನ್ನು ಅಪೇಕ್ಷಿಸಲಿಲ್ಲ.

೧೯೦–೧೯೧. ಆಗ ರಾಮನು ತನಗೆ ಬದಲಾಗಿ ತನ್ನ ಪಾದುಕೆಗಳನ್ನು ಭರತನಿಗೆ ಕೊಟ್ಟನು. ಆ ಭರತನು ಅವುಗಳನ್ನು ತೆಗೆದುಕೊಂಡು ಬಂದನು. ರಾಮನ ಪಾದುಕೆಗಳನ್ನು ರಾಜ್ಯದಲ್ಲಿಟ್ಟು ಆ ಭರತನು ಅದರ ಹೆಸರಿನಲ್ಲಿ ರಾಜ್ಯಭಾರಮಾಡುತ್ತಾ ಆ ಪಾದುಕೆಗಳನ್ನು ಗಂಧಪುಷ್ಪಾದಿಗಳಿಂದ ಪೂಜಿಸುತ್ತಿದ್ದನು ತಪಸ್ಸನ್ನು ಮಾಡುತ್ತಾ ಆ ರಾಜ್ಯದಲ್ಲಿಯೇ ಇದ್ದನು.

ಯಾವದಾಗಮನಂ ತಸ್ಯ ರಾಘವಸ್ಯ ಮಹಾತ್ಮನಃ |
ತಾವದ್ವ್ರತಪರಾಸ್ಸರ್ವೇ ಬಭೂವುಃ ಪುರವಾಸಿನಃ || ೧೯೨ ||

ರಾಘವಶ್ಚಿತ್ರಕೂಟಾದ್ರೌ ಭಾರದ್ವಾಜಾಶ್ರಮೇ ಶುಭೇ |
ರಮಯಾಮಾಸ ವೈದೇಹ್ಯಾ ಮಂದಾಕಿನ್ಯಾ ಜಲೇ ಶುಭೇ || ೧೯೩ ||

ಕದಾಚಿದಂಕೇ ವೈದೇಹ್ಯಾಃ ಶೇತೇ ರಾಮೋ ಮಹಾಮನಾಃ |
ಐಂದ್ರಃ ಕಾಕಸ್ಸಮಾಗಮ್ಯ ತಸ್ಮಿನ್ನೇವ ಚಚಾರ ಹ || ೧೯೪ ||

ಸ ದೃಷ್ಟ್ವಾ ಜಾನಕೀಂ ತತ್ರ ಕಂದರ್ಪಶರಪೀಡಿತಃ |
ವಿದದಾರ ನಖೈಸ್ತೀಕ್ಷ್ಣೈಃ ಪೀನೋನ್ನತಪಯೋಧರಂ || ೧೯೫ ||

ತಂ ದೃಷ್ಟ್ವಾ ವಾಯಸಂ ರಾಮಃ ಕುಶಂ ಜಗ್ರಾಹ ಪಾಣಿನಾ |
ಬ್ರಹ್ಮಣೋಸ್ತ್ರೇಣ ಸಂಯೋಜ್ಯ ಚಿಕ್ಷೇಪ ಧರಣೀಧರಃ || ೧೯೬ ||

---

೧೯೨. ರಾಮನು ಊರನ್ನು ಬಿಟ್ಟು ಕಾಡಿಗೆ ಹೋಗಿ ಮತ್ತೆ ಬರುವ ವರೆಗೂ ಆ ಊರಿನವರೆಲ್ಲರೂ ವ್ರತದಿಂದಲೇ ಇದ್ದರು.

೧೯೩–೧೯೪. ರಾಘವನು ಚಿತ್ರಕೂಟಪರ್ವತದಲ್ಲಿ ಮತ್ತು ಭರದ್ವಾಜಾಶ್ರಮದಲ್ಲಿ ವೈದೇಹಿಯೊಡನೆ ರಮಿಸುತ್ತಿದ್ದನು. ಒಂದು ಸಾರಿ ಮಂದಾಕಿನಿಯ ನೀರಿನಲ್ಲಿ ವಿಹರಿಸಿ ರಾಮನು ಸೀತೆಯ ತೊಡೆಯ ಮೇಲೆ ತಲೆಯನ್ನು ಹಾಕಿಕೊಂಡು ಮಲಗಿರಲು ಇಂದ್ರನ ಮಗನಾದ ಕಾಕಾಸುರನು ಅಲ್ಲಿಗೆ ಬಂದನು.

೧೯೫. ಆ ಕಾಕರಾಜನು ಜಾನಕಿಯನ್ನು ನೋಡಿ ಮನ್ಮಥಬಾಣಕ್ಕೆ ಒಳಗಾಗಿ ಆಕೆಯ ಸ್ತನಗಳನ್ನು ತನ್ನ ಉಗುರುಗಳಿಂದ ಪರಚಿ ಸೀಳಿದನು.

೧೯೬. ಆ ವಾಯಸವು ಹೀಗೆ ಮಾಡಿದುದನ್ನು ನೋಡಿ ರಾಮನು ಒಂದು ದರ್ಭೆಯನ್ನು ಕೈಗೆ ತೆಗೆದುಕೊಂದು ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಿ ಆ ಕಾಗೆಯ ಮೇಲೆ ಎಸೆದನು.

ತತ್ತೃಣಂ ಘೋರಸಂಕಾಶಂ ಜ್ವಾಲಾರಚಿತವಿಗ್ರಹಂ ।
ದೃಷ್ಟ್ವಾ ಕಾಕಃ ಸ ದುದ್ರಾವ ವಿಮುಂಚರ್ ಕಾತರಂ ಸ್ವರಂ ॥ ೧೯೭ ॥

ತತ್ಕಾಕಂ ಪ್ರತ್ಯನುಯಯೌ ರಾಮಸ್ಯಾಸ್ತ್ರಂ ಸುದಾರುಣಂ ।
ವಾಯಸಸ್ತ್ರಿಷು ಲೋಕೇಷು ಬಭ್ರಾಮ ಭಯಪೀಡಿತಃ ॥ ೧೯೮ ॥

ಯತ್ರ ಯತ್ರ ಯಯೌ ಕಾಕಃ ಶಾರಣಾರ್ಥೀ ವಿಹಾಯಸಾ ।
ತತ್ರ ತತ್ರ ತದಸ್ತ್ರಂ ತು ಪ್ರಾವಿವೇಶ ಭಯಾವಹಂ ॥ ೧೯೯ ॥

ಬ್ರಹ್ಮಾಣಮಿಂದ್ರಂ ವಹ್ನಿಂ ಚ ಯಮಂ ವರುಣಮೇವ ಚ ।
ಶರಣಾರ್ಥೀ ಜಗಾಮಾಶು ವಾಯಸಃ ಶಸ್ತ್ರಪೀಡಿತಃ ॥ ೨೦೦ ॥

---

೧೯೭. ಆ ಘೋರವಾದ ಅಸ್ತ್ರವು ಜ್ವಾಲೆಯನ್ನುಗುಳುತ್ತಾ ಬರಲು ಅದನ್ನು ಆ ಕಾಗೆಯು ನೋಡಿ ದುಃಖದಿಂದ ಅಪಸ್ವರವಾಗಿ ಕೂಗುತ್ತಾ ಓಡಲು ಮೊದಲಿಟ್ಟಿತು.

೧೯೮. ಆ ಭಯಂಕರವಾದ ರಾಮನ ಅಸ್ತ್ರವು ಕಾಗೆಯನ್ನು ಓಡಿಸಿ ಕೊಂಡು ಹೋಯಿತು. ಅದರ ಭಯದಿಂದ ಕಾಗೆಯು ಮೂರು ಲೋಕಗಳ ಲ್ಲಿಯೂ ಓಡಾಡಿತು.

೧೯೯. ಶರಣವನ್ನು ಅಪೇಕ್ಷಿಸುತ್ತ ಆ ಕಾಗೆಯು ಯಾವ ಯಾವ ಜಾಗ ದಲ್ಲಿ ಆಕಾಶಮಾರ್ಗದಲ್ಲಿಯೇ ಓಡಾಡುತ್ತಿದ್ದಿತೋ ಅಲ್ಲೆಲ್ಲಾ ಭಯಂಕರವಾದ ಆ ಅಸ್ತ್ರವು ಬೆನ್ನಟ್ಟಹೋಯಿತು.

೨೦೦. ಆ ಅಸ್ತ್ರದಿಂದ ತೊಂದರೆಪಡುತ್ತಿರುವ ವಾಯಸವು ಬ್ರಹ್ಮ, ಇಂದ್ರ, ವಹ್ನಿ, ವರುಣರನ್ನೆಲ್ಲಾ ಶರಣುಹೊಂದಲು ಹೋಯಿತು.

ತಂ ದೃಷ್ಟ್ವಾ ವಾಯಸಂ ಸರ್ವೇ ರುದ್ರಾದ್ಯಾ ದೇವದಾನವಾಃ ।
ನ ಶಕ್ತಾಃ ಸ್ಮ ವಯಂ ತ್ರಾತುಮಿತಿ ಪ್ರಾಹುರ್ವನೀಷಿಣಃ ॥
ಅಥ ಪ್ರೋವಾಚ ಭಗವಾನ್ ಬ್ರಹ್ಮಾ ತ್ರಿಭುವನೇಶ್ವರಃ ॥ ೨೦೧ ॥

॥ ಬ್ರಹ್ಮೋವಾಚ ॥

ಭೋ ಭೋ ಬಲಿಭುಜಾಂ ಶ್ರೇಷ್ಠ ತಮೇವ ಶರಣಂ ವ್ರಜ ।
ಸ ಏವ ರಕ್ಷಕಃ ಶ್ರೀವಾನ್ ಸರ್ವೇಷಾಂ ಕರುಣಾನಿಧಿಃ ॥ ೨೦೨ ॥

ರಕ್ಷತ್ಯೇವ ಕ್ಷಮಾಸಾರೋ ವತ್ಸಲಃ ಶರಣಾಗತಾನ್ ।
ಈಶ್ವರಃ ಸರ್ವಭೂತಾನಾಂ ಸೌಶೀಲ್ಯಾದಿಗುಣಾನ್ವಿತಃ ॥ ೨೦೩ ॥

ರಕ್ಷಿತಾ ಜೀವಲೋಕಸ್ಯ ಪಿತಾ ಮಾತಾ ಸಖಾ ಸುಹೃತ್ ।
ಶರಣಂ ವ್ರಜ ದೇವೇಶಂ ಕಾನ್ಯತ್ರಾಸ್ತ್ಯರಣಂ ದ್ವಿಜ ॥ ೨೦೪ ॥

---

೨೦೧. ಆ ವಾಯಸವನ್ನು ನೋಡಿ ರುದ್ರನೇ ಮುಂತಾದ ದೇವತೆಗಳು ಅದನ್ನು ನಾವು ನಿಗ್ರಹಿಸಿ ನಿನ್ನನ್ನು ಕಾಪಾಡುವ ಶಕ್ತಿಯು ನಮಗಿಲ್ಲ. ಎಂದರು. ಅನಂತರ ತ್ರಿಭುವನೇಶ್ವರನಾದ ಬ್ರಹ್ಮನು ಇಂತೆಂದನು.

೨೦೨. ಬ್ರಹ್ಮನು ಹೇಳಿದನು—ಎಲೈ ವಾಯಸರಾಜನೇ! ಆ ಸ್ವಾಮಿಯನ್ನೇ ಮರೆಹೊಂದು. ಆ ಸ್ವಾಮಿಯೇ ನಿನ್ನನ್ನು ರಕ್ಷಿಸುವನು. ಅವನು ಎಲ್ಲರನ್ನೂ ಕಾಪಾಡುವಂತಹ ಕರುಣಾನಿಧಿಯು.

೨೦೩. ಕ್ಷಮೆಯೇ ಮುಖ್ಯಗುಣವಾಗಿ ಉಳ್ಳ ಆತನು ಶರಣಾಗತರನ್ನು ಖಂಡಿತವಾಗಿಯೂ ರಕ್ಷಿಸುತ್ತಾನೆ. ಅವನು ಎಲ್ಲಾ ಪ್ರಾಣಿಗಳಿಗೂ ಕೇಳಿದುದನ್ನು ಕೊಡುವನು. ಸೌಶೀಲ್ಯಾದಿ ಗುಣಗಳಿಂದ ಕೂಡಿರುವನು.

೨೦೪. ಅವನು ಪ್ರಾಣಿಗಳೆಲ್ಲವನ್ನೂ ಕಾಪಾಡುವವನು. ಅವನು ಪ್ರಾಣಿಗಳಿಗೆ ತಂದೆಯು. ತಾಯಿಯು ಸ್ನೇಹಿತನು. ಬಂಧುವು. ಆ ಸ್ವಾಮಿಯನ್ನು ಶರಣುಹೊಂದು. ಮಿಕ್ಕೆಡೆಯಲ್ಲಿ ತೊಂದರೆಯಿಲ್ಲದಿರುವುದಿಲ್ಲ.

|| ಮಹಾದೇವ ಉವಾಚ ||

ಇತ್ಯುಕ್ತಸ್ತೇನ ಬಲಿಭುಕ್ ಬ್ರಹ್ಮಣಾ ರಘುನಂದನಂ |
ಉಪೇತ್ಯ ಸಹಸಾ ಭೂಮೌ ನಿಪಪಾತ ಭಯಾತುರಃ || ೨೦೫ ||

ಪ್ರಾಣಸಂಶಯಮಾಪನ್ನಂ ದೃಷ್ಟ್ವಾ ಸೀತಾಥ ವಾಯಸಂ |
ತ್ರಾಹಿ ತ್ರಾಹೀತಿ ಭರ್ತಾರಮುವಾಚ ವಿನಯಾದ್ವಿಭುಂ || ೨೦೬ ||

ಪುರತಃ ಪತಿತೋ ದೇವಿ ಧರಣ್ಯಾಂ ವಾಯಸಸ್ತದಾ |
ತಚ್ಛಿರಃ ಪಾದಯೋಸ್ತಸ್ಯ ಯೋಜಯಾಮಾಸ ಜಾನಕೀ || ೨೦೭ ||

ತಮುತ್ಥಾಪ್ಯ ಕರೇಣಾಥ ಕೃಪಾಪೀಯೂಷಸಾಗರಃ |
ರರಕ್ಷ ರಾಮೋ ಗುಣವಾನ್ ವಾಯಸಂ ದಯಯಾರ್ದ್ರಿತಃ || ೨೦೮ ||

ತಮಾಹ ವಾಯಸಂ ರಾಮೋ ಮಾ ಭೈರಿತಿ ದಯಾನಿಧಿಃ |
ಅಭಯಂ ತೇ ಪ್ರದಾಸ್ಯಾಮಿ ಗಚ್ಛ ಗಚ್ಛ ಯಥಾಸುಖಂ || ೨೦೯ ||

---

೨೦೫. ಮಹಾದೇವನು ಹೇಳಿದನು—ಬ್ರಹ್ಮನು ಆ ವಾಯಸಕ್ಕೆ ಹೀಗೆಂದು ಹೇಳಲು ಅದು ಆ ರಘುನಂದನನಾದ ರಾಮನ ಬಳಿಗೆ ಬೇಗ ಹೋಗಿ ಭಯದಿಂದ ಅವನ ಮುಂದೆ ನೆಲದ ಮೇಲೆ ಬಿದ್ದಿತು.

೨೦೬. ಈ ವಾಯಸವು ಬದುಕಲು ಬಹು ಕಷ್ಟಪಡುತ್ತಿರುವುದನ್ನು ನೋಡಿ ಸೀತೆಯು ಗಂಡನನ್ನು ಕುರಿತು ಈ ವಾಯಸವನ್ನು ಕಾಪಾಡು ಕಾಪಾಡು ಎಂದು ವಿನಯದಿಂದ ಕೇಳಿಕೊಂಡಳು.

೨೦೭. ಆ ವಾಯಸವು ನೆಲದಮೇಲೆ ಬಿದ್ದು ಒದ್ದಾಡುತ್ತಿರಲು ಆದರ ತಲೆಯು ರಾಮನ ಪಾದಗಳ ಮೇಲೆ ಬೀಳುವಂತೆ ಜಾನಕಿಯು ಮಾಡಿದಳು.

೨೦೮. ಕೃಪಾಸಾಗರನಾದ ಆ ರಾಮನು ಆ ಕಾಗೆಯನ್ನು ಕೈಯ್ಯಿಂದ ಹಿಡಿದೆಬ್ಬಿಸಿ ಆ ಬಾಣದಿಂದ ಪ್ರಾಣಹೋಗದಂತೆ ಕಾಪಾಡಿದನು.

೨೦೯. ಎಲೈ ವಾಯಸವೇ! ನೀನು ಹೆದರಬೇಡ. ನಿನಗೆ ಅಭಯವನ್ನು ಕೊಟ್ಟಿದ್ದೇನೆ. ಹೋಗೆಂಬುದಾಗಿ ಕೃಪಾಸಾಗರನಾದ ಆ ಶ್ರೀರಾಮನು ಹೇಳಿದನು.

ಪ್ರಣಮ್ಯ ರಾಘವಾಯಾಥ ಸಿತಾಯ್ಯೈ ಚ ಮುಹುರ್ಮುಹುಃ |
ಸ್ವರ್ಲೋಕಂ ಪ್ರಯಯಾವಾಶು ರಾಘವೇಣ ಚ ರಕ್ಷಿತಃ ॥ ೨೧೦ ॥

ತತೋ ರಾಮಸ್ತು ವೈದೇಹ್ಯಾ ಲಕ್ಷ್ಮಣೇನ ಚ ಧೀಮತಾ ।
ಉವಾಸ ಚಿತ್ರಕೂಟಾದ್ರೌ ಸ್ತೂಯಮಾನೋ ಮಹರ್ಷಿಭಿಃ ॥ ೨೧೧ ॥

ತಸ್ಮಿನ್ ಸಂಪೂಜ್ಯಮಾನಸ್ತು ಭಾರದ್ವಾಜೇನ ರಾಘವಃ ।
ಜಗಾಮಾತ್ರೇಸ್ಸುವಿಪುಲಮಾಶ್ರಮಂ ರಘುಸತ್ತಮಃ ॥ ೨೧೨ ॥

ತಮಾಗತಂ ರಘುವರಂ ದೃಷ್ಟ್ವಾ ಮುನಿವರೋತ್ತಮಃ |
ಭಾರ್ಯಯಾ ಸಹ ಧರ್ಮಾತ್ಮಾ ಪ್ರತ್ಯುದ್ಗಮ್ಯ ಮುದಾ ಯುತಃ ॥ ೨೧೩ ॥

ಆಸನೇ ಸುಶುಭೇ ಮುಖ್ಯೇ ನಿವೇಶ್ಯ ಸಹ ಸೀತಯಾ ।
ಅರ್ಘ್ಯಪಾದ್ಯಾಚಮನೀಯಂ ವಸ್ತ್ರಾಣಿ ವಿವಿಧಾನಿ ಚ ॥ ೨೧೪ ॥

---

೨೧೦. ಅನಂತರ ಆ ಕಾಗೆಯು ರಾಘವನಿಗೆ ನಮಸ್ಕರಿಸಿ ಸೀತೆಗೂ ನಮಸ್ಕರಿಸಿ ರಾಮನಿಂದ ಕಾಪಾಡಲ್ಪಟ್ಟಿದ್ದಾಗಿ ಸ್ವರ್ಗಲೋಕಕ್ಕೆ ಹೊರಟು ಹೋಯಿತು.

೨೧೧. ಆಗ ರಾಮನೂ ಲಕ್ಷ್ಮಣನೂ ಸೀತೆಯೂ ಕೂಡ ಮಹರ್ಷಿಗಳಿಂದ ಶ್ಲಾಘಿಸಲ್ಪಟ್ಟವರಾಗಿ ಆ ಚಿತ್ರಕೂಟದಲ್ಲಿಯೇ ಇದ್ದರು.

2೧೨. ಅನಂತರ ಆ ಭಾರದ್ವಾಜನಿಗೆ ಹೇಳಿ ಅವನಿಂದ ಗೌರವಿತನಾಗಿ ಹೊರಟು ಅತ್ರಿಯ ಆಶ್ರಮಕ್ಕೆ ಹೋದನು.

೨೧೩-೨೧೬. ರಘುರಾಮನು ಆಶ್ರಮಕ್ಕೆ ಬಂದುದನ್ನು ನೋಡಿ ಅತ್ರಿಮಹರ್ಷಿಯು ಹೆಂಡತಿಯೊಡನೆ ಎದುರುಗೊಂಡು ಸಂತೋಷದಿಂದ ಒಳ್ಳೆಯ ಆಸನವನ್ನು ಕೊಟ್ಟು ಕೂರಿಸಿ ಸೀತೆಯನ್ನೂ ಕೂರಿಸಿ ಅರ್ಘ್ಯಪಾದ್ಯ ಆಚಮನಗಳನ್ನೂ ಬಗೆಬಗೆಯಾದ ವಸ್ತ್ರಗಳನ್ನೂ ಒಡವೆಗಳನ್ನೂ ಗಂಧ ಹೂವುಗಳನ್ನೂ ಕೊಟ್ಟು

ಮಧುಪರ್ಕಂ ದದೌ ಪ್ರೀತ್ಯಾ ಭೂಷಣಂ ಚಾನುಲೇಪನಂ ।
ತಸ್ಯ ಪತ್ನ್ಯನಸೂಯಾ ತು ದಿವ್ಯಾಂಬರಮನುತ್ತಮಂ ॥ ೨೧೫ ॥

ಸೀತಾಯೈ ಪ್ರದದೌ ಪ್ರೀತ್ಯಾ ಭೂಷಣಾನಿ ದ್ಯುಮಂತಿ ಚ ।
ದಿವ್ಯಾನ್ನಪಾನಭಕ್ಷ್ಯಾದ್ಯೈಃ ಭೋಜಯಾಮಾಸ ರಾಘವಂ ॥ ೨೧೬ ॥

ತೇನ ಸಂಪೂಜಿತಸ್ತತ್ರ ಭಕ್ತ್ಯಾ ಪರಮಯಾ ಯುತಃ ।
ಉವಾಸ ದಿವಸಂ ತತ್ರ ಪ್ರೀತ್ಯಾ ರಾಮಃ ಸಲಕ್ಷ್ಮಣಃ ॥ ೨೧೭ ॥

ಪ್ರಭಾತೇ ವಿಮಲೇ ರಾಮಃ ಸಮುತ್ಥಾಯ ಮಹಾಮುನಿಂ ।
ಪರಿಣೀಯ ಪ್ರಾಣಮ್ಯಾಥ ಗಮನಾಯೋಪಚಕ್ರಮೇ ॥ ೨೧೮ ॥

ಅನುಜ್ಞಾತಸ್ತತಸ್ತೇನ ರಾಮೋ ರಾಜೀವಲೋಚನಃ ।
ಪ್ರಯಯೌ ದಂಡಕಾರಣ್ಯಂ ಮಹರ್ಷಿಕುಲಸಂಕುಲಂ ॥ ೨೧೯ ॥

---

ಮಧುಪರ್ಕವನ್ನೂ ಕೊಟ್ಟನು. ಆ ಅತ್ರಿಯ ಹೆಂಡತಿಯಾದ ಅನಸೂಯೆಯು ಸೀತೆಗೆ ಉತ್ತಮವಾದ ಬಟ್ಟೆಗಳನ್ನೂ ಒಡವೆಗಳನ್ನೂ ಕೊಟ್ಟು ದಿವ್ಯವಾದ ಅನ್ನ ಪಾನ ಭಕ್ಷ್ಯಭೋಜ್ಯಗಳನ್ನು ಬಡಿಸಿ ಊಟಮಾಡಿಸಿದಳು.

೨೧೭. ಆ ಅತ್ರಿಯು ರಾಮಲಕ್ಷ್ಮಣಸೀತೆಯರನ್ನು ಅಲ್ಲಿ ಗೌರವಿಸಲು ರಾಮನು ಬಹು ಭಕ್ತಿಯಿಂದ ಆ ದಿವಸವೆಲ್ಲವೂ ಅಲ್ಲಿಯೇ ಇದ್ದನು.

೨೧೮. ಬೆಳಗಾಗುತ್ತಲೂ ಎದ್ದು ರಾಮನು ಆ ಋಷಿಗೆ ಹೇಳಿ ನಮಸ್ಕರಿಸಿ ಪ್ರಯಾಣಕ್ಕೆ ಸಿದ್ಧನಾದನು.

೨೧೯. ರಾಜೀವದಂತೆ ಕಣ್ಣುಗಳುಳ್ಳ ಶ್ರೀರಾಮನು ಆ ಅತ್ರಿಯ ಅನುಮತಿಯನ್ನು ತೆಗೆದುಕೊಂಡು ಹೊರಟು ಮಹರ್ಷಿಗಳು ಅನೇಕವಾಗಿರುವ ದಂಡಕಾರಣ್ಯವನ್ನು ಹೊಂದಿದನು.

ತತ್ರಾತಿಭೀಷಣಂ ಘೋರಂ ವಿರಾಧಂ ನಾಮ ರಾಕ್ಷಸಂ ।
ಹತ್ವಾಥ ಶರಭಂಗಸ್ಯ ಪ್ರವಿವೇಶಾಶ್ರಮಂ ಶುಭಂ ॥ ೨೨೦ ॥

ಸ ತು ದೃಷ್ಟ್ವಾಥ ಕಾಕುತ್ಸ್ಥಂ ಸದ್ಯಃ ಸಂಕ್ಷೀಣಕಲ್ಮಷಃ ।
ಪ್ರಯಯೌ ಬ್ರಹ್ಮಲೋಕಂ ತು ಗಂಧರ್ವಾಪ್ಸರಸಾನ್ವಿತಂ ॥ ೨೨೧ ॥

ಸುತೀಕ್ಷ್ಣಸ್ಯಾಪ್ಯಗಸ್ತ್ಯಸ್ಯ ಹ್ಯಗಸ್ತ್ಯಭ್ರಾತುರೇವ ಚ ।
ಕ್ರಮೇಣ ಪ್ರಯಯೌ ರಾಮಸ್ತೈಶ್ಚ ಸಂಪೂಜಿತಸ್ತಥಾ ॥ ೨೨೨ ॥

ಪಂಚವಟ್ಯಾಂ ತತೋ ರಾಮೋ ಗೋದಾವರ್ಯಾಸ್ತಟೇ ಶುಭೇ ।
ಉವಾಸ ಸುಚಿರಂ ಕಾಲಂ ಸುಖೇನ ಪರಮೇಣ ಚ ॥ ೨೨೩ ॥

ತತ್ರ ಗತ್ವಾ ಮುನಿಶ್ರೇಷ್ಠಾಸ್ತಾಪಸಾ ಧರ್ಮಚಾರಿಣಃ ।
ಪೂಜಯಾಮಾಸುರಾತ್ಮೇಶಂ ರಾಮಂ ರಾಜೀವಲೋಚನಂ ॥ ೨೨೪ ॥

---

೨೨೦. ಆ ಕಾಡಿನಲ್ಲಿ ಭಯಂಕರನೂ ಕ್ರೂರನೂ ಆದ ವಿರಾಧನೆಂಬ ರಾಕ್ಷಸನನ್ನು ನೋಡಿ ಅವನನ್ನು ಕೊಂದು ಮುಂದೆ ಶರಭಂಗನ ಆಶ್ರಮಕ್ಕೆ ಹೋದನು.

೨೨೧. ಆ ಶರಭಂಗನು ಶ್ರೀರಾಮನ ದರ್ಶನವನ್ನು ಮಾಡಿದೊಡನೆಯೇ ಪಾಪಗಳನ್ನೆಲ್ಲಾ ಕಳೆದುಕೊಂಡು ಅಗ್ನಿಪ್ರವೇಶವನ್ನು ಮಾಡಿ ಗಂಧರ್ವರೂ ಅಪ್ಸರರೂ ಸೇವಿಸುತ್ತಿರಲು ಬ್ರಹ್ಮಲೋಕವನ್ನು ಹೊಂದಿದನು.

೨೨೨. ರಾಮನು ಅಲ್ಲಿಂದ ಹೊರಟು ಸುತೀಕ್ಷ್ಣ, ಅಗಸ್ತ್ಯ, ಅಗಸ್ತ್ಯಭ್ರಾತ ಇವರ ಆಶ್ರಮಗಳಿಗೆ ಹೋದನು. ಅಲ್ಲಿ ಅವರಿಂದ ಗೌರವಿತನಾಗಿ ಮುಂದಕ್ಕೆ ಹೋದನು.

೨೨೩. ಮುಂದೆ ಪಂಚವಟಿಗೆ ಹೋಗಿ ಅಲ್ಲಿ ಗೋದಾವರಿಯ ದಡದಲ್ಲಿ ಬಹುಕಾಲದವರೆಗೂ ಸುಖದಿಂದ ಸೀತೆ ಲಕ್ಷ್ಮಣರೊಡನೆ ಇದ್ದನು.

೨೨೪-೨೨೫. ಆ ದಂಡಕಾರಣ್ಯದಲ್ಲಿರುವ ಋಷಿಗಳೆಲ್ಲರೂ ರಾಮನ ಬಳಿಗೆ ಹೋಗಿ ಆ ಸ್ವಾಮಿಯನ್ನು ಪೂಜಿಸಿ ತಮಗೆ ಆ ದಂಡಕಾರಣ್ಯದಲ್ಲಿ

ಭಯಂ ವಿಜ್ಞಾಪಯಾಮಾಸುಸ್ತಂ ಚ ರಕ್ಷೋಗಣೇರಿತಂ ।
ತಾನಾಶ್ವಾಸ್ಯ ತು ಕಾಕುತ್‌ಸ್ಥೋ ದದೌ ಚಾಭಯದಕ್ಷಿಣಾಂ ॥ ೨೨೫ ॥

ತೇ ತು ಸಂಪೂಜಿತಾಸ್ತೇನ ಸ್ವಾಶ್ರಮಾನ್ ಸಂಪ್ರಪೇದಿರೇ ।
ತಸ್ಮಿನ್ ತ್ರಯೋದಶಾಬ್ದಾನಿ ರಾಮಸ್ಯ ಪರಿನಿರ್ಯಯುಃ ॥ ೨೨೬ ॥

ಗೋದಾವರ್ಯಾಸ್ತಟೇ ರಮ್ಯೇ ಪಂಚವಟ್ಯಾಂ ಮನೋರಮೇ ।
ತಸ್ಯ ಚಿತ್ತ್ವಥ ಕಾಲಸ್ಯ ರಾಕ್ಷಸೀ ಘೋರರೂಪಿಣೀ ॥ ೨೨೭ ॥

ರಾವಣಸ್ಯ ಸ್ವಸಾ ತತ್ರ ಪ್ರವಿವೇಶ ದುರಾಸದಾ ।
ಸಾ ತು ದೃಷ್ಟ್ವಾ ರಘುವರಂ ಕೋಟಿಕಂದರ್ಪಸನ್ನಿಭಂ ॥ ೨೨೮ ॥

ಇಂದೀವರದಳಶ್ಯಾಮಂ ಪದ್ಮಪತ್ರಾಯತೇಕ್ಷಣಂ ।
ಪ್ರೋನ್ನತಾಂಸಂ ಮಹಾಬಾಹುಂ ಕಂಬುಗ್ರೀವಂ ಮಹಾಹನುಂ ॥ ೨೨೯ ॥

---

ರಾಕ್ಷಸರಿಂದ ಉಂಟಾಗಿರುವ ತೊಂದರೆಯನ್ನೂ ಭಯವನ್ನೂ ವಿಜ್ಞಾಪಿಸಿಕೊಂಡರು. ಶ್ರೀರಾಮನು ಅವರನ್ನು ಸಮಾಧಾನಪಡಿಸಿ ಅವರಿಗೆ ಅಭಯದಕ್ಷಿಣೆಯನ್ನು ಕೊಟ್ಟನು.

೨೨೬–೨೩೩. ರಾಮನು ಅವರೆಲ್ಲರನ್ನೂ ಗೌರವಿಸಲು ಅವರು ತಮ್ಮ ತಮ್ಮ ಆಶ್ರಮಗಳಿಗೆ ಹೊರಟುಹೋದರು. ಆ ಉತ್ತಮವಾದ ಗೋದಾವರೀ ನದಿಯ ದಡದಲ್ಲಿರುವ ಸುಂದರವಾದ ಪಂಚವಟಿಯಲ್ಲಿ ಸೀತೆಲಕ್ಷ್ಮಣರೊಡನೆ ಹದಿಮೂರು ವರ್ಷಗಳವರೆಗೂ ಇದ್ದನು. ಕೆಲವು ಕಾಲದ ಮೇಲೆ ಘೋರವಾದ ಆಕಾರವುಳ್ಳ ರಾಕ್ಷಸಿಯೂ ರಾವಣನ ತಂಗಿಯೂ ಆದ ಶೂರ್ಪಣಖೆಯು ಆ ರಾಮನ ಆಶ್ರಮಕ್ಕೆ ಬಂದಳು. ಆಕೆಯು ಅಲ್ಲಿದ್ದ ಶ್ರೀರಾಮನನ್ನು ನೋಡಿದಳು. ಆತನು ಕೋಟಿಜನ ಕಂದರ್ಪರಂತೆ ಸುಂದರನಾಗಿದ್ದನು. ಇಂದೀವರದಂತೆ ಶ್ಯಾಮವರ್ಣಕ್ಕಿದ್ದನು. ಪದ್ಮದಂತೆ ಕಣ್ಣುಗಳಿದ್ದುವು ಭುಜಗಳು ಎದ್ದುಕೊಂಡಿದ್ದವು. ತೋಳುಗಳು ಉದ್ದವಾಗಿದ್ದವು. ಶಂಖದಂತೆ ಕತ್ತು ಇದ್ದಿತು.

ಸಂಪೂರ್ಣಚಂದ್ರಸದೃಶಂ ಸಸ್ಮಿತಾನನಪಂಕಜಂ ।
ಭೃಂಗಾವಳಿನಿಭೈಃ ಸ್ನಿಗ್ಧೈಃ ಕುಟಿಲೈಶ್ಶೀರ್ಷಜೈರ್ವೃತಂ ॥ ೨೩೦ ॥

ರಕ್ತಾರವಿಂದಸದೃಶಪದ್ಮಹಸ್ತತಲಾಂಕಿತಂ ।
ನಿಷ್ಕಲಂಕೇಂದುಸದೃಶನಖಪಂಕ್ತಿವಿರಾಜಿತಂ ॥ ೨೩೧ ॥

ಸ್ನಿಗ್ಧಕೋಮಲದೂರ್ವಾಭಂ ಸೌಕುಮಾರ್ಯನಿಧಿಂ ಶುಭಂ ।
ಪೀತಕೌಶೇಯವಸನಂ ಸರ್ವಾಭರಣಭೂಷಿತಂ ॥ ೨೩೨ ॥

ಯುವಾಸಮಾನವಯಸಂ ಜಗನ್ಮೋಹನವಿಗ್ರಹಂ ।
ದೃಷ್ಟ್ವಾ ತಂ ರಾಕ್ಷಸೀ ರಾಮಂ ಕಂದರ್ಪಶರಪೀಡಿತಾ ।
ಅಬ್ರವೀತ್ಸಮುಪೇತ್ಯಾಥ ರಾಮಂ ಕಮಲಲೋಚನಂ ॥ ೨೩೩ ॥

॥ ರಾಕ್ಷಸ್ಯುವಾಚ ॥

ಕಸ್ತ್ವಂ ತಾಪಸವೇಷೇಣ ವರ್ತಸೇ ದಂಡಕಾವನೇ ।
ಆಗತೋಽಸಿ ಕಿಮರ್ಥಂ ತು ತಾಪಸಾನಾಂ ದುರಾಸದೇ ।
ಶೀಘ್ರಮಾಚಕ್ಷ್ವ ತತ್ತ್ವೇನ ನಾನೃತಂ ವಕ್ತುಮರ್ಹಸಿ ॥ ೨೩೪ ॥

---

ಕಪೋಲಗಳು ದಪ್ಪವಾಗಿದ್ದವು. ಪೂರ್ಣಚಂದ್ರನಂತೆ ಮುಖವು ಪ್ರಕಾಶಿಸುತ್ತ ನಗುವಿಕೆಯಿಂದ ಕೂಡಿದ್ದಿತು. ತಲೆಗೂದಲು ಕಪ್ಪಗೂ ಗುಂಗುರುಗುಂಗುರಾಗಿಯೂ ಇದ್ದಿತು. ಕೆಂಪುಕಮಲದಂತೆ ಹಸ್ತಗಳಿದ್ದುವು. ಕಳಂಕವಿಲ್ಲದ ಚಂದ್ರನಂತಿರುವ ಉಗುರುಗಳಿದ್ದುವು. ಮೃದುವಾಗಿರುವ ಗರಿಕೆಯಂತೆ ಸುಕುಮಾರನಾಗಿದ್ದನು. ಹೊಂಬಣ್ಣದ ರೇಷ್ಮೆಯ ಬಟ್ಟೆಯನ್ನುಟ್ಟಿದ್ದನು. ಎಲ್ಲಾ ಅಲಂಕಾರಗಳನ್ನೂ ತೊಟ್ಟುಕೊಂಡಿದ್ದನು. ಯುವಕನಾಗಿದ್ದನು. ತನಗೆ ಸಮಾನವಾದ ವಯಸ್ಸುಳ್ಳವನಾಗಿದ್ದನು. (ಎಂದರೆ ತನಗೆ ಸರಿಯವನಾಗಿದ್ದನು.) ಇವನನ್ನು ನೋಡಿದರೆ ಜಗತ್ತೇ ಮೋಹಿಸುವಂತಿದ್ದನು. ಆ ರಾಕ್ಷಸಿಯು ಇಂತಹ ರಾಮನನ್ನು ನೋಡಿ ಮನ್ಮಥಬಾಧೆಗೊಳಗಾಗಿ ಅವನ ಬಳಿಗೆ ಬಂದು ಆತನನ್ನು ಕುರಿತು ಇಂತೆಂದಳು.

೨೩೪. ರಾಕ್ಷಸಿಯು ಹೇಳಿದಳು–ಅಯ್ಯಾ! ತಾಪಸವೇಷದಿಂದ ವಾಸವಾಗಿರುವ ನೀನಾರು? ತಾಪಸರಿಗೆ ಇರಲು ಕಷ್ಟವಾಗಿರುವ ಈ ಸ್ಥಳಕ್ಕೆ ನೀನೇಕೆ ಬಂದಿದ್ದೀಯೆ? ಬೇಗ ನಿಜವನ್ನು ಹೇಳು. ಸುಳ್ಳನ್ನು ಹೇಳಬೇಡ.

॥ ಮಹೇಶ್ವರ ಉವಾಚ ॥

ಇತ್ಯುಕ್ತಸ್ಸ ತದಾ ರಾಮಃ ಸಂಪ್ರಹಸ್ಯಾಬ್ರವೀದ್ವಚಃ ॥ ೨೩೫ ॥

॥ ರಾಮ ಉವಾಚ ॥

ರಾಜ್ಞೋ ದಶರಥಸ್ಯಾಹಂ ಪುತ್ರೋ ರಾಮ ಇತೀರಿತಃ ।
ಅಸೌ ಮಮಾನುಜೋ ಧನ್ವೀ ಲಕ್ಷ್ಮಣೋ ನಾಮ ಚಾನಘಃ ॥ ೨೩೬ ॥

ಪತ್ನೀ ಚೇಯಂ ಚ ಮೇ ಸೀತಾ ಜನಕಸ್ಯಾತ್ಮಜಾ ಪ್ರಿಯಾ ।
ಪಿತುರ್ವಚನನಿರ್ದೇಶಾದಹಂ ವನಮಿಹಾಗತಃ ॥ ೨೩೭ ॥

ವಿಚರಾಮೋ ಮಹಾರಣ್ಯಮೃಷೀಣಾಂ ಹಿತಕಾಮ್ಯಯಾ ।
ಆಗತಾಸಿ ಕಿಮರ್ಥಂ ತ್ವಮಾಶ್ರಮಂ ಮಮ ಸುಂದರಿ ॥
ಕಾ ತ್ವಂ ಕಸ್ಯ ಕುಲೇ ಜಾತಾ ಸರ್ವಂ ಸತ್ಯಂ ವದಸ್ವ ಮೇ ॥ ೨೩೮ ॥

---

೨೩೫. ಮಹೇಶ್ವರನು ಹೇಳಿದನು—ಆಕೆಯು ರಾಮನನ್ನು ಕುರಿತು ಇಂತೆನಲು ರಾಮನು ನಕ್ಕು ಇಂತೆಂದು ಹೇಳಿದನು.

೨೩೬-೨೩೭. ರಾಮನು ಹೇಳಿದನು—ನಾನು ರಾಜನಾದ ದಶರಥನ ಮಗನು. ನನ್ನ ಹೆಸರು ರಾಮನೆಂದು ಹೇಳುತ್ತಾರೆ. ಧನುಸ್ಸನ್ನು ಹಿಡಿದಿರುವ ಈತನು ನನ್ನ ತಮ್ಮನು. ಇವನ ಹೆಸರು ಲಕ್ಷ್ಮಣನು. ಇವನು ಯೋಗ್ಯನು. ಈಕೆಯು ನನ್ನ ಹೆಂಡತಿಯು. ಈಕೆಯ ಹೆಸರು ಸೀತೆಯೆಂದು. ಜನಕನ ಮಗಳು. ನನಗೆ ಬಹು ಪ್ರೀತಿಪಾತ್ರಳು. ತಂದೆಯ ಮಾತಿನಂತೆ ನಾನು ಈ ಕಾಡಿಗೆ ಬಂದಿದ್ದೇನೆ.

೨೩೮. ಋಷಿಗಳಿಗೆ ಅನುಕೂಲವನ್ನು ಮಾಡಿಕೊಡಬೇಕೆಂದು ಈ ಕಾಡುಗಳಲ್ಲೆಲ್ಲಾ ಸುತ್ತುತ್ತಿರುತ್ತೇವೆ. ಎಲೈ ಸುಂದರಿಯೆ! ನೀನೇತಕ್ಕೆ ನನ್ನ ಆಶ್ರಮಕ್ಕೆ ಬಂದಿದ್ದೀಯೆ? ನೀನಾರು? ಯಾವ ಕುಲದಲ್ಲಿ ಹುಟ್ಟಿದವಳು? ಎಲ್ಲ ವಿಷಯವನ್ನೂ ಸತ್ಯವಾಗಿ ಹೇಳು.

|| ಮಹೇಶ್ವರ ಉವಾಚ ||

ಇತ್ಯುಕ್ತ್ವಾ ಸಾ ತು ರಾಮೇಣ ಪ್ರಾಹ ವಾಕ್ಯಮಶಂಕಿತಾ || ೨೩೯ ||

|| ರಾಕ್ಷಸ್ಯುವಾಚ ||

ಅಹಂ ವಿಶ್ರವಸಃ ಪುತ್ರೀ ರಾವಣಸ್ಯ ಸ್ವಸಾ ನೃಪ ।
ನಾಮ್ನಾ ಸೂರ್ಪಣಖಾ ನಾಮ ತ್ರಿಷು ಲೋಕೇಷು ವಿಶ್ರುತಾ || ೨೪೦ ||

ಇದಂ ಚ ದಂಡಕಾರಣ್ಯಂ ಭ್ರಾತ್ರಾ ದತ್ತಂ ಮಮ ಪ್ರಭೋ ।
ಭಕ್ಷಯಂತ್ಯೃಷಿಸಂಘಾನ್ವೈ ವಿಚರಾಮಿ ಮಹಾವನೇ || ೨೪೧ ||

ತ್ವಾಂ ತು ದೃಷ್ಟ್ವಾ ನೃಪವರಂ ಕಂದರ್ಪಶರಪೀಡಿತಾ ।
ರಂತುಮಿಹ ತ್ವಯಾ ಸಾರ್ಧಮಾಗತಾಸ್ಮಿ ಸುನಿರ್ಭಯಾ || ೨೪೨ ||

ಮಮ ತ್ವಂ ನೃಪಶಾರ್ದೂಲ ಭರ್ತಾ ಭವಿತುಮರ್ಹಸಿ ।
ಇಮಾಂ ತವ ಸತೀಂ ಸೀತಾಂ ಭಕ್ಷಯಿಷ್ಯಾಮಿ ಪಾರ್ಥಿವ ।
ವನೇಷು ಗಿರಿಮುಖ್ಯೇಷು ರಮಯಾಮಿ ತ್ವಯಾ ಸಹ || ೨೪೩ ||

---

೨೩೯. ಮಹೇಶ್ವರನು ಹೇಳಿದನು–ರಾಮನು ಹೀಗೆಂದು ಹೇಳಲು ಆ ರಾಕ್ಷಸಿಯು ನಿರ್ಭಯವಾಗಿ ಇಂತೆಂದು ಹೇಳಿದಳು.

೨೪೦–೨೪೧. ರಾಕ್ಷಸಿಯು ಹೇಳಿದಳು–ನಾನು ವಿಶ್ರವಸ್ಸಿನ ಮಗಳು. ರಾವಣನ ತಂಗಿಯು. ನಾನು ಶೂರ್ಪಣಖೀ ಎಂದು ಮೂರು ಲೋಕದಲ್ಲಿಯೂ ಪ್ರಸಿದ್ಧಳಾಗಿದ್ದೇನೆ. ಈ ದಂಡಕಾರಣ್ಯವನ್ನು ನನ್ನ ಅಣ್ಣನು ನನಗೆ ಕೊಟ್ಟಿರುವನು. ಇಲ್ಲಿರುವ ಋಷಿಸಮೂಹವನ್ನು ತಿನ್ನುತ್ತಾ ಈ ಕಾಡಿನಲ್ಲಿ ವಾಸವಾಗಿದ್ದೇನೆ.

೨೪೨. ರಾಜನಾದ ನಿನ್ನನ್ನು ನೋಡಿ ಮನ್ಮಥ ಬಾಧೆಗೊಳಗಾಗಿ ನಿನ್ನೊಡನೆ ರಮಿಸಲು ನಿರ್ಭಯಳಾಗಿ ಇಲ್ಲಿಗೆ ಬಂದಿದ್ದೇನೆ.

೨೪೩. ನೀನು ನನಗೆ ಗಂಡನಾಗು. ಈಗಿರುವ ನಿನ್ನ ಹೆಂಡತಿಯಾದ ಸೀತೆಯನ್ನು ತಿಂದುಬಿಡುತ್ತೇನೆ. ಅನಂತರ ಈ ಪರ್ವತಪ್ರದೇಶಗಳಲ್ಲಿ ಸುಖವಾಗಿ ರಮಿಸುತ್ತಲಿರೋಣ.

|| ಮಹೇಶ್ವರ ಉವಾಚ ||

ಇತ್ಯುಕ್ತ್ವಾ ರಾಕ್ಷಸೀಂ ಸೀತಾಂ ಗ್ರಸಿತುಂ ವೀಕ್ಷ್ಯ ಚೋದ್ಯತಾಂ ।
ಶ್ರೀರಾಮಃ ಖಡ್ಗಮುದ್ಯಮ್ಯ ನಾಸಾಕರ್ಣೌ ಪ್ರಚಿಚ್ಛಿದೇ　|| ೨೪೪ ||

ರುದತೀ ಸಭಯಂ ಶೀಘ್ರಂ ರಾಕ್ಷಸೀ ವಿಕೃತಾನನಾ ।
ಖರಾಲಯಂ ಪ್ರವಿಶ್ಯಾಹ ತಸ್ಯ ರಾಮಸ್ಯ ಚೇಷ್ಟಿತಂ　|| ೨೪೫ ||

ಸ ತು ರಾಕ್ಷಸಸಾಹಸ್ರೈರ್ದೂಷಣತ್ರಿಶಿರಾವೃತಃ ।
ಆಜಗಾಮ ಭೃಶಂ ಯೋದ್ಧುಂ ರಾಘವಂ ಶತ್ರುಸೂದನಂ　|| ೨೪೬ ||

ತಾನ್ ರಾಮಃ ಕಾನನೇ ಘೋರೇ ಬಾಣೈಃ ಕಾಲಾಂತಕೋಪಮೈಃ ।
ನಿಜಘಾನ ಮಹಾಕಾಯಾನ್ ರಾಕ್ಷಸಾಂಸ್ತತ್ರ ಲೀಲಯಾ　|| ೨೪೭ ||

ಖರಂ ತ್ರಿಶಿರಸಂ ಚೈವ ದೂಷಣಂ ತು ಮಹಾಬಲಂ ।
ರಣೇ ನಿಪಾತಯಾಮಾಸ ಬಾಣೈರಾಶೀವಿಷೋಪಮೈಃ　|| ೨೪೮ ||

---

೨೪೪. ಮಹೇಶ್ವರನು ಹೇಳಿದನು—ಹೀಗೆಂದು ಹೇಳಿ ರಾಕ್ಷಸಿಯು ಸೀತೆಯನ್ನು ತಿನ್ನುವುದಕ್ಕೆ ಹೋಗುತ್ತಿದ್ದುದನ್ನು ನೋಡಿ ಶ್ರೀರಾಮನು ಕತ್ತಿಯನ್ನು ತೆಗೆದುಕೊಂಡು ಆ ಶೂರ್ಪಣಖಿಯ ಕಿವಿಮೂಗುಗಳನ್ನು ಕೊಯ್ದು ಬಿಟ್ಟನು.

೨೪೫. ಆ ಶೂರ್ಪಣಖಿಯು ಕಿವಿಮೂಗುಗಳನ್ನು ಕೊಯ಼್ಿಸಿಕೊಂಡು ವಿಕಾರವನ್ನು ಹೊಂದಿ ಭಯಂಕರವಾಗಿ ಅಳುತ್ತ ಖರನ ಮನೆಗೆ ಹೋಗಿ ಆ ರಾಮನು ಮಾಡಿದ ಕೃತ್ಯಗಳನ್ನು ಅವನೊಡನೆ ಹೇಳಿದಳು.

೨೪೬. ಆ ಖರನು ಸಹಸ್ರ ರಾಕ್ಷಸರನ್ನೂ ದೂಷಣ ತ್ರಿಶಿರರನ್ನೂ ಕರೆದುಕೊಂಡು ಆ ರಾಘವನೊಡನೆ ಯುದ್ಧಮಾಡಲು ಬಂದನು.

೨೪೭. ಶ್ರೀರಾಮನು ಆ ಘೋರವಾದ ಕಾಡಿನಲ್ಲಿ ಬಹು ಉಗ್ರವಾದ ಬಾಣಗಳಿಂದ ಅವರೆಲ್ಲರನ್ನೂ ಸುಲಭವಾಗಿಯೇ ಕೊಂದು ಹಾಕಿದನು.

೨೪೮. ಖರ, ತ್ರಿಶಿರ, ದೂಷಣರನ್ನೂ ಯುದ್ಧದಲ್ಲಿ ಸರ್ಪಸದೃಶವಾದ ಬಾಣಗಳಿಂದ ಕೊಂದನು.

ನಿಹತ್ಯ ರಾಕ್ಷಸಾನ್ ಸರ್ವಾನ್ ದಂಡಕಾರಣ್ಯವಾಸಿನಃ ।
ಪೂಜಿತಃ ಸುರಸಂಘೈಶ್ಚ ಸ್ತೂಯಮಾನೋ ಮಹರ್ಷಿಭಿಃ ॥ ೨೪೯ ॥

ಉವಾಸ ದಂಡಕಾರಣ್ಯೇ ಸೀತಯಾ ಲಕ್ಷ್ಮಣೇನ ಚ ।
ರಾಕ್ಷಸಾನಾಂ ವಧಂ ಶ್ರುತ್ವಾ ರಾವಣಃ ಕ್ರೋಧಮೂರ್ಛಿತಃ ॥ ೨೫೦ ॥

ಆಜಗಾಮ ಜನಸ್ಥಾನಂ ಮಾರೀಚೇನ ದುರಾತ್ಮನಾ ।
ಸಂಪ್ರಾಪ್ಯ ಪಂಚವಟ್ಯಾಂ ತು ದಶಗ್ರೀವಃ ಸ ರಾಕ್ಷಸಃ ॥ ೨೫೧ ॥

ಮಾಯಾವಿನಾ ಮಾರೀಚೇನ ಮೃಗರೂಪೇಣ ರಕ್ಷಸಾ ।
ಅಪಹೃತ್ಯಾಶ್ರಮಾದ್ದೂರಂ ತೌ ತು ದಶರಥಾತ್ಮಜೌ ॥ ೨೫೨ ॥

ಜಹಾರ ಸೀತಾಂ ರಾಮಸ್ಯ ಭಾರ್ಯಾಂ ಸ್ವವಧಕಾಮ್ಯಯಾ ।
ಹ್ರಿಯಮಾಣಾಂ ತು ತಾಂ ದೃಷ್ಟ್ವಾ ಜಟಾಯುಃ ಗೃಧ್ರರಾಟ್ ಬಲೀ ॥ ೨೫೩ ॥

ರಾಮಸ್ಯ ಸೌಹೃದಾತ್ತತ್ರ ಯುಯುಧೇ ತೇನ ರಕ್ಷಸಾ ।
ತಂ ಹತ್ವಾ ಬಾಹುವೀರ್ಯೇಣ ರಾವಣಃ ಶತ್ರುರಾವಣಃ ॥ ೨೫೪ ॥

---

೨೪೯-೨೫೪. ದಂಡಕಾರಣ್ಯದಲ್ಲಿದ್ದ ಆ ರಾಕ್ಷಸರನ್ನೆಲ್ಲಾ ರಾಮನು ಕೊಂದು ದೇವತೆಗಳಿಂದಲೂ ಮಹರ್ಷಿಗಳಿಂದಲೂ ಹೊಗಳಿಸಿಕೊಳ್ಳುತ್ತಾ ಸೀತೆ ಲಕ್ಷ್ಮಣರೊಡನೆ ದಂಡಕಾರಣ್ಯದಲ್ಲಿದ್ದನು. ಈ ರಾಕ್ಷಸರೆಲ್ಲರನ್ನೂ ರಾಮನು ಕೊಂದುದನ್ನು ಕೇಳಿ ರಾವಣನು ಕೋಪಗೊಂಡು ದುಷ್ಟನಾದ ಮಾರೀಚನೊಡನೆ ಅಲ್ಲಿಗೆ ಬಂದನು. ದಶಗ್ರೀವನಾದ ರಾವಣನು ಮಾರೀಚನೊಡನೆ ಬಂದು ಮಾರೀಚನಿಗೆ ಮಾಯೆಯಿಂದ ಮೃಗರೂಪವನ್ನು ಧರಿಸುವಂತೆ ಮಾಡಿ ಆ ಮೃಗ ರೂಪ ಮಾರೀಚನು ರಾಮಲಕ್ಷ್ಮಣರನ್ನು ಆಶ್ರಮದಿಂದ ದೂರಕ್ಕೆ ಕರೆದೊಯ್ಯಲು ರಾವಣನು ಇತ್ತ ಸೀತೆಯನ್ನು ರಾಮನು ತನ್ನನ್ನು ಕೊಲ್ಲಲೆಂಬ ಇಚ್ಛೆಯಿಂದ ಕದ್ದುಕೊಂಡುಹೋದನು. ಸೀತೆಯನ್ನು ರಾವಣನು ಕದ್ದುಕೊಂಡು ಹೋಗುವಾಗ ಇದನ್ನು ಗೃಧ್ರರಾಜನಾದ ಜಟಾಯುವು ತಿಳಿದು ರಾಮನಲ್ಲಿದ್ದ ಸ್ನೇಹದಿಂದ ಆ ರಾಕ್ಷಸನೊಡನೆ ಯುದ್ಧಮಾಡಿದನು. ಆದರೆ ರಾವಣನು ಆ ಜಟಾಯುವನ್ನು

ಪ್ರವಿವೇಶ ಪುರೀಂ ಲಂಕಾಂ ರಾಕ್ಷಸೈರ್ಬಹುಭಿರ್ವೃತಾಂ |
ಅಶೋಕವನಿಕಾಮಧ್ಯೇ ನಿಕ್ಷಿಪ್ಯ ಜನಕಾತ್ಮಜಾಂ || ೨೫೫ ||

ನಿಧನಂ ರಾಮಬಾಣೇನ ಕಾಂಕ್ಷಯನ್ ಸ್ವಗೃಹಂ ವಿಶನ್ |
ರಾಮಸ್ತು ರಾಕ್ಷಸಂ ಹತ್ವಾ ಮಾರೀಚಂ ಮೃಗರೂಪಿಣಂ || ೨೫೬ ||

ಪುನರಾವಿಶ್ಯ ತತ್ರಾಥ ಭ್ರಾತ್ರಾ ಸೌಮಿತ್ರಿಣಾ ತತಃ |
ರಕ್ಷಸಾಪಹೃತಾಂ ಭಾರ್ಯಾಂ ಜ್ಞಾತ್ವಾ ದಶರಥಾತ್ಮಜಃ || ೨೫೭ ||

ಪ್ರಭೂತಶೋಕಸಂತಪ್ತೋ ವಿಲಲಾಪ ಮಹಾಮತಿಃ |
ಮಾರ್ಗಮಾಣೋ ವನೇ ಸೀತಾಂ ಪಥಿ ಗೃಧ್ರಂ ಮಹಾಬಲಂ || ೨೫೮ ||

ವಿಚ್ಛಿನ್ನಪಾದಪಕ್ಷಂ ತಂ ಪತಿತಂ ಧರಣೀತಲೇ |
ರುಧಿರಾಪೂರ್ಣಸರ್ವಾಂಗಂ ದೃಷ್ಟ್ವಾ ವಿಸ್ಮಯಮಾಗತಃ || ೨೫೯ ||

ಪಪ್ರಚ್ಛ ರಾಘವಃ ಶ್ರೀಮಾನ್ ಕೇನ ಕಿಂ ತ್ವಂ ನಿಘಾತಿತಃ |
ಗೃಧ್ರಸ್ತು ರಾಘವಂ ದೃಷ್ಟ್ವಾ ಮಂದಂ ಮಂದಮುವಾಚ ಹ || ೨೬೦ ||

---

ಕೊಂದು ರಾಕ್ಷಸರಿಂದ ಕೂಡಿದ ಲಂಕೆಗೆ ಹೊರಟುಹೋದನು. ಆ ಜನಕನ ಮಗಳಾದ ಸೀತೆಯನ್ನು ರಾವಣನು ಅಶೋಕವನದ ಮಧ್ಯದಲ್ಲಿಟ್ಟು ರಾಮಬಾಣದಿಂದ ಸಾವನ್ನು ನಿರೀಕ್ಷಿಸುತ್ತಾ ಮನೆಗೆಹೋದನು. ರಾಮನು ಆ ಮೃಗರೂಪಿಯಾದ ಮಾರೀಚನನ್ನು ಕೊಂದು ಮತ್ತೆ ಆಶ್ರಮಕ್ಕೆ ಬಂದು ಅಲ್ಲಿ ಸೀತೆಯನ್ನು ಕಾಣದೆ ಆಕೆಯನ್ನು ರಾವಣನು ಕದ್ದುಕೊಂಡು ಹೋದನೆಂಬುದನ್ನು ತಿಳಿದು ಬಹು ವ್ಯಥೆಗೊಂಡು ಗಟ್ಟಿಯಾಗಿ ಅಳಲು ಮೊದಲಿಟ್ಟನು. ರಾಮಲಕ್ಷ್ಮಣರಿಬ್ಬರೂ ಕಾಡಿನಲ್ಲಿ ಸೀತೆಯನ್ನು ಹುಡುಕುತ್ತಾ ಬರುತ್ತಿರಲು ಕಾಲು ರೆಕ್ಕೆಗಳು ಕತ್ತರಿಸಿಹೋಗಿ ಬಿದ್ದು ಮೈಯೆಲ್ಲಾ ರಕ್ತವಾಗಿರುವ ಜಟಾಯುವನ್ನು ನೋಡಿ ಆಶ್ಚರ್ಯಗೊಂಡರು.

೨೬೦. ಅದನ್ನು ನೋಡಿದ ಶ್ರೀರಾಮನು ಆ ಹಕ್ಕಿಯನ್ನು ಕುರಿತು ನಿನ್ನನ್ನು ಯಾರು ಹೊಡೆದರು ? ಕಾರಣವೇನು ? ಎಂದನು. ಅದಕ್ಕೆ ಆ ಹಕ್ಕಿಯು ರಾಮನನ್ನು ನೋಡಿ ಮೆತ್ತಗೆ ಇಂತೆಂದಿತು.

॥ ಗೃಧ್ರ ಉವಾಚ ॥

ರಾವಣೇನ ಹೃತಾ ರಾಮ ತವ ಭಾರ್ಯಾ ಬಲೀಯಸಾ ।
ತೇನ ರಾಕ್ಷಸಮುಖ್ಯೇನ ಸಂಗ್ರಾಮೇ ನಿಹತೋಽಸ್ಮ್ಯಹಂ ॥ ೨೬೧ ॥

॥ ಮಹೇಶ್ವರ ಉವಾಚ ॥

ಇತ್ಯುಕ್ತ್ವಾ ರಾಘವಸ್ಯಾಗ್ರೇ ಸೋಽಭವತ್ತ್ಯಕ್ತಜೀವಿತಃ ।
ಸಂಸ್ಕಾರಮಕರೋತ್ ರಾಮಃ ತಸ್ಯ ಬ್ರಹ್ಮವಿಧಾನತಃ ॥ ೨೬೨ ॥

ಸ್ವಪದಂ ಚ ದದೌ ತಸ್ಯ ಯೋಗಿಗಮ್ಯಂ ಸನಾತನಂ ।
ರಾಘವಸ್ಯ ಪ್ರಸಾದೇನ ಸ ಗೃಧ್ರಃ ಪರಮಂ ಪದಂ ॥ ೨೬೩ ॥

ಹರೇಃ ಸಾಮಾನ್ಯರೂಪೇಣ ಮುಕ್ತಿಂ ಪ್ರಾಪ ಖಗೋತ್ತಮಃ ।
ಮಾಲ್ಯವಂತಂ ತತೋ ಗತ್ವಾ ಮಾತಂಗಸ್ಯಾಶ್ರಮೇ ಶುಭೇ ॥ ೨೬೪ ॥

---

೨೬೧. ಗೃಧ್ರವು ಹೇಳಿತು—ಎಲೈ ರಾಮನೇ! ಬಲಿಷ್ಠನಾದ ರಾವಣನು ನಿನ್ನ ಹೆಂಡತಿಯನ್ನು ಕದ್ದುಕೊಂಡು ಹೋದನು. ಆ ರಾಕ್ಷಸನಿಂದಲೇ ನನಗೆ ಈ ಪೆಟ್ಟು ಬಿದ್ದು ದುರವಸ್ಥೆಯು ಬಂದಿದೆ.

೨೬೨. ಮಹೇಶ್ವರನು ಹೇಳಿದನು—ಆ ಜಟಾಯುವು ರಾಮನಿಗೆ ಇಷ್ಟು ಹೇಳಿ ಪ್ರಾಣವನ್ನು ಬಿಟ್ಟಿತು. ಅನಂತರ ರಾಮನು ಬ್ರಹ್ಮವಿಧಾನದಿಂದ ಅದಕ್ಕೆ ಉತ್ತರಕ್ರಿಯೆಗಳನ್ನು ಮಾಡಿದನು.

೨೬೩. ಶ್ರೀರಾಮನು ಯೋಗಿಗಳಿಗೂ ಅಲಭ್ಯನಾದ ಸನಾತನವಾದ ವೈಕುಂಠವನ್ನು ಆ ಜಟಾಯುವಿಗೆ ಕೊಟ್ಟನು. ಜಟಾಯುವು ರಾಮನ ಅನುಗ್ರದಿಂದ ಪರಮಪದಕ್ಕೆ ಹೋದನು.

೨೬೪–೨೬೬. ಆ ಹಕ್ಕಿಯು ಹರಿಯ ಈ ಸಾಮಾನ್ಯರೂಪದಿಂದಲೇ ಮುಕ್ತಿಯನ್ನು ಹೊಂದಿತು. ಅನಂತರ ರಾಮನು ಮಾಲ್ಯವಂತನೆಂಬ ಪರ್ವತಕ್ಕೆ

ಆಭ್ಯಗಚ್ಛನ್ಮಹಾಭಾಗಾಂ ಶಬರೀಂ ಧರ್ಮಚಾರಿಣೀಂ ।
ಸಾ ತು ಭಾಗವತಶ್ರೇಷ್ಠಾ ದೃಷ್ಟ್ವಾ ತೌ ರಾಮಲಕ್ಷ್ಮಣೌ । ॥ ೨೬೫ ॥

ಪ್ರತ್ಯುದ್ಗಮ್ಯ ನಮಸ್ಕೃತ್ಯ ನಿವೇಶ್ಯ ಕುಶವಿಷ್ಟರೇ ।
ಪಾದಪ್ರಕ್ಷಾಲನಂ ಕೃತ್ವಾ ವನ್ಯೈಃ ಪುಷ್ಪೈಃ ಸುಗಂಧಿಭಿಃ ॥ ೨೬೬ ॥

ಅರ್ಚಯಾಮಾಸ ಭಕ್ತ್ಯಾ ಚ ಹರ್ಷನಿರ್ಭರಮಾನಸಾ ।
ಫಲಾನಿ ಚ ಸುಗಂಧೀನಿ ಮೂಲಾನಿ ಮಧುರಾಣಿ ಚ ॥ ೨೬೭ ॥

ನಿವೇದಯಾಮಾಸ ತದಾ ರಾಘವಾಭ್ಯಾಂ ದೃಢವ್ರತಾ ।
ಫಲಾನ್ಯಾಸ್ವಾದ್ಯ ಕಾಕುತ್‌ಸ್ಥಃ ತಸ್ಮೈ ಮುಕ್ತಿಂ ದದೌ ಪರಾಂ ॥ ೨೬೮ ॥

ತತಃ ಪಂಚವಟೀಂ ಗತ್ವಾ ರಾಘವಃ ಶತ್ರುಸೂದನಃ ।
ಜಘಾನ ರಾಕ್ಷಸಂ ತತ್ರ ಕಬಂಧಂ ಘೋರರೂಪಿಣಂ ॥ ೨೬೯ ॥

---

ಹೋಗಿ ಮತಂಗನ ಆಶ್ರಮದಲ್ಲಿ ಧರ್ಮಚಾರಿಣಿಯಾದ ಶಬರಿಯನ್ನು ನೋಡಿದನು. ಭಾಗವತರಲ್ಲಿ ಶ್ರೇಷ್ಠಳಾದ ಆಕೆಯು ಆ ರಾಮಲಕ್ಷ್ಮಣರನ್ನು ನೋಡಿ ಅವರನ್ನು ಎದುರುಗೊಂಡು ನಮಸ್ಕರಿಸಿ ಆಸನದಲ್ಲಿ ಕೂರಿಸಿ ಕಾಲನ್ನು ತೊಳೆದು ಕಾಡಿನ ಹೂಗಳಿಂದ ಪೂಜಿಸಿ ಸಂತೋಷಪಟ್ಟಳು.

೨೬೭-೨೬೮. ಒಳ್ಳೆಯ ಹಣ್ಣುಗಳನ್ನೂ ಮಧುರವಾದ ಗೆಡ್ಡೆಗೆಣಸುಗಳನ್ನೂ ಅವರಿಬ್ಬರಿಗೂ ಕೊಟ್ಟಳು. ಆ ಹಣ್ಣುಗಳನ್ನು ರಾಮನು ತಿಂದು ಆಕೆಗೆ ಮುಕ್ತಿಯನ್ನು ಕೊಟ್ಟನು.

೨೬೯. ಅನಂತರ ರಾಮನು ಪಂಚವಟಿಗೆ ಹೋಗಿ ಅಲ್ಲಿ ಘೋರರೂಪವುಳ್ಳ ಕಬಂಧವನ್ನು ಕೊಂದನು.

ತಂ ನಿಹತ್ಯ ಮಹಾವೀರ್ಯೋ ದದಾಹ ಸ್ವರ್ಗತಶ್ಚ ಸಃ ।
ತತೋ ಗೋದಾವರೀಂ ಗತ್ವಾ ರಾಮೋ ರಾಜೀವಲೋಚನಃ ॥ ೨೭೦ ॥

ಪಪ್ರಚ್ಛ ಸೀತಾಂ ಗಂಗೇ ತ್ವಂ ಕಿಂ ತಾಂ ಜಾನಾಸಿ ಮೇ ಪ್ರಿಯಾಂ ।
ನ ಶಶಂಸ ತದಾ ತಸ್ಮೈ ಸಾ ಗಂಗಾ ತಮಸಾವೃತಾ ॥ ೨೭೧ ॥

ಶಶಾಪ ರಾಘವಃ ಕ್ರೋಧಾದ್ರಕ್ತತೋಯಾಭವತ್ತದಾ ।
ತತೋ ಭಯಾತ್ಸಮುದ್ವಿಗ್ನಾ ಪುರಸ್ಕೃತ್ಯ ಮಹಾಮುನೀನ್ ॥ ೨೭೨ ॥

ಕೃತಾಂಜಲಿಪುಟಾ ದೀನಾ ರಾಘವಂ ಶರಣಂ ಗತಾ ।
ತತೋ ಮಹರ್ಷಯಸ್ಸರ್ವೇ ರಾಮಂ ಪ್ರಾಹುಸ್ಸನಾತನಂ ॥ ೨೭೩ ॥

॥ ಋಷಯ ಊಚುಃ ॥

ತ್ವತ್ಪಾದಕಮಲೋದ್ಭೂತಾ ಗಂಗಾ ತ್ರೈಲೋಕ್ಯಪಾವನೀ ।
ತ್ವಮೇವ ಹಿ ಜಗನ್ನಾಥ ತಾಂ ಶಾಪಾನ್ಮೋಕ್ತುಮರ್ಹಸಿ ॥ ೨೭೪ ॥

---

೨೭೦. ಆ ಕಬಂಧನನ್ನು ರಾಮನು ಸುಟ್ಟುಬಿಡಲು ಆತನು ಸ್ವರ್ಗವನ್ನು ಹೊಂದಿದನು. ಅನಂತರ ರಾಮನು ಗೋದಾವರಿಗೆ ಹೋಗಿ ಎಲೈ ಗಂಗೆಯೇ! ನನ್ನ ಪ್ರಿಯೆಯಾದ ಸೀತೆಯು ಎಲ್ಲಿ ಹೋದಳು? ಎಂದು ಕೇಳಿದನು.

೨೭೧-೨೭೩. ಆ ಗೋದಾವರಿಯು ಯಾವಾಗ ರಾಮನಿಗೆ ಸೀತೆಯ ವಿಷಯವನ್ನು ಹೇಳಲಿಲ್ಲವೋ ಆಗ ರಾಮನಿಗೆ ಕೋಪಬಂದು ಕಣ್ಣನ್ನು ಕೆಂಪಗೆ ಮಾಡಿಕೊಂಡು ಗೋದಾವರಿಯನ್ನು ಶಪಿಸಲು ಆ ನದಿಯು ಅಂದಿನಿಂದ ಕೆಂಪಾದ ನೀರುಳ್ಳದ್ದಾಗಿ ಆಯಿತು. ಆಗ ಆ ಗೋದಾವರಿಯು ಹೆದರಿಕೊಂಡು ಮಹಾಮುನಿಗಳನ್ನು ಮುಂದೆ ಮಾಡಿಕೊಂಡು ಬಂದು ರಾಮನಿಗೆ ಕೈ ಮುಗಿಯುತ್ತಾ ಶರಣುಹೊಂದಿದಳು. ಆಗ ಮಹರ್ಷಿಗಳೆಲ್ಲರೂ ಆ ಶ್ರೀರಾಮನನ್ನು ಕುರಿತು ಇಂತೆಂದರು.

೨೭೪. ಋಷಿಗಳು ಹೇಳಿದರು–ಎಲೈ ಸ್ವಾಮಿಯೆ! ನಿನ್ನ ಪಾದದಿಂದ ಹುಟ್ಟಿದ ಗಂಗೆಯೇ ಮೂರುಲೋಕವನ್ನೂ ಪವಿತ್ರವನ್ನಾಗಿ ಮಾಡುತ್ತಿರುವುದು. ಆದ್ದರಿಂದ ಅಂತಹ ನೀನು ಆ ಗಂಗೆಯನ್ನು ಈ ಶಾಪದಿಂದ ಬಿಡುಗಡೆ ಮಾಡು.

॥ ಮಹೇಶ್ವರ ಉವಾಚ ॥

ತತಃ ಪ್ರೋವಾಚ ಧರ್ಮಾತ್ಮಾ ರಾಮಃ ಶರಣವತ್ಸಲಃ ॥ ೧೭೫ ॥

॥ ರಾಮ ಉವಾಚ ॥

ಶಬರ್ಯಾಸ್ಸ್ನಾನಮಾತ್ರೇಣ ಸಂಗತಾ ಶುಭವಾರಿಣಾ ।
ಮುಕ್ತಾ ಭವತು ಮಚ್ಛಾಪಾದ್ಗಂಗೈಷಾ ಪಾಪನಾಶಿನೀ ॥ ೧೭೬ ॥

॥ ಮಹೇಶ್ವರ ಉವಾಚ ॥

ಏವಮುಕ್ತ್ವಾ ತು ಕಾಕುತ್ಸ್ಥಃ ಶಬರೀತೀರ್ಥಮುತ್ತಮಂ ।
ಗಂಗಾಗಯಾಸಮಂ ಚಕ್ರೇ ಶಾಂಗರ್ಕೋಟ್ಯಾ ಮಹಾಬಲಃ ॥ ೧೭೭ ॥

ಮಹಾಭಾಗವತಾನಾಂ ಚ ತೀರ್ಥಂ ಯಸ್ಯೋದರೇ ಭವೇತ್ ।
ತಚ್ಛರೀರಂ ಜಗದ್ವಂದ್ಯಂ ಭವಿಷ್ಯತಿ ನ ಸಂಶಯಃ ॥ ೧೭೮ ॥

---

೧೭೫. ಮಹೇಶ್ವರನು ಹೇಳಿದನು—ಅನಂತರ ಶರಣಾಗತರಲ್ಲಿ ಪ್ರೀತಿಯುಳ್ಳ ಧರ್ಮಾತ್ಮನಾದ ರಾಮನು ಇಂತೆಂದು ಹೇಳಿದನು.

೧೭೬. ರಾಮನು ಹೇಳಿದನು—ಶಬರಿಯು ಇಲ್ಲಿ ಸ್ನಾನಮಾಡುವುದರಿಂದ ಆ ಶುಭವಾದ ನೀರು ನಿನ್ನಲ್ಲಿ ಸೇರಿದ ಮಾತ್ರದಿಂದಲೇ ಈ ನನ್ನ ಶಾಪದಿಂದ ನೀನು ಬಿಡುಗಡೆಯನ್ನು ಹೊಂದುತ್ತೀಯೆ. ಅನಂತರ ನೀನು ಪಾಪಗಳನ್ನು ನಾಶಮಾಡುತ್ತೀಯೆ.

೧೭೭. ಮಹೇಶ್ವರನು ಹೇಳಿದನು—ಹೀಗೆಂದು ಹೇಳಿ ಆ ರಾಮನು ಅಲ್ಲಿ ಶಬರಿಯು ಸ್ನಾನಮಾಡಿದುದರಿಂದ ಅದನ್ನು ಪವಿತ್ರವನ್ನಾಗಿ ಮಾಡಿದುದಲ್ಲದೆ ಅಲ್ಲಿನ ಶಬರೀತೀರ್ಥವೆಂಬ ಸ್ಥಳವನ್ನು ಗಂಗೆ, ಗಯೆಗಳಿಗೆ ಸಮವಾದುದನ್ನಾಗಿ ಧನುಸ್ಸಿನ ತುದಿಯಿಂದ ಮಾಡಿದನು.

೧೭೮. ಮಹಾಭಾಗವತರಾಗಿದ್ದರೂ ಆ ತೀರ್ಥವು ಯಾವನ ಹೊಟ್ಟೆಗೆ ಹೋಗುವುದೋ ಆತನು ಜಗತ್ತಿಗೆ ಪೂಜ್ಯನಾಗುವನು. ಸಂಶಯವಿಲ್ಲ.

ಏವಮುಕ್ತ್ವಾ ತು ಕಾಕುತ್‌ಸ್ಥ ಋಷ್ಯಮೂಕಂ ಗಿರಿಂ ಯಯೌ |
ತತಃ ಪಂಪಾಸರಸ್ತೀರೇ ವಾನರೇಣ ಹನೂಮತಾ ॥ ೨೭೯ ॥

ಸಂಗತಸ್ತಸ್ಯ ವಚನಾತ್ ಸುಗ್ರೀವೇಣ ಸಮಾಗತಃ |
ಸುಗ್ರೀವವಚನಾದ್ಧತ್ವಾ ವಾಲಿನಂ ವಾನರೇಶ್ವರಂ ॥ ೨೮೦ ॥

ಸುಗ್ರೀವಮೇವ ತದ್ರಾಜ್ಯೇ ರಾಮಃ ಸಮಭ್ಯಷೇಚಯೇತ್ |
ಸ ತು ಸಂಪ್ರೇಷಯಾಮಾಸ ದಿದೃಕ್ಷುಃ ಜನಕಾತ್ಮಜಾಂ ॥ ೨೮೧ ॥

ಹನೂಮತ್ಪ್ರಮುಖಾನ್ ವೀರಾನ್ ವಾನರಾನ್ ವಾನರಾಧಿಪಃ |
ಸ ಲಂಘಯಿತ್ವಾ ಜಲಧಿಂ ಹನೂಮಾನ್ ಮಾರುತಾತ್ಮಜಃ ॥ ೨೮೨ ॥

ಪ್ರವಿಶ್ಯ ನಗರೀಂ ಲಂಕಾಂ ದೃಷ್ಟ್ವಾ ಸೀತಾಂ ದೃಢವ್ರತಾಂ |
ಉಪವಾಸಕೃಶಾಂ ದೀನಾಂ ಭೃಶಂ ಶೋಕಪರಾಯಣಾಂ ॥ ೨೮೩ ॥

ಮಲಪಂಕೇನ ದಿಗ್ಧಾಂಗೀಂ ಮಲಿನಾಂಬರಧಾರಿಣೀಂ |
ನಿವೇದ್ಯ ಚಾಪ್ಯಭಿಜ್ಞಾನಂ ಪ್ರವೃತ್ತಿಂ ಚ ನಿವೇದ್ಯ ಚ ॥ ೨೮೪ ॥

---

೨೭೯-೨೮೬. ಹೀಗೆಂದು ಹೇಳಿ ಆ ರಾಮನು ಋಷ್ಯಮೂಕಪರ್ವತಕ್ಕೆ ಹೋದನು. ಅನಂತರ ಅಲ್ಲಿರುವ ಪಂಪಾಸರೋವರದ ತೀರದಲ್ಲಿ ಕಪಿಯಾದ ಹನುಮಂತನೊಡನೆ ಸೇರಿಕೊಂಡನು. ಮತ್ತು ಅವನ ಮಾತಿನಂತೆ ಸುಗ್ರೀವ ನೊಡನೆ ಸ್ನೇಹವಾಯಿತು. ಸುಗ್ರೀವನ ಮಾತಿನಂತೆ ವಾನರರಾಜನಾದ ವಾಲಿಯನ್ನು ಕೊಂದು ಸುಗ್ರೀವನನ್ನೇ ವಾಲಿಯ ರಾಜ್ಯದಲ್ಲಿ ಅಭಿಷೇಕ ಮಾಡಿದನು. ಅನಂತರ ವಾನರಾಧಿಪನಾದ ಸುಗ್ರೀವನು ಹನುಮಂತನೇ ಮುಂತಾದ ಪ್ರಮುಖರನ್ನು ಸೀತೆಯನ್ನು ಹುಡುಕಲು ಕಳುಹಿಸಿದನು. ಮಾರು ತಾತ್ಮಜನಾದ ಹನುಮಂತನು ಸಮುದ್ರವನ್ನು ದಾಟಿ ಲಂಕೆಗೆ ಹೋಗಿ ಸೀತೆಯನ್ನು ನೋಡಿದನು. ಆಕೆಯು ದೃಢವ್ರತೆಯಾಗಿದ್ದಳು. ಉಪವಾಸದಿಂದ ಕಂಗೆಟ್ಟಿದ್ದಳು. ದುಃಖಿತೆಯಾಗಿದ್ದಳು. ಯಾವಾಗಲೂ ದುಃಖಪಡುತ್ತಿದ್ದಳು. ಮೈಯೆಲ್ಲವೂ ಕೊಳೆಯಿಂದ ಕೂಡಿದ್ದಿತು. ಕೊಳೆಬಟ್ಟೆಯನ್ನು ಧರಿಸಿದ್ದಳು. ತಾನು ತಂದಿದ್ದ ಗುರುತನ್ನು ಆಕೆಗೆ ಕೊಟ್ಟು ತಾನು ಬಂದ ವಿಷಯವನ್ನೂ

ಸಮಾಶ್ವಾಸ್ಯ ಚ ವೈದೇಹೀಂ ಬಭಂಜೋಪವನಂ ಭೃಶಂ ।
ವನಪಾಲಾನ್ ಕಿಂಕರಾಂಶ್ಚ ಪಂಚಸೇನಾಗ್ರನಾಯಕಾನ್ || ೨೮೫ ||

ಸಪ್ತಮಂತ್ರಿಸುತಾಂಸ್ತತ್ರ ರಾವಣಸ್ಯ ಸುತಂ ತಥಾ ।
ತೋರಣಸ್ತಂಭಮುತ್ಪಾಟ್ಯ ನಿಜಘಾನ ಸ್ವಯಂ ಹರಿಃ || ೨೮೬ ||

ರಾವಣಸ್ಯ ಸುತೇನಾಥ ನಿಗೃಹೀತೋ ಯದೃಚ್ಛಯಾ ।
ದೃಷ್ಟ್ವಾ ಚ ರಾಕ್ಷಸೇಂದ್ರಂ ತು ಸಂಭಾಷ್ಯ ಚ ತಥೈವ ಚ || ೨೮೭ ||

ದದಾಹ ನಗರೀಂ ಲಂಕಾಂ ಸ್ವಲಾಂಗೂಲಾಗ್ನಿನಾ ಕಪಿಃ ।
ತಯಾ ದತ್ತಮಭಿಜ್ಞಾನಂ ಗೃಹೀತ್ವಾ ಪುನರಾಗಮತ್ || ೨೮೮ ||

ಸೋಽಭಿಗಮ್ಯ ಮಹಾತೇಜಾ ರಾಮಂ ಕಮಲಲೋಚನಂ ।
ನ್ಯವೇದಯದ್ವಾನರೇಂದ್ರೋ ದೃಷ್ಟ್ವಾ ಸೀತೇತಿ ತತ್ತ್ವತಃ || ೨೮೯ ||

---

ಗಂಡನ ಯೋಗಕ್ಷೇಮವನ್ನೂ ಆಕೆಗೆ ತಿಳಿಸಿ ಆಕೆಯನ್ನು ಸಮಾಧಾನಪಡಿಸಿ ಅಲ್ಲಿನ ಉಪವನವನ್ನು ನಾಶಮಾಡಿದನು. ಆ ಕಪಿಯು ಅಲ್ಲಿನ ಹೆಬ್ಬಾಗಿಲಿನ ಕಂಬವನ್ನು ಕಿತ್ತುಕೊಂಡು ವನವನ್ನು ಕಾಯುವವರನ್ನೂ ಆಳುಗಳನ್ನೂ ಐದುಜನ ಸೇನಾಪತಿಗಳನ್ನೂ ಏಳುಜನ ಮಂತ್ರಿಮಕ್ಕಳನ್ನೂ ರಾವಣನ ಮಗನನ್ನೂ ತಾನಾಗಿಯೇ ಕೊಂದನು.

೨೮೭–೨೮೮. ರಾವಣನ ಮಗನಾದ ಇಂದ್ರಜಿತುವು ಕಪಿಯನ್ನು ಕಟ್ಟಲು ತಾನಾಗಿಯೇ ಆ ಕಪಿಯು ಬೇಕೆಂದು ಕಟ್ಟುಬಿದ್ದು ಅವನೊಡನೆ ಹೋಗಿ ರಾಕ್ಷಸೇಂದ್ರನಾದ ರಾವಣನನ್ನು ಕಂಡು ಅವನೊಡನೆ ಮಾತನಾಡಿತು. ಅವರು ಬಾಲಕ್ಕೆ ಬಟ್ಟೆ ಕಟ್ಟಿ ಬೆಂಕಿ ಹತ್ತಿಸಲು ಆ ಬೆಂಕಿಯಿಂದ ಲಂಕೆಯೆಲ್ಲವನ್ನೂ ಸುಟ್ಟು ಆ ಸೀತೆಯು ಕೊಟ್ಟ ಗುರುತನ್ನು ತೆಗೆದುಕೊಂಡು ಮತ್ತೆ ಬಂದಿತು.

೨೮೯-೨೯೦. ಆ ಹನುಮಂತನು ಹಿಂದಿರುಗಿ ಬಂದು ಸೀತೆಯನ್ನು ನೋಡಿದೆನೆಂದು ರಾಮನೊಡನೆ ಹೇಳಿದನು. ರಾಮನು ಸುಗ್ರೀವನೊಡನೆಯೂ

ಸುಗ್ರೀವಸಹಿತೋ ರಾಮೋ ವಾನರೈರ್ಬಹುಭಿರ್ವೃತಃ ।
ಮಹೋದಧೇಸ್ತಟಂ ಗತ್ವಾ ತತ್ರಾನೀಕಂ ನ್ಯವೇಶಯತ್ ॥ ೨೯೦ ॥

ರಾವಣಸ್ಯಾನುಜೋ ಭ್ರಾತಾ ವಿಭೀಷಣ ಇತೀರಿತಃ ।
ಧರ್ಮಾತ್ಮಾ ಸತ್ಯಸಂಧಶ್ಚ ಮಹಾಭಾಗವತೋತ್ತಮಃ ॥ ೨೯೧ ॥

ಜ್ಞಾತ್ವಾ ಸಮಾಗತಂ ರಾಮಂ ಪರಿತ್ಯಜ್ಯ ಸ್ವಪೂರ್ವಜಂ ।
ರಾಜ್ಯಂ ಸುತಂ ಚ ದಾರಾಂಶ್ಚ ರಾಘವಂ ಶರಣಂ ಯಯೌ ॥ ೨೯೨ ॥

ಪರಿಗೃಹ್ಯ ಚ ತಂ ರಾಮೋ ಮಾರುತೇರ್ವಚನಾತ್ ಪ್ರಭುಃ ।
ತಸ್ಮೈ ದತ್ವಾಽಭಯಂ ಸೌಮ್ಯಂ ರಕ್ಷೋರಾಜ್ಯೇಭ್ಯಷೇಚಯತ್ ॥ ೨೯೩ ॥

ತತಃ ಸಮುದ್ರಂ ಕಾಕುತ್ಸ್ಥಸ್ತರ್ತುಕಾಮಃ ಪ್ರಪದ್ಯ ವೈ ।
ಸುಪ್ರಸನ್ನಜಲಂ ತಂ ತು ದೃಷ್ಟ್ವಾ ರಾಘೋ ಮಹಾಬಲಃ ॥ ೨೯೪ ॥

---

ಕಪಿಗಳೊಡನೆಯೂ ಕೂಡಿಕೊಂಡು ಸಮುದ್ರದ ದಡಕ್ಕೆ ಹೋಗಿ ಅಲ್ಲಿ ಸೇನೆಯ ಶಿಬಿರವನ್ನು ಬಿಟ್ಟನು.

೨೯೧-೨೯೨. ರಾವಣನಿಗೆ ತಮ್ಮನಾದ ವಿಭೀಷಣನು ಮಹಾಭಾಗವತನು. ಧರ್ಮಿಷ್ಠನು. ಸತ್ಯಸಂಧನು. ರಾಮನು ಬಂದುದನ್ನು ತಿಳಿದು ಅಣ್ಣನಾದ ರಾವಣನನ್ನು ಬಿಟ್ಟು ರಾಜ್ಯ ಮಕ್ಕಳು ಹೆಂಡಿರನ್ನೂ ಕೂಡ ಬಿಟ್ಟು ಬಿಟ್ಟು ರಾಮನನ್ನು ಬಂದು ಮರೆಹೊಕ್ಕನು.

೨೯೩. ಹನುಮಂತನ ಮಾತಿನಮೇರೆಗೆ ರಾಮನು ಆತನಿಗೆ ಆಶ್ರಯವನ್ನು ಕೊಟ್ಟನು. ಮತ್ತು ಅಭಯವನ್ನೂ ಕೊಟ್ಟು ರಾಕ್ಷಸರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು.

೨೯೪-೨೯೭. ಅನಂತರ ಸಮುದ್ರವನ್ನು ದಾಟಬೇಕೆಂದು ರಾಮನು ಯೋಚಿಸಿ ಅದರಲ್ಲಿ ಬಹುನೀರು ಇರುವುದನ್ನು ನೋಡಿ ಧನುಸ್ಸನ್ನು

ಶಾರ್ಙ್ಗಮಾದಾಯ ಬಾಣೌಘೈಃ ಶೋಷಯಾಮಾಸ ವಾರಿಧಿಂ ।
ತತಶ್ಚ ಸರಿತಾಮೀಶಃ ಕಾಕುತ್ಸ್ಥಂ ಕರುಣಾನಿಧಿಂ ॥ ೧೯೫ ॥

ಪ್ರಪದ್ಯ ಶರಣಂ ದೇವಮರ್ಚಯಾಮಾಸ ವಾರಿಧಿಃ ।
ಪುನರಾಪೂರ್ಯ ಜಲಧಿಂ ವಾರುಣಾಸ್ತ್ರೇಣ ರಾಘವಃ ॥ ೧೯೬ ॥

ಉದರ್ಧೇರ್ವಚನಾತ್ಸೋಽಥ ಸಾಗರೇ ಮಕರಾಲಯೇ ।
ಗಿರಿಭಿರ್ವಾನರಾನೀತೈಃ ನಲಂ ಸೇತುಮಕಾರಯತ್ ॥ ೧೯೭ ॥

ತತೋ ಗತ್ವಾ ಪುರೀಂ ಲಂಕಾಂ ಸನ್ನಿವೇಶ್ಯ ಮಹಾಬಲಂ ।
ಸಮ್ಯಗಾಯೋಧನಂ ಚಕ್ರೇ ವಾನರಾಣಾಂ ಚ ರಕ್ಷಸಾಂ ॥ ೧೯೮ ॥

ತತೋ ದಶಾಸ್ಯತನಯಃ ಶಕ್ರಜಿದ್ರಾಕ್ಷಸೋ ಬಲೀ ।
ಬಬಂಧ ನಾಗಪಾಶೈಶ್ಚ ತಾವುಭೌ ರಾಮಲಕ್ಷ್ಮಣೌ ॥ ೧೯೯ ॥

ವೈನತೇಯಸ್ಸಮಾಗತ್ಯ ತಾನ್ಯಸ್ತ್ರಾಣಿ ವ್ಯಮೋಚಯತ್ ।
ರಾಕ್ಷಸಾ ನಿಹತಾಃ ಸರ್ವೇ ವಾನರೈಶ್ಚ ಮಹಾಬಲೈಃ ॥ ೨೦೦ ॥

---

ತೆಗೆದುಕೊಂಡು ಬಾಣಗಳನ್ನು ಬಿಟ್ಟು ಆ ಬಾಣಗಳಿಂದ ನೀರಿಲ್ಲದಿರುವಂತೆ ಮಾಡಿದನು. ಅನಂತರ ನೀರಿಗೆ ಅಧಿಪತಿಯಾದ ಸಮುದ್ರರಾಜನು ಕರುಣಾಶಾಲಿಯಾದ ರಾಮನನ್ನು ಶರಣುಹೊಂದಿ ಪೂಜಿಸಿದನು. ರಾಘವನು ಮತ್ತೆ ವರುಣಾಸ್ತ್ರದಿಂದ ಆ ಸಮುದ್ರವನ್ನು ತುಂಬಿದನು. ಸಮುದ್ರರಾಜನು ಹೇಳಿದಂತೆ ಆ ಸಮುದ್ರದಲ್ಲಿ ಪರ್ವತಗಳನ್ನು ಹಾಕಿ ನಲನ ಕೈಯ್ಯಲ್ಲಿ ಸೇತುವೆಯನ್ನು ಕಟ್ಟಿಸಿದನು.

೧೯೮. ಅನಂತರ ರಾಮನು ಲಂಕೆಗೆ ಹೋಗಿ ಅಲ್ಲಿ ಪಾಳೆಯವನ್ನು ಬಿಟ್ಟನು. ಆಗ ರಾಕ್ಷಸರಿಗೂ ಕಪಿಗಳಿಗೂ ದೊಡ್ಡ ಯುದ್ಧವು ನಡೆಯಿತು.

೧೯೯. ಅನಂತರ ರಾವಣನ ಮಗನಾದ ಇಂದ್ರಜಿತುವು ಸರ್ಪಾಸ್ತ್ರದಿಂದ ರಾಮಲಕ್ಷ್ಮಣರನ್ನು ಕಟ್ಟಿಹಾಕಿದನು.

೨೦೦. ಆಗ ಗರುಡನು ಬಂದು ಆ ಸರ್ಪಾಸ್ತ್ರವನ್ನು ಬಿಡಿಸಿದನು. ಅನಂತರ ಕಪಿಗಳು ಅನೇಕ ರಾಕ್ಷಸರನ್ನು ಕೊಂದರು.

ರಾವಣಸ್ಯಾನುಜಂ ವೀರಂ ಕುಂಭಕರ್ಣಂ ಮಹಾಬಲಂ |
ನಿಜಘಾನ ರಣೇ ರಾಮೋ ಬಾಣೈರಗ್ನಿಶಿಖೋಪಮೈಃ ‖ ೩೦೧ ‖

ಬ್ರಹ್ಮಾಸ್ತ್ರೇಣೇಂದ್ರಜಿತ್ ಕ್ರುದ್ಧಃ ಪಾತಯಾಮಾಸ ವಾನರಾನ್ |
ಹನೂಮತಾ ಸಮಾನೀತೋ ಮಹೌಷಧಿಮಹೀಧರಃ ‖ ೩೦೨ ‖

ತಸ್ಯಾನಿಲಸ್ಪರ್ಶವಶಾತ್ ಸರ್ವ ಏವ ಸಮುತ್ಥಿತಾಃ |
ತತೋ ರಾಮಾನುಜೋದಾರಃ ಶಕ್ರಜೇತಾರಮಾಹವೇ ‖ ೩೦೩ ‖

ನಿಪಾತಯಾಮಾಸ ಶರೈರ್ವೃತ್ರಂ ವಜ್ರಧರೋ ಯಥಾ |
ನಿರ್ಯಯಾವಥ ಪೌಲಸ್ತ್ಯೋ ಯೋದ್ಧುಂ ರಾಮೇಣ ಸಂಯುಗೇ ‖ ೩೦೪ ‖

ಚತುರಂಗಬಲೈಸ್ಸಾರ್ಧಂ ಮಂತ್ರಿಭಿಶ್ಚ ಮಹಾಬಲೈಃ |
ಸಮಂ ತತೋಽಭವದ್ಯುದ್ಧಂ ವಾನರಾಣಾಂ ಚ ರಕ್ಷಸಾಂ ‖ ೩೦೫ ‖

---

೩೦೧. ರಾಮನು ಯುದ್ಧದಲ್ಲಿ ರಾವಣನ ತಮ್ಮನೂ ವೀರನೂ ಮಹಾ ಬಲಿಷ್ಠನೂ ಆದ ಕುಂಭಕರ್ಣನನ್ನು ಬಾಣಗಳಿಂದ ಕೊಂದನು.

೩೦೨-೩೦೩. ಇಂದ್ರಜಿತುವು ಕೋಪಗೊಂಡು ಬ್ರಹಾಸ್ತ್ರದಿಂದ ಕಪಿಗಳೆಲ್ಲ ವನ್ನೂ ಕೊಂದನು. ಅನಂತರ ಹನುಮಂತನು ಮಹೌಷಧಿಗಳುಳ್ಳ ದ್ರೋಣಪರ್ವತ ವನ್ನು ತಂದು ಅದರ ಗಾಳಿಯಿಂದ ಆ ಕಪಿಗಳೆಲ್ಲವನ್ನೂ ಬದುಕಿಸಿ ಎಬ್ಬಿಸಿದನು. ಅನಂತರ ಲಕ್ಷ್ಮಣನು ಇಂದ್ರಜಿತುವನ್ನು ಇಂದ್ರನು ವೃತ್ರನನ್ನು ಕೊಂದಂತೆ ಕೊಂದನು.

೩೦೪-೩೦೫. ಅನಂತರ ರಾವಣನು ರಾಮನೊಡನೆ ಯುದ್ಧಮಾಡಲು ರಣರಂಗಕ್ಕೆ ಹೊರಟನು. ಅವನ ಜೊತೆಯಲ್ಲಿ ಚತುರಂಗಸೇನೆಗಳೂ ಬಲಿಷ್ಠ ರಾದ ಮಂತ್ರಿಗಳೂ ಹೊರಟರು. ಆಗ ರಾಕ್ಷಸರಿಗೂ ವಾನರರಿಗೂ ಘೋರವಾದ ಯುದ್ಧವು ನಡೆಯಿತು.

ರಾಮರಾವಣಯೋಶ್ಚೈವ ತಥಾ ಸೌಮಿತ್ರಿಣಾ ಸಹ ।
ಶಕ್ತ್ಯಾ ನಿಪಾತಯಾಮಾಸ ಲಕ್ಷ್ಮಣಂ ರಾಕ್ಷಸೇಶ್ವರಃ ॥ ೩೦೬ ॥

ತತಃ ಕ್ರುದ್ಧೋ ಮಹಾತೇಜಾ ರಾಘವೋ ರಾಕ್ಷಸಾಂತಕಃ ।
ಜಘಾನ ರಾಕ್ಷಸಾನ್ ವೀರಾನ್ ಶರೈಃ ಕಾಲಾಂತಕೋಪಮೈಃ ॥ ೩೦೭ ॥

ಪ್ರದೀಪ್ತೈರ್ಬಾಣಸಾಹಸ್ರೈಃ ಕಾಲದಂಡೋಪಮೈರ್ಭೃಶಂ ।
ಛಾದಯಾಮಾಸ ಕಾಕುತ್ಸ್ಥೋ ದಶಗ್ರೀವಂ ಚ ರಾಕ್ಷಸಂ ॥ ೩೦೮ ॥

ಸ ತು ನಿರ್ಭಿನ್ನ ಸರ್ವಾಂಗೋ ರಾಘವಾಸ್ತ್ರೈರ್ನಿಶಾಚರಃ ।
ಭಯಾದುದ್ದ್ರಾವ ರಣತೋ ಲಂಕಾಂ ಪ್ರತಿ ನಿಶಾಚರಃ ॥ ೩೦೯ ॥

ಜಗದ್ರಾಮಮಯಂ ಪಶ್ಯನ್ನಿರ್ವೇದಾದ್ಗೃಹಮಾವಿಶತ್ ।
ತತೋ ಹನೂಮತಾನೀತೋ ಮಹೌಷಧಿಮಹಾಗಿರಿಃ ॥ ೩೧೦ ॥

ತೇನ ರಾಮಾನುಜಸ್ತೂರ್ಣಂ ಲಬ್ಧಸಂಜ್ಞೋಽಭವತ್ತದಾ ।
ದಶಗ್ರೀವಸ್ತತೋ ಹೋಮಮಾರೇಭೇ ಜಯಕಾಂಕ್ಷಯಾ ॥ ೩೧೧ ॥

---

೩೦೬-೩೦೭. ರಾಮರಾವಣರಿಗೂ ಅಂತೆಯೇ ರಾವಣಲಕ್ಷ್ಮಣರಿಗೂ ಯುದ್ಧವು ನಡೆಯಿತು. ರಾಕ್ಷಸೇಶ್ವರನಾದ ರಾವಣನು ಶಕ್ತಿಯೆಂಬ ಅಸ್ತ್ರವನ್ನು ಬಿಟ್ಟು ಲಕ್ಷ್ಮಣನನ್ನು ಕೆಡಗಿದನು. ಅನಂತರ ರಾಮನು ಕೋಪಗೊಂಡು ರಾಕ್ಷಸರೆಲ್ಲರನ್ನೂ ರಣರಂಗದಲ್ಲಿ ಕೊಂದನು.

೩೦೮-೩೧೨. ಯಮದಂಡದಂತಿರುವ ಅನೇಕವಾದ ಬಾಣಗಳಿಂದ ರಾಕ್ಷಸನಾದ ದಶಗ್ರೀವನನ್ನು ರಾಮನು ಮುಚ್ಚಿದನು. ಆ ನಿಶಾಚರನ ಮೈ ಕೈ ಯೆಲ್ಲವೂ ಕತ್ತರಿಸಿ ನೋವಾಗಲು ಭಯದಿಂದ ಲಂಕೆಗೆ ಓಡಿಹೋದನು. ಈ ಪ್ರಪಂಚವೇ ರಾಮನಿಂದ ತುಂಬಲ್ಪಟ್ಟಿದೆಯೆಂದು ತಿಳಿಯುತ್ತ ಎಲ್ಲಾ ಕಡೆ ಯಲ್ಲಿಯೂ ರಾಮನನ್ನೇ ನೋಡುತ್ತ ಓಡಿಹೋಗಿ ಮನೆಯನ್ನು ಹೊಕ್ಕನು ಅನಂತರ ಹನುಮಂತನು ಚಂದ್ರದ್ರೋಣಪರ್ವತವನ್ನು ತಂದು ಲಕ್ಷ್ಮಣನಿಗೆ ಜ್ಞಾನಬರುವಂತೆ ಮಾಡಿದನು. ಅನಂತರ ದಶಗ್ರೀವನು ಜಯಾಪೇಕ್ಷೆಯಿಂದ ಹೋಮವನ್ನು ಮಾಡಲು ಆರಂಭಿಸಿದನು. ಆ ಅಭಿಚಾರಾತ್ಮಕವಾದ

ಧ್ವಂಸಿತಂ ವಾನರೇಂದ್ರೈಸ್ತದಭಿಚಾರಾತ್ಮಕಂ ರಿಪೋಃ ।
ಪುನರ್ಯುದ್ಧಾಯ ಪೌಲಸ್ತ್ಯೋ ರಾಮೇಣ ಸಹ ನಿರ್ಯಯೌ ॥ ೩೧೨ ॥

ದಿವ್ಯಂ ಸ್ಯಂದನಮಾರುಹ್ಯ ರಾಕ್ಷಸೈರ್ಬಹುಭಿರ್ಯುತಃ ।
ತತಶ್ಶತಮಖೋ ದಿವ್ಯಂ ರಥಂ ಹರ್ಯಶ್ವಸಂಯುತಂ ॥ ೩೧೩ ॥

ರಾಘವಾಯ ಸಸೂತಂ ಹಿ ಪ್ರೇಷಯಾಮಾಸ ಬುದ್ಧಿಮಾನ್ ।
ರಥಂ ಮಾತಲಿನಾನೀತಂ ಸಮಾರುಹ್ಯ ರಘೂತ್ತಮಃ ॥ ೩೧೪ ॥

ಸ್ತೂಯಮಾನಃ ಸುರಗಣೈಃ ಯುಯುಧೇ ತೇನ ರಕ್ಷಸಾ ।
ತತೋ ಯುದ್ಧಮಭೂದ್ಘೋರಂ ರಾಮರಾವಣಯೋರ್ಮಹತ್ ॥೩೧೫॥

ಸಾಪ್ತಾಹ್ನಿಕಮಹೋರಾತ್ರಂ ಶಸ್ತ್ರಾಸ್ತ್ರೈರತಿಭೀಷಣೈಃ ।
ವಿಮಾನಸ್ಥಾಸ್ಸುರಾಸ್ಸರ್ವೇ ದದೃಶುಸ್ತತ್ರ ಸಂಯುಗಂ ॥ ೩೧೬ ॥

---

ಹೋಮವನ್ನು ಕಪಿಗಳು ನಾಶಮಾಡಿದರು. ಅನಂತರ ರಾವಣನು ರಾಮನೊಡನೆ ಯುದ್ಧಮಾಡಲು ಮತ್ತೆ ಹೊರಟನು.

೩೧೩-೩೧೫. ಆ ರಾಕ್ಷಸನಾದ ರಾವಣನು ಉತ್ತಮವಾದ ರಥದಲ್ಲಿ ಕುಳಿತು ರಾಕ್ಷಸರಿಂದ ಕೂಡಿಕೊಂಡು ಬಂದನು ಇದನ್ನು ನೋಡಿ ಇಂದ್ರನು ಒಳ್ಳೆಯ ಕುದುರೆಯಿಂದಲೂ ಸೂತನಿಂದಲೂ ಕೂಡಿರುವ ಉತ್ತಮವಾದ ರಥವನ್ನು ರಾಮನಿಗೆ ಕಳುಹಿಸಿಕೊಟ್ಟನು. ಮಾತಳಿಯು ತಂದ ಆ ರಥವನ್ನು ರಾಮನು ಹತ್ತಿದನು. ಸುರರು ಸ್ತುತಿಸಿದರು. ಅನಂತರ ಯುದ್ಧಕ್ಕೆ ಹೊರಟನು. ಆಗ ರಾಮರಾವಣರಿಗೆ ಘೋರವಾದ ಯುದ್ಧವು ನಡೆಯಿತು.

೩೧೬. ಅತ್ಯಂತ ಭಯಂಕರವಾದ ಅಸ್ತ್ರಗಳಿಂದ ಏಳುದಿನಗಳವರೆಗೆ ಯುದ್ಧವು ಭಯಂಕರವಾಗಿ ಆ ರಾಮರಾವಣರಿಗೆ ನಡೆಯಿತು. ಆಗ ದೇವತೆಗಳು ವಿಮಾನದಲ್ಲಿದ್ದುಕೊಂಡು ಆ ಯುದ್ಧವನ್ನು ನೋಡಿದರು.

ದಶಗ್ರೀವಸ್ಯ ಚಿಚ್ಛೇದ ಶಿರಾಂಸಿ ರಘುಸತ್ತಮಃ ।
ಸಮುತ್ಥಿತಾನಿ ಬಹುಶೋ ವರದಾನಾತ್ಕಪರ್ದಿನಃ ॥ ೩೧೭ ॥

ಬ್ರಾಹ್ಮಮಸ್ತ್ರಂ ಮಹಾರೌದ್ರಂ ವಧಾಯಾಸ್ಯ ದುರಾತ್ಮನಃ ।
ಸಸರ್ಜ ರಾಘವಸ್ತೂರ್ಣಂ ಕಾಲಾಗ್ನಿಸದೃಶಪ್ರಭಂ ॥ ೩೧೮ ॥

ತದಸ್ತ್ರಂ ರಾಘವೋತ್ಸೃಷ್ಟಂ ರಾವಣಸ್ಯ ಸ್ತನಾಂತರಂ ।
ವಿದಾರ್ಯ ಧರಣೀಂ ಭಿತ್ವಾ ರಸಾತಳತಳಂ ಗತಂ ॥ ೩೧೯ ॥

ಸಂಪೂಜ್ಯಮಾನಂ ಭುಜಗೈ ರಾಘವಸ್ಯ ಕರಂ ಯಯೌ ।
ಸ ಗತಾಸುರ್ಮಹಾದೈತ್ಯಃ ಪಪಾತ ಚ ಮಮಾರ ಚ ॥ ೩೨೦ ॥

ತತೋ ದೇವಗಣಾಸ್ಸರ್ವೇ ಹರ್ಷನಿರ್ಭರಮಾನಸಾಃ ।
ವವೃಷುಃ ಪುಷ್ಪವರ್ಷಾಣಿ ಮಹಾತ್ಮನಿ ಜಗದ್ಗುರೌ ॥ ೩೨೧ ॥

---

೩೧೭. ಆಗ ಶ್ರೀರಾಮನು ದಶಗ್ರೀವನ ತಲೆಗಳನ್ನು ಕತ್ತರಿಸಿದನು. ಆ ತಲೆಗಳು ಶಿವನ ವರದಿಂದ ಮತ್ತೆ ಮತ್ತೆ ಹುಟ್ಟುತ್ತಲೇ ಇದ್ದುವು.

೩೧೮. ಆಗ ಶ್ರೀರಾಮನು ಆ ರಾವಣನನ್ನು ಕೊಲ್ಲಲಿಚ್ಛೆಯಿಂದ ಒಂದು ಘೋರವಾದ ಬ್ರಹ್ಮಾಸ್ತ್ರವನ್ನು ಬಿಟ್ಟನು. ಅದು ಕಾಲಾಗ್ನಿಗೆ ಸಮವಾಗಿದ್ದಿತು.

೩೧೯. ಆ ಅಸ್ತ್ರವನ್ನು ರಾಮನು ಬಿಡಲು ಅದು ರಾವಣನ ಎದೆಯನ್ನು ಸೀಳಿ ಭೂಮಿಯನ್ನು ತೂತುಮಾಡಿಕೊಂಡು ಪಾತಾಳಲೋಕದ ತಳಭಾಗಕ್ಕೆ ಹೋಯಿತು.

೩೨೦. ಸರ್ಪಗಳಿಂದ ಗೌರವವನ್ನು ಹೊಂದಿ ಆ ಅಸ್ತ್ರವು ಮತ್ತೆ ರಾಮನ ಕೈಗೆ ಬಂದಿತು. ಆ ರಾವಣನು ಪ್ರಾಣವನ್ನು ಕಳೆದುಕೊಂಡು ಕೆಳಗೆಬಿದ್ದು ಸತ್ತನು.

೩೨೧. ಅನಂತರ ದೇವತೆಗಳು ಹರ್ಷಗೊಂಡವರಾಗಿ ಆ ಸ್ವಾಮಿಯಮೇಲೆ ಪುಷ್ಪವೃಷ್ಟಿಯನ್ನು ಸುರಿಸಿದರು.

ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ।
ವವುಃ ಪುಣ್ಯಾಸ್ತಥಾ ವಾತಾಃ ಸುಪ್ರಭೋಽಭೂದ್ದಿವಾಕರಃ ॥ ೩೨೨ ॥

ತುಷ್ಟುವುರ್ಮುನಯಸ್ಸಿದ್ಧಾ ದೇವಗಂಧರ್ವಕಿನ್ನರಾಃ ।
ಲಂಕಾಯಾಂ ರಾಕ್ಷಸಶ್ರೇಷ್ಠಮಭಿಷಿಚ್ಯ ವಿಭೀಷಣಂ ॥ ೩೨೩ ॥

ಕೃತಕೃತ್ಯಮಿವಾತ್ಮಾನಂ ಮೇನೇ ರಘುಕುಲೋತ್ತಮಃ ।
ರಾಮಸ್ತತ್ರಾಬ್ರವೀದ್ವಾಕ್ಯಮಭಿಷಿಚ್ಯ ವಿಭೀಷಣಂ ॥ ೩೨೪ ॥

॥ ರಾಮ ಉವಾಚ ॥

ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ।
ಯಾವನ್ಮಮ ಕಥಾ ಲೋಕೇ ತಾವದ್ರಾಜ್ಯಂ ವಿಭೀಷಣ ॥ ೩೨೫ ॥

ಕೃತ್ವಾ ಮಮ ಪದಂ ದಿವ್ಯಂ ಯೋಗಿಗಮ್ಯಂ ಸನಾತನಂ ।
ಸಪುತ್ರಪೌತ್ರಸ್ಸಗಣಃ ಸಂಪ್ರಾಪ್ನುಹಿ ಮಹಾಬಲ ॥ ೩೨೬ ॥

---

೩೨೨–೩೨೪. ಗಂಧರ್ವರು ಹಾಡಿದರು. ಅಪ್ಸರರು ಕುಣಿದರು. ಗಾಳಿಯು ಸುಖವಾಗಿ ಬೀಸಿತು. ಸೂರ್ಯನು ಒಳ್ಳೆಯ ಕಾಂತಿಯಿಂದ ಬೆಳಗಿದನು ಮುನಿಗಳೂ ದೇವತೆಗಳೂ ಸಿದ್ಧರೂ ಗಂಧರ್ವರೂ ಕಿನ್ನರರೂ ಎಲ್ಲರೂ ಹೊಗಳಿದರು. ರಾಮನು ಲಂಕೆಯಲ್ಲಿ ಆ ಒಳ್ಳೆಯ ಗುಣಗಳಿಂದ ಕೂಡಿದ ವಿಭೀಷಣನನ್ನು ಕೂರಿಸಿ ಅಭಿಷೇಕಮಾಡಿದನು ಅನಂತರ ತಾನು ಸಾಧಿಸಿದ ಕೆಲಸವನ್ನು ಪೂರ್ತಿಮಾಡಿ ದುದರಿಂದ ತನ್ನನ್ನು ಕೃತಕೃತ್ಯನನ್ನಾಗಿ ತಿಳಿದನು. ಅನಂತರ ರಾಮನು ಅಭಿಷೇಕಮಾಡಿದಮೇಲೆ ಆ ವಿಭೀಷಣನನ್ನು ಕುರಿತು ಇಂತೆಂದನು.

೩೨೫–೩೨೬. ರಾಮನು ಹೇಳಿದನು-ಎಲೈ ವಿಭೀಷಣನೆ ! ಸೂರ್ಯ, ಚಂದ್ರ, ಭೂಮಿಗಳಿರುವವರೆಗೂ ಲೋಕದಲ್ಲಿ ನನ್ನ ಕಥೆಯು ಇರುವವರೆಗೂ ನೀನು ರಾಜ್ಯಭಾರವನ್ನು ಮಾಡಿ ಅನಂತರ ಯೋಗಿಗಳು ಹೊಂದುವ ಮೋಕ್ಷವನ್ನು ಮಕ್ಕಳು, ಮೊಮ್ಮಕ್ಕಳು ಪರಿವಾರದೊಂದಿಗೆ ಹೊಂದು.

|| ಈಶ್ವರ ಉವಾಚ ||

ಏವಂ ದತ್ವಾ ವರಂ ತಸ್ಮೈ ರಾಕ್ಷಸಾಯ ಮಹಾಬಲಃ ।
ಸಂಪ್ರಾಪ್ಯ ಮೈಥಿಲೀಂ ತತ್ರ ಪೂತಾಂ ಸುಜನಸಂಸದಿ　　　　|| ೩೨೭ ||

ಉವಾಚ ರಾಘವಃ ಸೀತಾಂ ಗರ್ಹಿತಂ ವಚನಂ ಬಹು ।
ಸಾ ತೇನ ಗರ್ಹಿತಾ ಸಾಧ್ವೀ ವಿವೇಶ ಜ್ವಲನಂ ಮಹತ್　　　　|| ೩೨೮ ||

ತತೋ ದೇವಗಣಾಸ್ಸರ್ವೇ ಶಿವಬ್ರಹ್ಮಪುರೋಗಮಾಃ ।
ದೃಷ್ಟ್ವಾ ತು ಮಾತರಂ ವಹ್ನೌ ಪ್ರವಿಶಂತೀಂ ಭಯಾತುರಾಃ ॥
ಸಮಾಗಮ್ಯ ರಘುಶ್ರೇಷ್ಠಂ ಸರ್ವೇ ಪ್ರಾಂಜಲಯೋಽಬ್ರುವನ್　　　　|| ೩೨೯ ||

|| ದೇವಾ ಊಚುಃ ||

ರಾಮ ರಾಮ ಮಹಾಬಾಹೋ ಶೃಣು ತ್ವಂ ಚಾತಿವಿಕ್ರಮ ।
ಸೀತಾತಿವಿಮಲಾ ಸಾಧ್ವೀ ತವ ನಿತ್ಯಾನಪಾಯಿನೀ　　　　|| ೩೩೦ ||

---

೩೨೭-೩೨೮. ಈಶ್ವರನು ಹೇಳಿದನು–ಶ್ರೀರಾಮನು ಆ ವಿಭೀಷಣನಿಗೆ ಈ ರೀತಿಯಾಗಿ ವರವನ್ನು ಕೊಟ್ಟು ಪತಿವ್ರತೆಯಾದ ಸೀತೆಯನ್ನು ನೋಡಿ ಜನಗಳ ಗುಂಪಿನಲ್ಲಿ ಆಕೆಯನ್ನು ಅನೇಕವಾದ ರೀತಿಯಲ್ಲಿ ಮನಚುಚ್ಚುವ ಮಾತುಗಳಿಂದ ನಿಂದಿಸಿದನು. ಆ ನಿಂದೆಯನ್ನು ಕೇಳಲಾರದೆ ಸೀತೆಯು ಅಗ್ನಿಪ್ರವೇಶವನ್ನು ಮಾಡಿದಳು.

೩೨೯. ಅನಂತರ ಶಿವ ಬ್ರಹ್ಮನೇ ಮುಂತಾದ ದೇವತೆಗಳು ಲೋಕಮಾತೆಯಾದ ಸೀತೆಯು ಬೆಂಕಿಯಲ್ಲಿ ಬೀಳುತ್ತಿರುವುದನ್ನು ನೋಡಿ ಭಯಗೊಂಡು ರಾಮನ ಬಳಿಗೆ ಬಂದು ಆತನನ್ನು ಕುರಿತು ಇಂತೆಂದರು.

೩೩೦. ದೇವತೆಗಳು ಹೇಳಿದರು—ಎಲೈ ಮಹಾಬಾಹುವಾದ ರಾಮನೇ ! ನೀನು ಕೇಳು. ಸೀತೆಯು ಬಹುನಿರ್ಮಲಳಾದವಳು ಪತಿವ್ರತೆಯು. ನಿನ್ನನ್ನು ಬಿಟ್ಟು ಯಾವಾಗಲೂ ಇರತಕ್ಕವಳಲ್ಲ.

ಅತ್ಯಾಜ್ಯಾ ತು ತ್ವಯಾ ಸಾ ಹಿ ಭಾಸ್ಕರೇಣ ಪ್ರಭಾ ಯಥಾ |
ಸೇಯಂ ಲೋಕಹಿತಾರ್ಥಾಯ ಸಮುತ್ಪನ್ನಾ ಮಹೀತಲೇ ॥ ೩೩೧ ॥

ಮಾತಾ ಸರ್ವಸ್ಯ ಜಗತಃ ಸಮಸ್ತಜಗದಾಶ್ರಯಾ |
ರಾವಣಃ ಕುಂಭಕರ್ಣಶ್ಚ ತವ ಪೂರ್ವಂ ಪರಾಯಣೌ ॥ ೩೩೨ ॥

ಶಾಪಾತ್ತೌ ಸನಕಾದೀನಾಂ ಸಮುತ್ಪನ್ನೌ ಮಹೀತಳೇ |
ತಯೋರ್ವಿಮುಕ್ತ್ಯೈ ವೈದೇಹೀ ಗೃಹೀತಾ ದಂಡಕಾವನೇ ॥ ೩೩೩ ॥

ತದ್ಧೇತೋಸ್ತೌ ಪದಂ ಪ್ರಾಪ್ತೌ ತ್ವಯಾ ರಾಕ್ಷಸಪುಂಗವೌ |
ವಿಮುಕ್ತೌ ಸ್ವರ್ಗತಿಂ ಯಾತೌ ಪುತ್ರಪೌತ್ರಸಹಾನುಗೌ ॥ ೩೩೪ ॥

ತ್ವಂ ವಿಷ್ಣುಸ್ತ್ವಂ ಪರಂ ಬ್ರಹ್ಮ ಯೋಗಿಧ್ಯೇಯಃ ಸನಾತನಃ |
ತ್ವಮೇವ ಸರ್ವದೇವಾನಾಂ ಅನಾದಿನಿಧನೋಽವ್ಯಯಃ ॥ ೩೩೫ ॥

---

೩೩೧. ಸೂರ್ಯನನ್ನು ಕಾಂತಿಯು ಹೇಗೆ ಬಿಟ್ಟಿರುವುದಿಲ್ಲವೋ ಹಾಗೆ ನಿನ್ನಿಂದ ಆ ಸೀತೆಯು ಬೇರ್ಪಡುವವಳಲ್ಲ. ಅವಳು ಲೋಕಹಿತಕ್ಕೋಸ್ಕರಲೇ ಭೂಮಿಯಲ್ಲಿ ಹುಟ್ಟಿರುವಳು.

೩೩೨-೩೩೩. ಆ ಸೀತೆಯು ಜಗತ್ತಿಗೆಲ್ಲಾ ತಾಯಿಯು. ಎಲ್ಲಾ ಜಗತ್ತಿಗೂ ಆಶ್ರಯ ಭೂತಳು. ರಾವಣನೂ ಕುಂಭಕರ್ಣನೂ ನಿನ್ನಲ್ಲಿಯೇ ಪೂರ್ವದಲ್ಲಿ ಭಕ್ತರಾಗಿದ್ದವರು. ಸನಕಾದಿಗಳ ಶಾಪದಿಂದ ರಾಕ್ಷಸರಾದರು. ಆ ಶಾಪದ ಮುಕ್ತಿಗೋಸ್ಕರ ಆ ಸೀತೆಯನ್ನು ದಂಡಕಾವನದಲ್ಲಿ ಅವರು ಕದ್ದರು.

೩೩೪. ಆ ಕಾರಣದಿಂದಲೇ ಆ ರಾವಣ ಕುಂಭಕರ್ಣರು ನಿನ್ನಿಂದ ವಧೆಯನ್ನು ಹೊಂದಿದರು. ಅವರು ಶಾಪದಿಂದ ವಿಮುಕ್ತರಾಗಿ ಮಕ್ಕಳು, ಮುಮ್ಮಕ್ಕಳು, ಜೊತೆಯವರು, ಎಲ್ಲರೊಡನೆಯೂ ಸ್ವರ್ಗವನ್ನು ಹೊಂದಿದರು.

೩೩೫. ನೀನೇ ವಿಷ್ಣುವು ನೀನೇ ಪರಬ್ರಹ್ಮನು. ಯೋಗಿಗಳು ಧ್ಯಾನಿಸುವ ಸನಾತನನೂ ನೀನೇಯೇ. ನೀನೇ ದೇವತೆಗಳಲ್ಲೆಲ್ಲಾ ಆದಿಭೂತನು. ನೀನು ಆದಿರಹಿತನು. ಅಂತರಹಿತನು. ಅವ್ಯಯನು.

ತ್ವಂ ಹಿ ನಾರಾಯಣಃ ಶ್ರೀಮಾನ್ ಸೀತಾ ಲಕ್ಷ್ಮೀಃ ಸನಾತನೀ ।
ಮಾತಾ ಸಾ ಸರ್ವಲೋಕಾನಾಂ ಪಿತಾ ತ್ವಂ ಪರಮೇಶ್ವರಃ ॥ ೩೩೬ ॥

ಯಥಾ ಸರ್ವಗತಸ್ತ್ವಂ ಹಿ ತಥಾ ಚೇಯಂ ರಘೂತ್ತಮ ।
ತಸ್ಮಾಚ್ಛುದ್ಧಸಮಾಚಾರಾಂ ಸೀತಾಂ ಸಾಧ್ವೀಂ ದೃಢವ್ರತಾಂ ॥ ೩೩೭ ॥

ಗೃಹಾಣ ಸೌಮ್ಯ ಕಾಕುತ್‌ಸ್ಥ ಕ್ಷಿರಾಬ್ಧೇರಿವ ಮಾ ಚಿರಂ ॥ ೩೩೮ ॥

॥ ಈಶ್ವರ ಉವಾಚ ॥

ಏತಸ್ಮಿನ್ನಂತರೇ ತತ್ರ ಲೋಕಸಾಕ್ಷೀ ಸ ಪಾವಕಃ ।
ಆದಾಯ ಸೀತಾಂ ರಾಮಾಯ ಪ್ರದದೌ ಸುರಸನ್ನಿಧೌ ।
ಅಬ್ರವೀತ್ತತ್ರ ಕಾಕುತ್‌ಸ್ಥಂ ವಹ್ನಿಃ ಸರ್ವಶರೀರಗಃ ॥ ೩೩೯ ॥

॥ ವಹ್ನಿರುವಾಚ ॥

ಇಯಂ ಶುದ್ಧಸಮಾಚಾರಾ ಸೀತಾ ನಿಷ್ಕಲ್ಮಷಾ ವಿಭೋ ।
ಗೃಹಾಣ ಮಾ ಚಿರಂ ರಾಮ ಸತ್ಯಂ ಸತ್ಯಂ ತವಾಬ್ರವಂ ॥ ೩೪೦ ॥

---

೩೩೬. ನೀನೇ ಶ್ರೀ ಮನ್ನಾರಾಯಣನು. ಸೀತೆಯು ಸನಾತನಿಯಾದ ಲಕ್ಷ್ಮಿಯು. ಆಕೆಯು ದೇವತೆಗಳಿಗೆಲ್ಲಾ ತಾಯಿಯು. ನೀನು ಅವರಿಗೆಲ್ಲಾ ತಂದೆಯು.

೩೩೭–೩೩೮. ನೀನು ಹೇಗೆ ಸರ್ವವ್ಯಾಪಿಯೋ ಆಕೆಯೂ ಹಾಗೆಯೇ ಸರ್ವವ್ಯಾಪಿನಿಯು. ಆ ಸೀತೆಯು ಪತಿವ್ರತೆಯು. ಶುದ್ಧಳು. ಆಕೆಯನ್ನು ನೀನು ಕ್ಷೀರಸಮುದ್ರದಿಂದ ಬಂದಾಗ ಪರಿಗ್ರಹಿಸಿದಂತೆ ಈಗಲೂ ಪರಿಗ್ರಹಿಸು.

೩೩೯. ಈಶ್ವರನು ಹೇಳಿದನು–ಇಷ್ಟರಲ್ಲಿ ಲೋಕಸಾಕ್ಷಿಯಾದ ಅಗ್ನಿಯು ಸೀತೆಯನ್ನು ಕರೆದು ತಂದು ದೇವತೆಗಳ ಎದುರಿಗೆ ರಾಮನಿಗೆ ಕೊಡುತ್ತಾ ಅವನಿಗೆ ಇಂತೆಂದು ಹೇಳಿದನು.

೩೪೦. ವಹ್ನಿಯು ಹೇಳಿದನು–ಎಲೈ ಶ್ರೀರಾಮನೆ! ಈ ಸೀತೆಯು ಶುದ್ಧವಾದ ಆಚಾರವುಳ್ಳವಳು. ಪಾಪರಹಿತಳು. ಈಕೆಯನ್ನು ಸಾವಕಾಶಮಾಡದೆ ಕರೆದುಕೋ. ಸತ್ಯವಾಗಿಯೂ ನಾನು ಹೇಳುತ್ತೇನೆ.

|| ಈಶ್ವರ ಉವಾಚ ||

ತತೋಗ್ನಿವಚನಾತ್ಸೀತಾಂ ಪರಿಗೃಹ್ಯ ರಘೂದ್ವಹಃ ।
ಬಭೂವ ರಾಮಃ ಸಂಹೃಷ್ಟಃ ಪೂಜ್ಯಮಾನಃ ಸುರೋತ್ತಮೈಃ || ೩೪೧ ||

ರಾಕ್ಷಸೈರ್ನಿಹತಾ ಯೇ ತು ಸಂಗ್ರಾಮೇ ವಾನರೋತ್ತಮಾಃ ।
ಪಿತಾಮಹವರಾತ್ತೂರ್ಣಂ ಜೀವಮಾನಾಃ ಸಮುತ್ಥಿತಾಃ || ೩೪೨ ||

ತತಸ್ತು ಪುಷ್ಪಕಂ ನಾಮ ವಿಮಾನಂ ಸೂರ್ಯಸನ್ನಿಭಂ ।
ಭ್ರಾತ್ರಾ ಗೃಹೀತಂ ಸಂಗ್ರಾಮೇ ಕೌಬೇರಂ ರಾಕ್ಷಸೇಶ್ವರಃ || ೩೪೩ ||

ತದ್ರಾಘವಾಯ ಪ್ರದದೌ ವಸ್ತ್ರಾಣ್ಯಾಭರಣಾನಿ ಚ ।
ತೇನ ಸಂಪೂಜಿತಃ ಶ್ರೀಮಾನ್ ರಾಮಚಂದ್ರಃ ಪ್ರತಾಪವಾನ್ || ೩೪೪ ||

ಆರುರೋಹ ವಿಮಾನಾಗ್ರ್ಯಂ ವೈದೇಹ್ಯಾ ಭಾರ್ಯಯಾ ಸಹ ।
ಲಕ್ಷ್ಮಣೇನ ಚ ಶೂರೇಣ ಭ್ರಾತ್ರಾ ದಶರಥಾತ್ಮಜಃ || ೩೪೫ ||

---

೩೪೧. ಈಶ್ವರನು ಹೇಳಿದನು–ಆಗ ಶ್ರೀರಾಮನು ಅಗ್ನಿಯ ಮಾತಿನಂತೆ ಸೀತೆಯನ್ನು ಪರಿಗ್ರಹಿಸಿದನು. ದೇವತೆಗಳೆಲ್ಲರೂ ಕೊಂಡಾಡಿದರು. ರಾಮನು ಸಂತೋಷಗೊಂಡನು.

೩೪೨. ರಾಕ್ಷಸರು ಯುದ್ಧದಲ್ಲಿ ಕೊಂದಿದ್ದ ಆ ಕಪಿಗಳೆಲ್ಲವೂ ಪಿತಾಮಹನಾದ ಬ್ರಹ್ಮನ ವರದಿಂದ ಜೀವವನ್ನು ಹೊಂದಿ ಮೇಲಕ್ಕೆದ್ದುವು.

೩೪೩-೩೪೫ ಅನಂತರ ರಾಕ್ಷಸೇಶ್ವರನಾದ ವಿಭೀಷಣನು ತನ್ನ ಅಣ್ಣನು ಯುದ್ಧದಲ್ಲಿ ಸೋಲಿಸಿದ್ದು ಕುಬೇರನಿಂದ ತಂದಿದ್ದ ಆ ಪುಷ್ಪಕವಿಮಾನವನ್ನೂ ವಸ್ತ್ರಾಭರಣಗಳನ್ನೂ ಶ್ರೀರಾಮನಿಗೆ ಕೊಟ್ಟನು. ಶ್ರೀರಾಮನು ಆ ವಿಭೀಷಣನಿಂದ ಗೌರವಿಸಲ್ಪಟ್ಟವನಾಗಿ ಸೀತೆ ಲಕ್ಷ್ಮಣರೊಡನೆ ಆ ವಿಮಾನವನ್ನು ಹತ್ತಿದನು.

ಋಕ್ಷವಾನರಸಂಘಾತೈಃ ಸುಗ್ರೀವೇಣ ಮಹಾತ್ಮನಾ ।
ವಿಭೀಷಣೇನ ಶೂರೇಣ ರಾಕ್ಷಸೈಶ್ಚ ಮಹಾಬಲೈಃ ॥ ೩೪೬ ॥

ಯಥಾ ವಿಮಾನೇ ವೈಕುಂಠೇ ನಿತ್ಯಮುಕ್ತೈರ್ಮಹಾತ್ಮಭಿಃ ।
ತಥಾ ಸರ್ವೈಸ್ಸಮಾರುಹ್ಯ ಋಕ್ಷವಾನರರಾಕ್ಷಸೈಃ ॥ ೩೪೭ ॥

ಅಯೋಧ್ಯಾಂ ಪ್ರಸ್ಥಿತೋ ರಾಮಃ ಸ್ತೂಯಮಾನಃ ಸುರೋತ್ತಮೈಃ ।
ಭಾರದ್ವಾಜಾಶ್ರಮಂ ಗತ್ವಾ ರಾಮಃ ಸತ್ಯಪರಾಕ್ರಮಃ ॥ ೩೪೮ ॥

ಭರತಸ್ಯಾಂತಿಕೇ ತತ್ರ ಹನೂಮಂತಂ ವ್ಯಸರ್ಜಯತ್ ।
ಸ ನಿಷಾದಾಲಯಂ ಗತ್ವಾ ಗುಹಂ ದೃಷ್ಟ್ವಾಥ ವೈಷ್ಣವಂ ॥ ೩೪೯ ॥

ರಾಘವಾಗಮನಂ ತಸ್ಮೈ ಪ್ರಾಹ ವಾನರಪುಂಗವಃ ।
ನಂದಿಗ್ರಾಮಂ ತತೋ ಗತ್ವಾ ದೃಷ್ಟ್ವಾ ತಂ ರಾಘವಾನುಜಂ ॥ ೩೫೦ ॥

ನ್ಯವೇದಯತ್ತಥಾ ತಸ್ಮೈ ರಾಮಸ್ಯಾಗಮನೋತ್ಸವಂ ।
ಭರತಶ್ಚಾಗತಂ ಶ್ರುತ್ವಾ ವಾನರೇಣ ರಘೂತ್ತಮಂ ॥ ೩೫೧ ॥

---

೩೪೬-೫೬. ಕರಡಿ, ಕಪಿಗಳೂ, ಸುಗ್ರೀವನೂ, ವಿಭೀಷಣನೂ, ರಾಕ್ಷಸ ಮುಖ್ಯರೂ, ಆ ವಿಮಾನದಲ್ಲಿ ಹತ್ತಿ ಕುಳಿತರು. ಇದನ್ನು ನೋಡಿದರೆ ನಿತ್ಯ ಮುಕ್ತರಾದವರೊಡನೆ ವೈಕುಂಠದಲ್ಲಿ ವಿಮಾನದಲ್ಲಿ ವಿಷ್ಣುವು ಕುಳಿತು ಕೊಂಡಿದ್ದಂತೆ ಕಾಣುತ್ತಿದ್ದಿತು. ಹೀಗೆ ಕುಳಿತು ಆ ರಾಮನು ಅಯೋಧ್ಯೆಗೆ ಹೊರಟನು. ಸತ್ಯಪರಾಕ್ರಮಿಯಾದ ರಾಮನು ಭಾರದ್ವಾಜನ ಆಶ್ರಮಕ್ಕೆ ಹೋಗಿ ಅಲ್ಲಿಳಿದು ಭರತನ ಬಳಿಗೆ ಹನುಮಂತನನ್ನು ಕಳುಹಿಸಿದನು. ಆ ಹನುಮಂತನು ನಿಷಾದರ ರಾಜನಾದ ವಿಷ್ಣುಭಕ್ತನಾದ ಗುಹನ ಬಳಿಗೆ ಹೋಗಿ ರಾಮನ ಬರುವಿಕೆಯನ್ನು ತಿಳಿಸಿದನು. ಅನಂತರ ನಂದಿಗ್ರಾಮಕ್ಕೆ ಹೋಗಿ ಅಲ್ಲಿ ಶ್ರೀರಾಮನ ತಮ್ಮನಾದ ಭರತನನ್ನು ನೋಡಿ ರಾಮನು ಬಂದಿರುವಿಕೆಯನ್ನು ಅವನಿಗೆ ಹೇಳಿದನು. ಭರತನು ಆ ಶ್ರೀರಾಮನು ವಾನರರೊಡನೆ ಬಂದುದನ್ನು

ಪ್ರಹರ್ಷಮತುಲಂ ಲೇಭೇ ಸಾನುಜಃ ಸಸುಹೃಜ್ಜನಃ ।
ಪುನರಾಗತ್ಯ ಕಾಕುತ್ಸ್ಥಂ ಹನೂಮಾನ್ ಮಾರುತಾತ್ಮಜಃ ॥ ೩೫೨ ॥

ಸರ್ವಂ ಶಶಂಸ ರಾಮಾಯ ಭರತಸ್ಯ ಚ ವರ್ತನಂ ।
ರಾಘವಸ್ತು ವಿಮಾನಾಗ್ರ್ಯಾದವರುಹ್ಯ ಸಹಾನುಜಃ ॥ ೩೫೩ ॥

ವವಂದೇ ಭಾರ್ಯಯಾ ಸಾರ್ಧಂ ಭರದ್ವಾಜಂ ತಪೋನಿಧಿಂ ।
ಸ ತು ಸಂಪೂಜಯಾಮಾಸ ಕಾಕುತ್ಸ್ಥಂ ಸಾನುಜಂ ಮುನಿಃ ॥ ೩೫೪ ॥

ಪಕ್ವಾನ್ನೈಃ ಫಲಮೂಲಾದ್ಯೈಃ ವಸ್ತ್ರೈರಾಭರಣೈರಪಿ ।
ತೇನ ಸಂಪೂಜಿತಸ್ತತ್ರ ಪ್ರಣಮ್ಯ ಮುನಿಸತ್ತಮಂ ॥ ೩೫೫ ॥

ಅನುಜ್ಞಾತಸ್ಸಮಾರುಹ್ಯ ಪುಷ್ಪಕಂ ಸಾನುಗಃ ತದಾ ।
ನಂದಿಗ್ರಾಮಂ ಯಯೌ ರಾಮಃ ಪುಷ್ಪಕೇಣ ಸುಹೃದ್ವೃತಃ ॥ ೩೫೬ ॥

ಮಂತ್ರಿಭಿಃ ಪೌರಮುಖ್ಯೈಶ್ಚ ಸಾನುಜಃ ಕೈಕಯೀಸುತಃ ।
ಪ್ರತ್ಯುದ್ಯಯೌ ನೃಪವರೈಃ ಸಬಲೈಃ ಪೂರ್ವಜಂ ಮುದಾ ॥ ೩೫೭ ॥

---

ತಿಳಿದು ತನ್ನ ತಮ್ಮನೊಡನೆಯೂ ಸ್ನೇಹಿತರೊಡನೆಯೂ ಬಹುಸಂತೋಷ ದಿಂದಿದ್ದನು. ಹನುಮಂತನು ಅಲ್ಲಿಂದ ಮತ್ತೆ ಹಿಂದಿರುಗಿಬಂದು ರಾಮನಿಗೆ ಭರತನ ಸ್ಥಿತಿಯೆಲ್ಲವನ್ನೂ ತಿಳಿಸಿದನು. ಶ್ರೀರಾಮನು ಲಕ್ಷ್ಮಣ ಮುಂತಾದವ ರೊಡನೆ ವಿಮಾನದಿಂದ ಇಳಿದು ಹೆಂಡತಿಯೊಡನೆ ಭರದ್ವಾಜನ ಬಳಿಗೆ ಹೋಗಿ ಆತನಿಗೆ ನಮಸ್ಕರಿಸಿದನು. ಆ ಭರದ್ವಾಜನು ರಾಮನನ್ನೂ ಅವನ ಅನುಯಾಯಿಗಳನ್ನೂ ಹಣ್ಣುಹಂಪಲುಗಳಿಂದಲೂ, ಗೆಡ್ಡೆಗೆಣಸುಗಳಿಂದಲೂ, ಬಟ್ಟೆ ಆಭರಣ ಮುಂತಾದುವುಗಳಿಂದಲೂ ಉತ್ತಮವಾದ ಪಕ್ವಾನ್ನಗಳಿಂದಲೂ ಸಂತೋಷಪಡಿಸಿದನು. ಆ ಭಾರದ್ವಾಜನಿಂದ ಗೌರವಿಸಲ್ಪಟ್ಟ ರಾಮನು ಆ ಋಷಿಗೆ ನಮಸ್ಕರಿಸಿ ಅವನ ಅಪ್ಪಣೆಯನ್ನು ಪಡೆದು ಎಲ್ಲರೊಡನೆಯೂ ಪುಷ್ಪಕ ವನ್ನು ಹತ್ತಿ ನಂದಿಗ್ರಾಮಕ್ಕೆ ಬಂದನು.

೩೫೭. ಆ ಭರತನು ಮಂತ್ರಿಗಳು, ಪುರಪ್ರಮುಖರು, ಶತ್ರುಘ್ನ, ರಾಜರುಗಳು, ಸೈನ್ಯಗಳು ಇವರುಗಳನ್ನು ಕರೆದುಕೊಂಡು ಹೋಗಿ ಎದುರುಗೊಂಡನು.

ಸಂಪ್ರಾಪ್ಯ ರಘುಶಾರ್ದೂಲಂ ವವಂದೇ ಸೋನುಗೈರ್ವೃತಃ ।
ಪುಷ್ಪಕಾದವರುಹ್ಯಾಥ ರಾಘವಶ್ಶತ್ರುತಾಪನಃ || ೩೫೮ ||

ಭರತಂ ಚೈವ ಶತ್ರುಘ್ನಮುಪಸಂಪರಿಷಸ್ವಜೇ ।
ಪುರೋಹಿತಂ ವಸಿಷ್ಠಂ ಚ ಮಾತೃವೃದ್ಧಾಂಶ್ಚ ಬಾಂಧವಾನ್ || ೩೫೯ ||

ಪ್ರಣನಾಮ ಮಹಾತೇಜಾಃ ಸೀತಯಾ ಲಕ್ಷ್ಮಣೇನ ಚ ।
ವಿಭೀಷಣಂ ಚ ಸುಗ್ರೀವಂ ಜಾಂಬವಂತಂ ತಥಾಂಗದಂ || ೩೬೦ ||

ಹನೂಮಂತಂ ಸುಷೇಣಂ ಚ ಭರತಃ ಪರಿಷಸ್ವಜೇ ।
ಭ್ರಾತೃಭಿಸ್ಸಾನುಗೈಸ್ತತ್ರ ಮಂಗಳಸ್ನಾನಪೂರ್ವಕಂ || ೩೬೧ ||

ದಿವ್ಯಮಾಲಾಂಬರಧರೋ ದಿವ್ಯಗಂಧಾನುಲೇಪನಃ ।
ಆರುರೋಹ ರಥಂ ದಿವ್ಯಂ ಸುಮಂತ್ರಾಧಿಷ್ಠಿತಂ ಶುಭಂ || ೩೬೨ ||

---

೩೫೮–೩೬೦. ಆಗ ಅನಂತರ ಭರತನು ತನ್ನವರೊಡನೆ ಆ ರಾಮನಿಗೆ ನಮಸ್ಕರಿಸಿದನು. ರಾಮನು ಪುಷ್ಪಕದಿಂದಿಳಿದು ಶತ್ರುಘ್ನನನ್ನೂ ಭರತನನ್ನೂ ಆಲಂಗಿಸಿಕೊಂಡನು. ಅನಂತರ ವಸಿಷ್ಠನನ್ನೂ ತಾಯಿಯರನ್ನೂ ಬಂಧುಗಳನ್ನೂ ಕೂಡ ಸೀತೆಯೊಡನೆಯೂ ಲಕ್ಷ್ಮಣನೊಡನೆಯೂ ಮಾತನಾಡಿಸಿ ನಮಸ್ಕರಿಸಿದನು. ಭರತನು ವಿಭೀಷಣನನ್ನೂ ಸುಗ್ರೀವನನ್ನೂ ಜಾಂಬವಂತನನ್ನೂ ಅಂಗದ ಹನುಮಂತರನ್ನೂ ಆಲಂಗಿಸಿಕೊಂಡು ಗೌರವಿಸಿದನು.

೩೬೧–೩೬೨. ಅನಂತರ ತಾನೂ ತಮ್ಮಂದಿರೂ ಮಂಗಳಸ್ನಾನಮಾಡಿದರು. ಉತ್ತಮವಾದ ಬಟ್ಟೆಗಳನ್ನೂ ಹೂಗಳನ್ನೂ ಗಂಧ ಮುಂತಾದುವನ್ನೂ ಧರಿಸಿದರು. ಅನಂತರ ಸುಮಂತ್ರನು ತಂದಿದ್ದ ಉತ್ತಮವಾದ ರಥವನ್ನು ಹತ್ತಿ ಕುಳಿತರು.

ಸಂಸ್ತೂಯಮಾನಸ್ತ್ರಿದಶೈಃ ವೈದೇಹ್ಯಾ ಲಕ್ಷಣೇನ ಚ ।
ಭರತಶ್ಚೈವ ಸುಗ್ರೀವಃ ಶತ್ರುಘ್ನಶ್ಚ ವಿಭೀಷಣಃ ॥ ೩೬೩ ॥

ಅಂಗದಶ್ಚ ಸುಷೇಣಶ್ಚ ಜಾಂಬವಾನ್ಮಾರುತಾತ್ಮಜಃ ।
ನೀಲೋ ನಲಶ್ಚ ಸುಭಗಃ ಶರಭೋ ಗಂಧಮಾದನಃ ॥ ೩೬೪ ॥

ಅನ್ಯೇ ಚ ಕಪಯಃ ಶೂರಾಃ ನಿಷಾದಾಧಿಪತಿರ್ಗುಹಃ ।
ರಾಕ್ಷಸಾಶ್ಚ ಮಹಾವೀರ್ಯಾಃ ಪಾರ್ಥಿವೇಂದ್ರಾ ಮಹಾಬಲಾಃ ॥ ೩೬೫ ॥

ಗಜಾನ್ ಅಶ್ವಾನ್ ರಥಾನ್ ಸಮ್ಯಗಾರುಹ್ಯ ಬಹುಶಃ ಶುಭಾನ್ ।
ನಾನಾಮಂಗಳವಾದಿತ್ರೈಃ ಸ್ತವನ್ಯೈಃ ಪುಷ್ಕಲೈಸ್ತಥಾ ॥ ೩೬೬ ॥

ಋಕ್ಷವಾನರರಕ್ಷೋಭಿರ್ನಿಷಾದನರಸೈನಿಕೈಃ ।
ಪ್ರವಿವೇಶ ಮಹಾತೇಜಾಃ ಸಾಕೇತಂ ಪುರಮುವ್ಯಯಂ ॥ ೩೬೭ ॥

---

೩೬೩–೩೬೭. ಹೀಗೆ ರಾಮನು ರಥವನ್ನು ಹತ್ತಲು ದೇವತೆಗಳು ಹೊಗಳಿದರು. ಆ ರಥದಲ್ಲಿ ರಾಮನ ಜೊತೆಯಲ್ಲಿ ಸೀತೆಯೂ ಲಕ್ಷ್ಮಣನೂ ಕುಳಿತರು. ಭರತ, ಶತ್ರುಘ್ನ, ಸುಗ್ರೀವ, ವಿಭೀಷಣ, ಅಂಗದ, ಸುಷೇಣ, ಜಾಂಬವ, ಹನುಮಂತ, ನೀಲ, ನಲ, ಸುಭಗ, ಶರಭ, ಗಂಧಮಾದನ ಇನ್ನೂ ಉಳಿದ ಕಪಿಗಳು, ಗುಹ, ರಾಕ್ಷಸಮುಖ್ಯರು, ರಾಜನ ಕಡೆಯವರು ಇವರೆಲ್ಲರೂ ಅವರವರ ಅನುಕೂಲಕ್ಕೆ ತಕ್ಕಂತೆ ಆನೆ, ಕುದುರೆ, ರಥಗಳನ್ನು ಹತ್ತಿ ಹೊರಟರು. ಅನೇಕ ಬಗೆಯಾದ ಮಂಗಳವಾದ್ಯಗಳೊಡನೆ ನಿಷಾದರು, ನರರು, ವಾನರರು, ಕರಡಿಗಳು, ಇವರ ಸೈನ್ಯದಿಂದಲೂ ಕೂಡಿಕೊಂಡು ಉತ್ತಮೋತ್ತಮವಾದ ಅಯೋಧ್ಯೆಗೆ ಪ್ರವೇಶಿಸಿದನು.

ಆಲೋಕ್ಯ ರಾಜನಗರೀಂ ಪಥಿ ರಾಜಪುತ್ರೋ
ರಾಜಾನಮೇವ ಪಿತರಂ ಪರಿಚಿಂತಯಾನಃ ।
ಸುಗ್ರೀವಮಾರುತಿವಿಭೀಷಣಪುಣ್ಯಪಾದ
ಸಂಚಾರಪೂತಭವನಂ ಪ್ರವಿವೇಶ ರಾಮಃ ॥ ೩೬೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ರಾಮಸ್ಯ ಅಯೋಧ್ಯಾ ಪ್ರವೇಶೋ ನಾಮ ಏಕೋನ ಸಪ್ತತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೩೬೮. ರಾಮನು ದಾರಿಯಲ್ಲಿ ಹೋಗುತ್ತಲೇ ಆ ಅಯೋಧ್ಯೆಯನ್ನು ನೋಡುತ್ತ ತನ್ನ ತಂದೆಯಾದ ದಶರಥನ ವಿಷಯವನ್ನೇ ಯೋಚಿಸುತ್ತಾ ಸುಗ್ರೀವ, ಹನುಮಂತ, ವಿಭೀಷಣರು ಮುಂದೆ ಹೋಗಲು ಅವರ ಪಾದಸ್ಪರ್ಶದಿಂದ ಪವಿತ್ರವಾದ ಅರಮನೆಯನ್ನು ತಾನೂ ಹೊಕ್ಕನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ರಾಮನು ಅಯೋಧ್ಯೆಗೆ ಪ್ರವೇಶಿಸಿದನೆಂಬ ಅರವತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ||



|| ಶಂಕರ ಉವಾಚ ||

ಅಥ ತಸ್ಮಿನ್ ದಿನೇ ಪುಣ್ಯೇ ಶುಭಲಗ್ನೇ ಶುಭಾನ್ವಿತೇ ।
ಮಂಗಳಸ್ಯಾಭಿಷೇಕಾರ್ಥಂ ಮಂಗಳಂ ಚಕ್ರಿರೇ ಜನಾಃ || ೧ ||

ವಸಿಷ್ಠೋ ವಾಮದೇವಶ್ಚ ಜಾಬಾಲಿರಥ ಕಶ್ಯಪಃ ।
ಮಾರ್ಕಂಡೇಯಶ್ಚ ಮೌದ್ಗಲ್ಯಃ ಪರ್ವತೋ ನಾರದಸ್ತಥಾ || ೨ ||

ಏತೇ ಮಹರ್ಷಯಸ್ತತ್ರ ಜಪಹೋಮಪುರಸ್ಸರಂ ।
ಅಭಿಷೇಕಂ ಶುಭಂ ಚಕ್ರುಃ ಮುನಯೋ ರಾಜಸತ್ತಮಂ || ೩ ||

---

## ಇನ್ನೂರ ಎಪ್ಪತ್ತನೆಯ ಅಧ್ಯಾಯವು



೧. ಶಂಕರನು ಹೇಳಿದನು–ಅನಂತರ ಒಂದು ಶುಭದಿನದ ಶುಭ ಮುಹೂರ್ತ ಶುಭಲಗ್ನದಲ್ಲಿ ರಾಮನಿಗೆ ಮಂಗಳಾಭಿಷೇಕಕ್ಕೋಸ್ಕರ ಜನರು ಉದ್ಯುಕ್ತರಾದರು.

೨–೩. ವಸಿಷ್ಠ, ವಾಮದೇವ, ಜಾಬಾಲಿ, ಕಶ್ಯಪ, ಮಾರ್ಕಂಡೇಯ ಮೌದ್ಗಲ್ಯ, ಪರ್ವತ, ನಾರದರೂ ಇನ್ನೂ ಅನೇಕರಾದ ಮಹರ್ಷಿಗಳೂ, ಮುನಿಗಳೂ, ಜಪ ಹೋಮಗಳನ್ನು ಮಾಡಿ ರಾಮನಿಗೆ ಅಭಿಷೇಕವನ್ನು ಮಾಡಿದರು.

ನಾನಾರತ್ನಮಯೇ ದಿವ್ಯೇ ಹೇಮಪೀಠೇ ಶುಭಾನ್ವಿತೇ ।
ನಿವೇಶ್ಯ ಸೀತಯಾ ಸಾರ್ಧಂ ಶ್ರೀಯಾ ಇವ ಜನಾರ್ದನಂ || ೪ ||

ಸೌವರ್ಣಕಲಶೈರ್ದಿವ್ಯೈಃ ನಾನಾರತ್ನಮಯೈಶ್ಶುಭೈಃ ।
ಸರ್ವತೀರ್ಥೋದಕೈಃ ಪುಣ್ಯೈಃ ಮಾಂಗಲ್ಯದ್ರವ್ಯಸಂಯುತೈಃ || ೫ ||

ದೂರ್ವಾಗ್ರತುಲಸೀಪತ್ರಪುಷ್ಪಗಂಧಸಮನ್ವಿತೈಃ ।
ಮಂತ್ರಪೂತಜಲೈಶ್ಶುದ್ಧೈಃ ಮುನಯಃ ಸಂಶಿತವ್ರತಾಃ || ೬ ||

ಅಜಪನ್ ವೈಷ್ಣವಾನ್ ಸೂಕ್ತಾನ್ ಚತುರ್ವೇದಮಯಾನ್ ಶುಭಾನ್ ।
ಅಭಿಷೇಕಂ ಶುಭಂ ಚಕ್ರುಃ ಕಾಕುತ್ಸ್ಥಂ ಜಗತಾಂ ಪತಿಂ || ೭ ||

ತಸ್ಮಿನ್ ಶುಭತಮೇ ಲಗ್ನೇ ದೇವದುಂದುಭಯೋ ದಿವಿ ।
ವಿನೇದುಃ ಪುಷ್ಪವರ್ಷಾಣಿ ವವೃಷುಶ್ಚ ಸಮಂತತಃ || ೮ ||

---

೪–೭. ಬಗೆ ಬಗೆಯ ರತ್ನಗಳಿಂದ ಕೂಡಿರುವ ಚಿನ್ನದ ಪೀಠದಲ್ಲಿ ರಾಮನನ್ನೂ ಸೀತೆಯನ್ನೂ ಕೂರಿಸಿದರು. ಇದನ್ನು ನೋಡಿದರೆ ಲಕ್ಷ್ಮಿಯು ವಿಷ್ಣುವಿನೊಡನೆ ಕುಳಿತಂತೆ ಇದ್ದಿತು. ಅಲ್ಲಿ ಎಲ್ಲಾ ತೀರ್ಥಗಳ ಉದಕಗಳನ್ನೂ ಕಲಶಗಳಲ್ಲಿ ತುಂಬಿದ್ದರು. ಅದಕ್ಕೆ ಮಂಗಳ ದ್ರವ್ಯಗಳನ್ನು ಹಾಕಿದ್ದರು. ಗರಿಕೆ, ತುಲಸಿ, ಹೂವು, ಗಂಧ, ಎಲ್ಲವನ್ನೂ ಹಾಕಿದ್ದರು. ಮತ್ತು ಅವನ್ನು ಮಂತ್ರಿಸಿದ್ದರು. ಅಲ್ಲದೆ ಮಹರ್ಷಿಗಳೆಲ್ಲರೂ ವಿಷ್ಣುಸೂಕ್ತ ಪುರುಷಸೂಕ್ತಗಳನ್ನು ಜಪಿಸುತ್ತಿದ್ದರು. ಇಂತಹ ತೀರ್ಥಗಳಿಂದ ಆ ರಾಮನಿಗೆ ಅಭಿಷೇಕವನ್ನು ಮಾಡಿದರು.

೮. ಆ ಶುಭಮುಹೂರ್ತದಲ್ಲಿ ಅಂತರಿಕ್ಷದಲ್ಲಿ ದೇವದುಂದುಭಿಗಳು ಮೊಳಗಿದುವು. ಪುಷ್ಪವೃಷ್ಟಿಯಾಯಿತು. ಎಲ್ಲಾ ಕಡೆಯಲ್ಲಿಯೂ ಈ ರೀತಿಯಾಯಿತು.

ದಿವ್ಯಾಂಬರೈರ್ಭೂಷಣೈಶ್ಚ ದಿವ್ಯಗಂಧಾನುಲೇಪನೈಃ ।
ಪುಷ್ಪೈರ್ನಾನಾವಿಧೈಃ ಧೂಪೈಃ ದೇವ್ಯಾ ಸಹ ರಘೂದ್ವಹಃ ॥ ೯ ॥

ಅಲಂಕೃತಶ್ಚ ಶುಶುಭೇ ಮುನಿಭಿಃ ವೇದಪಾರಗೈಃ ।
ಛತ್ರಂ ಚ ಚಾಮರಂ ದಿವ್ಯಂ ಧೃತವಾನ್ ಲಕ್ಷ್ಮಣಸ್ತದಾ ॥ ೧೦ ॥

ಪಾರ್ಶ್ವೇ ಭರತಶತ್ರುಘ್ನೌ ತಾಳವೃಂತೌ ವಿರೇಜತುಃ ।
ದರ್ಪಣಂ ಪ್ರದದೌ ಶ್ರೀಮಾನ್ ರಾಕ್ಷಸೇಂದ್ರೋ ವಿಭೀಷಣಃ ॥ ೧೧ ॥

ದಧಾರ ಪೂರ್ಣಕಲಶಂ ಸುಗ್ರೀವೋ ವಾನರೇಶ್ವರಃ ।
ಜಾಂಬವಾಂಶ್ಚ ಮಹಾತೇಜಾಃ ಪುಷ್ಪಮಾಲಾಂ ಮನೋಹರಾಂ ॥ ೧೨ ॥

ವಾಲಿಪುತ್ರಸ್ತು ತಾಂಬೂಲಂ ಸಕರ್ಪೂರಂ ದದೌ ಹರೇಃ ।
ಹನೂಮಾನ್ ದೀಪಿಕಾಂ ದಿವ್ಯಾಂ ಸುಷೇಣಸ್ತು ಧ್ವಜಂ ಶುಭಂ ॥ ೧೩ ॥

---

೯–೧೩. ಉತ್ತಮವಾದ ಬಟ್ಟೆಗಳಿಂದಲೂ ಒಡವೆಗಳಿಂದಲೂ ಗಂಧ ಹೂಗಳಿಂದಲೂ ಇನ್ನೂ ಉತ್ತಮವಾದ ಅಲಂಕಾರಗಳಿಂದಲೂ ಆ ರಾಮನನ್ನೂ ಸೀತೆಯನ್ನೂ ಅಲಂಕರಿಸಿದರು. ಲಕ್ಷ್ಮಣನು ಛತ್ರಿಯನ್ನು ಹಿಡಿದು ಚಾಮರ ವನ್ನೂ ಬೀಸುತ್ತಿದ್ದನು. ಅಕ್ಕಪಕ್ಕಗಳಲ್ಲಿ ಭರತ ಶತ್ರುಘ್ನರು ಬೀಸಣಿಗೆಗಳನ್ನು ಹಿಡಿದು ಬೀಸುತ್ತಿದ್ದರು. ರಾಕ್ಷಸೇಂದ್ರನಾದ ವಿಭೀಷಣನು ಕನ್ನಡಿಯನ್ನು ಹಿಡಿದನು. ವಾನರಾಧಿಪತಿಯಾದ ಸುಗ್ರೀವನು ಪೂರ್ಣಕಲಶವನ್ನು ಹಿಡಿದನು. ಜಾಂಬವಂತನು ಹೂವಿನ ಮಾಲೆಯನ್ನು ಹಿಡಿದಿದ್ದನು. ವಾಲಿಪುತ್ರನಾದ ಅಂಗದನು ಪಚ್ಚಕರ್ಪೂರದೊಡನೆ ಕೂಡಿರುವ ತಾಂಬೂಲವನ್ನು ಹಿಡಿದಿದ್ದನು. ಹನುಮಂತನು ಉತ್ತಮವಾದ ದೀಪವನ್ನು ಹಿಡಿದಿದ್ದನು. ಸುಷೇಣನು ಧ್ವಜವನ್ನು ಹಿಡಿದಿದ್ದನು. ಇವರೆಲ್ಲರೂ ಅವರವರಿಗೆ ತಕ್ಕಂತೆ ಸ್ವಾಮಿಗೆ ಅವುಗಳನ್ನು ಸಮರ್ಪಿಸುತ್ತಾ ಸೇವಿಸುತ್ತಿದ್ದರು.

ಪರಿವಾರ್ಯ ಮಹಾತ್ಮಾನಂ ಮಂತ್ರಿಣಸ್ಸಮುಪಾಸಿರೇ |
ಸೃಷ್ಟಿರ್ಜಯಂತೋ ವಿಜಯಃ ಸೌರಾಷ್ಟ್ರೋ ರಾಷ್ಟ್ರವರ್ಧನಃ ॥ ೧೪ ॥

ಅಕೋಪೋ ಧರ್ಮಪಾಲಶ್ಚ ಸುಮಂತ್ರೋ ಮಂತ್ರಿಣಃ ಸ್ಮೃತಾಃ |
ರಾಜಾನಶ್ಚ ನರವ್ಯಾಘ್ರಾಃ ನಾನಾಜನಪದೇಶ್ವರಾಃ ॥ ೧೫ ॥

ಪೌರಾಶ್ಚ ನೈಗಮಾ ವೃದ್ಧಾ ರಾಜಾನಂ ಪರ್ಯುಪಾಸತೇ |
ಋಕ್ಷೈಶ್ಚ ವಾನರೇಂದ್ರೈಶ್ಚ ಮಂತ್ರಿಭಿಃ ಪೃಥಿವೀಶ್ವರೈಃ ॥ ೧೬ ॥

ರಾಕ್ಷಸೈರ್ದ್ವಿಜಮುಖ್ಯೈಶ್ಚ ಕಿಂಕರೈಶ್ಚ ಸಮಾವೃತಃ |
ಪರವ್ಯೋಮ್ನಿ ಯಥಾ ಲೀನೋ ದೈವತೈಃ ಕಮಲಾಪತಿಃ ॥ ೧೭ ॥

ತಥಾ ನೃಪವರಃ ಶ್ರೀಮಾನ್ ಸಾಕೇತೇ ಶುಶುಭೇ ತದಾ |
ಇಂದೀವರದಳಶ್ಯಾಮಂ ಪದ್ಮಪತ್ರನಿಭೇಕ್ಷಣಂ ॥ ೧೮ ॥

ಆಜಾನುಬಾಹುಂ ಕಾಕುತ್ಸ್ಥಂ ಪೀತವಸ್ತ್ರಧರಂ ಹರಿಂ |
ಕಂಬುಗ್ರೀವಂ ಮಹೋರಸ್ಕಂ ವಿಚಿತ್ರಾಭರಣೈರ್ಯುತಂ ॥ ೧೯ ॥

---

೧೪–೨೩. ಸೃಷ್ಟಿ, ವಿಜಯ, ಸೌರಾಷ್ಟ್ರ, ರಾಷ್ಟ್ರವರ್ಧನ, ಅಕೋಪ ಧರ್ಮಪಾಲ, ಸುಮಂತ್ರರೆಂಬ ಮಂತ್ರಿಗಳು ಆ ರಾಜನ ಸುತ್ತಲೂ ಸೇವಿಸುತ್ತಿದ್ದರು. ಇನ್ನೂ ಅನೇಕ ದೇಶಗಳಿಂದ ಬಂದಿರುವ ರಾಜರೂ, ರಾಜಕುಮಾರರೂ, ಪಟ್ಟಣಿಗರೂ, ವೃದ್ಧರೂ ಆ ರಾಜನನ್ನು ಅವರವರಿಗೆ ಯುಕ್ತವಾದ ರೀತಿಯಲ್ಲಿ ಸೇವಿಸುತ್ತಿದ್ದರು. ಕರಡಿಗಳೂ ಕಪಿಗಳೂ ಬ್ರಾಹ್ಮಣಶ್ರೇಷ್ಠರೂ ಆಳುಗಳೂ ಮಂತ್ರಿಗಳೂ ರಾಜರೂ ರಾಕ್ಷಸರೂ ಎಲ್ಲರೂ ಸುತ್ತಲೂ ಇದ್ದುಕೊಂಡು ಸೇವಿಸುತ್ತಿದ್ದರು ಆ ಕಮಲಾಪತಿಯಾದ ವಿಷ್ಣುವು ವೈಕುಂಠದಲ್ಲಿ ದೇವತೆಗಳಿಂದ ಕೂಡಿಕೊಂಡು ಪ್ರಕಾಶಿಸುತ್ತಿದ್ದಂತೆ ಈ ರಾಮನು ಎಲ್ಲರಿಂದಲೂ ಕೂಡಿಕೊಂಡು ಅಯೋಧ್ಯೆಯಲ್ಲಿ ಪ್ರಕಾಶಿಸುತ್ತಿದ್ದನು. ಇಂದೀವರದಂತೆ ನೀಲನಾದ, ಪದ್ಮದಂತೆ ಕಣ್ಣುಗಳುಳ್ಳ, ಮಂಡಿಯವರೆಗೂ ಕೈಯ್ಯುಳ್ಳ, ಹೊಂಬಣ್ಣದ ಬಟ್ಟೆಯನ್ನುಟ್ಟಿರುವ, ಶಂಖದಂತೆ ಕತ್ತುಳ್ಳ, ವಿಶಾಲವಾದ ಎದೆಯುಳ್ಳ, ಅನೇಕ ಬಗೆಯಾದ ಆಭರಣಗಳನ್ನು

ದೇವ್ಯಾ ಸಹ ಸಮಾಸೀನಮಭಿಷಿಕ್ತಂ ರಘೂತ್ತಮಂ ।
ವಿಮಾನಸ್ಥಾಃ ಸುರಗಣಾ ಹರ್ಷನಿರ್ಭರಮಾನಸಾಃ ॥ ೨೦ ॥

ತುಷ್ಟುವುರ್ಜಯಶಬ್ದೇನ ಗಂಧರ್ವಾಪ್ಸರಸಾಂ ಗಣಾಃ ।
ಅಭಿಷಿಕ್ತಸ್ತತೋ ರಾಮೋ ವಸಿಷ್ಠಾದ್ಯೈಃ ಮಹರ್ಷಿಭಿಃ ॥ ೨೧ ॥

ಶುಶುಭೇ ಸೀತಯಾ ದೇವ್ಯಾ ನಾರಾಯಣ ಇವ ಶ್ರಿಯಾ ।
ಅತಿನಮ್ರತಯಾ ಸೀತಾ ಚೋಪಾಸೀತ ಪದಾಂಬುಜಂ ॥ ೨೨ ॥

ದೃಷ್ಟ್ವಾ ತುಷ್ಟಾವ ಹೃಷ್ಟಾತ್ಮಾ ಶಂಕರೋ ದ್ರಷ್ಟುಮಾಗತಃ ।
ಕೃತಾಂಜಲಿಪುಟೋ ಭೂತ್ವಾ ಸಾನಂದೋ ಗದ್ಗದಾಕುಲಃ ॥
ಹರ್ಷಯನ್ ಸಕಲಾನ್ ದೇವಾನ್ ಮುನೀನಪಿ ಚ ವಾನರಾನ್ ॥ ೨೩ ॥

॥ ಮಹಾದೇವ ಉವಾಚ ॥

ನಮೋ ಮೂಲಪ್ರಕೃತಯೇ ನಿತ್ಯಾಯ ಪರಮಾತ್ಮನೇ ।
ಸಚ್ಚಿದಾನಂದರೂಪಾಯ ವಿಶ್ವರೂಪಾಯ ವೇಧಸೇ ॥ ೨೪ ॥

---

ತೊಟ್ಟಿರುವ, ಸೀತಾದೇವಿಯೊಡನೆ ಕುಳಿತಿರುವ, ಅಭಿಷೇಕವನ್ನು ಹೊಂದು ತ್ತಿರುವ, ರಾಮನನ್ನು ದೇವತೆಗಳು ಅಂತರಿಕ್ಷದಲ್ಲಿ ವಿಮಾನದಲ್ಲಿದ್ದುಕೊಂಡು ನೋಡಿ ಸಂತೋಷಪಡುತ್ತಾ ಜಯ ಜಯ ಶಬ್ದದಿಂದ ಸ್ತುತಿಸುತ್ತಿದ್ದರು. ವಸಿಷ್ಠಾದಿಗಳಿಂದ ಅಭಿಷಿಕ್ತನಾದ ರಾಮನು ನಾರಾಯಣನು ಲಕ್ಷ್ಮಿಯೊಡನೆ ಪ್ರಕಾಶಿಸಿದಂತೆ ಪ್ರಕಾಶಿಸಿದನು. ಸೀತೆಯು ಬಹು ನಮ್ರತೆಯಿಂದ ಆ ರಾಮನ ಪಾದಾಂಬುಜವನ್ನು ಸೇವಿಸುತ್ತಿದ್ದಳು. ಇದನ್ನು ನೋಡಿ ಅಲ್ಲಿಗೆ ಬಂದಿದ್ದ ಶಂಕರನು ಸಂತೋಷದಿಂದ ಆ ರಾಮನನ್ನು ಸ್ತುತಿಸಿದನು. ಆ ಶಂಕರನು ಕೈಮುಗಿದುಕೊಂಡು ಆನಂದದಿಂದ ಗದ್ಗದಸ್ವರದಿಂದ ದೇವತೆಗಳನ್ನೂ ಮುನಿಗಳನ್ನೂ ವಾನರನ್ನು ಹರ್ಷಗೊಳಿಸುತ್ತಾ ಇಂತೆಂದನು.

೨೪. ಮಹಾದೇವನು ಹೇಳಿದನು–ಮೂಲಪ್ರಕೃತಿಯಾದ ನಿನಗೆ ನಮಸ್ಕಾರವು. ಸಚ್ಚಿದಾನಂದರೂಪನಾದ ನಿನಗೆ ನಮಸ್ಕಾರವು. ವಿಶ್ವರೂಪನೂ ಬ್ರಹ್ಮನೂ ಆದ ನಿನಗೆ ನಮಸ್ಕಾರವು.

ನಮೋ ನಿರಂತರಾನಂದಕಂದಮೂಲಾಯ ವಿಷ್ಣವೇ ।
ಜಗತ್ತ್ರಯಕೃತಾನಂತಮೂರ್ತಯೇ ದಿವ್ಯಮೂರ್ತಯೇ ॥ ೨೫ ॥

ನಮೋ ಮಹೇಂದ್ರಪೂಜ್ಯಾಯ ಶಂಕರಾಯ ಹರಾಯ ಚ ।
ನಮೋ ವಿಷ್ಣುಸ್ವರೂಪಾಯ ಸರ್ವರೂಪ ನಮೋ ನಮಃ ॥ ೨೬ ॥

ಉತ್ಪತ್ತಿಸ್ಥಿತಿಸಂಹಾರಕಾರಿಣೇ ತ್ರಿಗುಣಾತ್ಮನೇ ।
ನಮೋಽಸ್ತು ನಿರ್ಗತೋಪಾಧಿಸ್ವರೂಪಾಯ ಮಹಾತ್ಮನೇ ॥ ೨೭ ॥

ಅನಯಾ ವಿದ್ಯಯಾ ದೇವ್ಯಾ ಸೀತಯೋಪಾಧಿಕಾರಿಣೇ ।
ನಮಃ ಪುಂಪ್ರಕೃತಿಭ್ಯಾಂ ಚ ಯುವಾಭ್ಯಾಂ ಜಗತಾಂ ಕೃತೇ ॥ ೨೮ ॥

ಜಗನ್ಮಾತಾಪಿತೃಭ್ಯಾಂ ಚ ಜನನ್ಯೈ ರಾಘವಾಯ ಚ ।
ನಮಃ ಪ್ರಪಂಚರೂಪಿಣ್ಯೈ ನಿಷ್ಪ್ರಪಂಚಸ್ವರೂಪಿಣೇ ॥ ೨೯ ॥

---

೨೫-೨೬. ಯಾವಾಗಲೂ ಆನಂದರೂಪದಿಂದಿರುವ ವಿಷ್ಣುವಾದ ನಿನಗೆ ನಮಸ್ಕಾರವು. ಮೂರುಲೋಕವನ್ನು ಸೃಷ್ಟಿಮಾಡಿದ ಅನಂತಮೂರ್ತಿಯಾದ ನಿನಗೆ ನಮಸ್ಕಾರವು ಮಹೇಂದ್ರಪೂಜ್ಯನಾದ ನಿನಗೆ ನಮಸ್ಕಾರವು. ಸುಖ ಕರನಾದ ನಿನಗೆ ನಮಸ್ಕಾರವು. ನಾಶಕರ್ತೃವಾದ ನಿನಗೆ ನಮಸ್ಕಾರವು. ವಿಷ್ಣು ಸ್ವರೂಪನಾದ ನಿನಗೆ ನಮಸ್ಕಾರವು. ಸರ್ವರೂಪನಾದ ನಿನಗೆ ನಮಸ್ಕಾರವು.

೨೭. ಉತ್ಪತ್ತಿ, ಸ್ಥಿತಿ, ಸಂಹಾರವನ್ನು ಮಾಡುವ, ಸತ್ವರಜಸ್ತಮೋ ಗುಣರೂಪನಾದ, ನಿನಗೆ ನಮಸ್ಕಾರವು. ಉಪಾಧಿಗಳನ್ನು ಬಿಟ್ಟಿರುವ ನಿನಗೆ ನಮಸ್ಕಾರವು. ಮಹತ್ಮನಾದ ನಿನಗೆ ನಮಸ್ಕಾರವು.

೨೮. ಮಾಯಾರೂಪವಾದ ಸೀತೆಯೆಂಬ ಉಪಾಧಿಯನ್ನು ಹೊಂದಿರುವ ನಿನಗೆ ನಮಸ್ಕಾರವು. ಜಗತ್ತಿನ ಉಪಕಾರಕ್ಕೋಸ್ಕರ ಗಂಡುಹೆಣ್ಣಿನ ರೂಪ ವಾಗಿರುವ ನಿನಗೆ ನಮಸ್ಕಾರವು.

೨೯. ಜಗತ್ತಿಗೆ ತಾಯಿತಂದೆಗಳ ರೂಪರಾದ ಸೀತೆಗೂ ರಾಘವನಿಗೂ ನಮಸ್ಕಾರವು. ಪ್ರಪಂಚ ರೂಪಿಣಿಯಾದ ಸೀತೆಗೆ ನಮಸ್ಕಾರವು. ಪ್ರಪಂಚ ಕ್ಕಿಂತಲೂ ಬೇರೆಯಾದ ಅದರ ಸಂಬಂಧವನ್ನು ಹೊಂದದಿರುವ ರಾಮನಿಗೆ ನಮಸ್ಕಾರವು.

ನಮೋ ಧ್ಯಾನಸ್ವರೂಪಿಣ್ಯೈ ಯೋಗಿಧ್ಯೇಯಾತ್ಮಮೂರ್ತಯೇ ।
ಪರಿಣಾಮಾಪರೀಣಾಮನಿತ್ಯಾಭ್ಯಾಂ ಚ ನಮೋ ನಮಃ ॥ ೩೦ ॥

ಕೂಟಸ್ಥಬೀಜರೂಪಿಣ್ಯೈ ಸೀತಾಯೈ ರಾಘವಾಯ ಚ ।
ಸೀತಾ ಲಕ್ಷ್ಮೀಃ ಭವಾನ್ ವಿಷ್ಣುಃ ಸೀತಾ ಗೌರೀ ಭವಾನ್ ಶಿವಃ ॥ ೩೧ ॥

ಸೀತಾ ಸ್ವಯಂ ಹಿ ಸಾವಿತ್ರೀ ಭವಾನ್ ಬ್ರಹ್ಮಾ ಚತುರ್ಮುಖಃ ।
ಸೀತಾ ಶಚೀ ಭವಾನ್ ಶಕ್ರಃ ಸೀತಾ ಸ್ವಾಹಾನಲೋ ಭವಾನ್ ॥ ೩೨ ॥

ಸೀತಾ ಸಂಹಾರಿಣೀ ದೇವೀ ಯಮರೂಪಧರೋ ಭವಾನ್ ।
ಸೀತಾ ಹಿ ಸರ್ವಸಂಪತ್ತಿಃ ಕುಬೇರಸ್ತ್ವಂ ರಘೂತ್ತಮ ॥ ೩೩ ॥

ಸೀತಾ ದೇವೀ ಚ ರುದ್ರಾಣೀ ಭವಾನ್ ರುದ್ರೋ ಮಹಾಬಲಃ ।
ಸೀತಾ ತು ರೋಹಿಣೀ ದೇವೀ ಚಂದ್ರಸ್ತ್ವಂ ಲೋಕಸೌಖ್ಯದಃ ॥ ೩೪ ॥

---

೩೦. ಧ್ಯಾನಸ್ವರೂಪಿಣಿಯಾದ ಸೀತೆಗೆ ನಮಸ್ಕಾರವು. ಯೋಗಿಧ್ಯೇಯವಾದ ರೂಪವುಳ್ಳ ರಾಮನಿಗೆ ನಮಸ್ಕಾರವು. ವಿಕಾರವನ್ನು ಹೊಂದುವ ಸೀತೆಗೆ ನಮಸ್ಕಾರವು. ವಿಕಾರವನ್ನು ಹೊಂದದೆ ಇರುವ ನಿತ್ಯನಾದ ರಾಮನಿಗೆ ನಮಸ್ಕಾರವು.

೩೧. ಕೂಟಸ್ಥಬೀಜರೂಪಳಾದ ಸೀತೆಗೂ ರಾಘವನಿಗೂ ನಮಸ್ಕಾರವು. ಸೀತೆಯೇ ಲಕ್ಷ್ಮಿಯು. ನೀನೇ ವಿಷ್ಣುವು. ಸೀತೆಯೇ ಗೌರಿಯು. ನೀನೇ ಶಿವನು. ನಿಮಗೆ ನಮಸ್ಕಾರವು.

೩೨. ಸೀತೆಯು ಸಾವಿತ್ರಿಯು. ನೀನು ಚತುರ್ಮುಖನಾದ ಬ್ರಹ್ಮನು. ಸೀತೆಯು ಶಚೀದೇವಿಯು. ನೀನು ಇಂದ್ರನು. ಸೀತೆಯು ಸ್ವಾಹೆಯು. ನೀನು ಅಗ್ನಿಯು.

೩೩–೩೪. ಸೀತೆಯು ಸಂಹಾರಿಣೀ ದೇವಿಯು. ನೀನು ಯಮಸ್ವರೂಪನು. ಸೀತೆಯು ಸರ್ವಸಂಪತ್ತಿಯು. ನೀನು ಕುಬೇರನು. ಸೀತೆಯು ರುದ್ರಾಣಿಯು. ನೀನು ರುದ್ರನು. ಸೀತೆಯು ರೋಹಿಣಿಯು. ನೀನು ಎಲ್ಲರಿಗೂ ಸೌಖ್ಯವನ್ನು ಕೊಡುವ ಚಂದ್ರನು.

ಸೀತಾ ಸಂಜ್ಞಾ ಭವಾನ್ ಸೂರ್ಯಃ ಸೀತಾ ರಾತ್ರಿರ್ದಿವಾ ಭವಾನ್ ।
ಸೀತಾ ದೇವೀ ಮಹಾಕಾಳೀ ಮಹಾಕಾಲೋ ಭವಾನ್ ಸದಾ ॥ ೩೫ ॥

ಸ್ತ್ರೀಲಿಂಗಂ ತು ತ್ರಿಲೋಕೇಷು ಯತ್ತತ್ಸರ್ವಂ ಹಿ ಜಾನಕೀ ।
ಪುನ್ನಾಮಲಾಂಛಿತಂ ಯತ್ತು ತತ್ಸರ್ವಂ ಹಿ ಭವಾನ್ ಪ್ರಭೋ ॥ ೩೬ ॥

ಸರ್ವತ್ರ ಸರ್ವದೇವೇಶ ಸೀತಾ ಸರ್ವತ್ರ ಧಾರಿಣೀ ।
ತದಾ ತ್ವಮಪಿ ಚ ತ್ರಾತುಂ ತಚ್ಛಕ್ತಿರ್ವಿಶ್ವಧಾರಿಣೀ ॥ ೩೭ ॥

ತಸ್ಮಾತ್ಕೋಟಿಗುಣಂ ಪುಣ್ಯಂ ಯುವಾಭ್ಯಾಂ ಪರಿಚಿಹ್ನಿತಂ ।
ಚಿಹ್ನಿತಂ ಶಿವಶಕ್ತಿಭ್ಯಾಂ ಚರಿತಂ ಶಾನ್ತಿದಂ ಪ್ರಭೋ ॥ ೩೮ ॥

ಆವಾಂ ರಾಮ ಜಗತ್ಪೂಜ್ಯೌ ಮಮ ಪೂಜ್ಯೌ ಸದಾ ಯುವಾಂ ।
ತ್ವನ್ನಾಮ ಜಾಪಿನೀ ಗೌರೀ ತ್ವನ್ಮಂತ್ರಜಾಪವಾನಹಂ ॥ ೩೯ ॥

---

೩೫. ಸೀತೆಯೇ ಸಂಜ್ಞೆಯು. ನೀನೇ ಸೂರ್ಯನು. ಸೀತೆಯು ರಾತ್ರಿಯು. ನೀನು ಹಗಲು. ಸೀತೆಯು ಮಹಾಕಾಳಿಯು. ನೀನು ಮಹಾಕಾಳನು.

೩೬. ಮೂರು ಲೋಕದಲ್ಲಿಯೂ ಸ್ತ್ರೀಲಿಂಗವ್ಯಕ್ತಿಗಳಾವುವಿವೆಯೋ ಅವೆಲ್ಲವೂ ಸೀತೆಯೇನೆ. ಮೂರುಲೋಕದಲ್ಲಿಯೂ ಪುಲ್ಲಿಂಗವ್ಯಕ್ತಿಗಳಾವುವಿವೆಯೋ ಅವೆಲ್ಲವೂ ಭಗವಂತನಾದ ನೀನೇಯೇ.

೩೭. ಎಲೈ ಸರ್ವದೇವತೆಗಳಿಗೂ ಒಡೆಯನಾದ ರಾಮನೆ! ಸೀತೆಯು ಎಲ್ಲವನ್ನೂ ಧರಿಸತಕ್ಕವಳು. ನೀನೂ ಕೂಡ ಎಲ್ಲವನ್ನೂ ಧರಿಸುವ ಮತ್ತು ಕಾಪಾಡಬಲ್ಲ ಅವಳಲ್ಲಿರುವ ವಿಶ್ವಧಾರಿಣಿಯಾದ ಶಕ್ತಿಯು.

೩೮. ಆದ್ದರಿಂದ ಕೋಟಿಪಾಲಿನಷ್ಟು ಪುಣ್ಯವು ನಿಮಗೆ ಇರುತ್ತದೆಯೆಂದು ಹೇಳಿದೆ. ಅದೇ ರೀತಿಯಾಗಿ ಶಿವನೆಂದೂ ಶಕ್ತಿಯೆಂದೂ ಕೂಡ ಹೆಸರನ್ನು ಹೊಂದಿದ್ದೀರಿ. ಮತ್ತು ಲೋಕಕ್ಕೆ ಶಾಂತಿಯನ್ನು ಕೊಡುತ್ತೀರಿ.

೩೯. ಎಲೈ ರಾಮನೆ! ಶಿವಶಕ್ತಿಯರಾದ ನಾವು ಜಗತ್ತಿಗೇ ಪೂಜ್ಯರು. ಅಂತಹ ನಮಗೆ ನೀವಿಬ್ಬರೂ ಪೂಜ್ಯರು. ನಿನ್ನ ಮಂತ್ರವನ್ನೇ ಗೌರಿಯೂ ನಾನೂ ಯಾವಾಗಲೂ ಜಪಿಸುತ್ತಿರುವೆವು.

ಮುಮೂರ್ಷೋರ್ಮಣಿಕರ್ಣ್ಯಾಂ ತು ಅರ್ಧೋದಕನಿವಾಸಿನಃ |
ಅಹಂ ದಿಶಾಮಿ ತೇ ಮಂತ್ರಂ ತಾರಕಂ ಬ್ರಹ್ಮದಾಯಕಂ ॥ ೪೦ ॥

ಅತಸ್ತ್ವಂ ಜಾನಕೀನಾಥ ಪರಂ ಬ್ರಹ್ಮಾಸಿ ನಿಶ್ಚಿತಂ |
ತ್ವನ್ಮಾಯಾಮೋಹಿತಾಸ್ಸರ್ವೇ ನ ತ್ವಾಂ ಜಾನಂತಿ ತತ್ವತಃ ॥ ೪೧ ॥

॥ ಈಶ್ವರ ಉವಾಚ ॥

ಇತ್ಯುಕ್ತಶ್ಶಂಭುನಾ ರಾಮಃ ಪ್ರಸಾದಪ್ರಣತೋಽಭವತ್ |
ದಿವ್ಯರೂಪಧರಶ್ಶ್ರೀಮಾನ್ ಅದ್ಭುತಾದ್ಭುತದರ್ಶನಃ ॥ ೪೨ ॥

ತಂ ತಥಾರೂಪಮಾಲೋಕ್ಯ ನರವಾನರದೇವತಾಃ |
ನ ದ್ರಷ್ಟುಮಪಿ ಶಕ್ತಾಸ್ತೇ ಭೇಷಜಂ ಮಹದದ್ಭುತಂ ॥ ೪೩ ॥

---

೪೦. ಮಣಿಕರ್ಣಿಕೆಯಲ್ಲಿ ಅರ್ಧೋದಕದಲ್ಲಿರುವವರಿಗೂ ಕಾಶಿಯಲ್ಲಿ ಪ್ರಾಣಬಿಡತಕ್ಕವರಿಗೂ ನಾನು ನಿನ್ನ ತಾರಕಬ್ರಹ್ಮನನ್ನು ಕೊಡುವ ಮಂತ್ರವನ್ನು ಉಪದೇಶಿಸುತ್ತೇನೆ.

೪೧. ಎಲೈ ಜಾನಕೀನಾಥನೇ! ನೀನೇ ಪರಬ್ರಹ್ಮನು. ನಿಶ್ಚಯವು. ನಿನ್ನ ಮಾಯೆಯಿಂದ ಎಲ್ಲರೂ ಮೋಹಿತರಾಗಿದ್ದಾರೆ. ಆದ್ದರಿಂದ ನೀನಾರು ? ಜಾನಕಿ ಯಾರೆಂಬುದಾಗಿ ಅವರು ತಿಳಿಯಲಾಗುವುದಿಲ್ಲ.

೪೨. ಈಶ್ವರನು ಹೇಳಿದನು–ಶಂಭುವು ಹೀಗೆಂದು ಹೇಳುತ್ತಲೂ ಆ ರಾಮನು ದಿವ್ಯರೂಪವನ್ನು ಹೊಂದಿ ಅದ್ಭುತವಾದ ಆಕಾರವನ್ನು ಹೊಂದಿ ಅನುಗ್ರಹದಲ್ಲಿ ಆಸಕ್ತನಾದನು.

೪೩. ನರರೂ ವಾನರರೂ ದೇವತೆಗಳೂ ಆ ಸ್ವಾಮಿಯು ಆ ರೀತಿಯಾದ ಆಕಾರವನ್ನು ಹೊಂದಿದುದನ್ನು ನೋಡಿ ಸಂಸಾರಕ್ಕೆ ಔಷಧಿರೂಪವಾದ ಈ ಅದ್ಭುತಾಕಾರವನ್ನು ನೋಡಲು ಅಸಮರ್ಥರಾದರು.

ಭಯಾದ್ದೈ ತ್ರಿದಶಶ್ರೇಷ್ಠಾಃ ಪ್ರಣೇಮುಶ್ಚಾತಿಭಕ್ತಿತಃ |
ಸಂವಿಜ್ಞಾಯ ಚ ರಾಮೋಽಪಿ ನರವಾನರದೇವತಾಃ ॥
ಮಾಯಾಮಾನುಷತಾಂ ಪ್ರಾಪ್ತಃ ಸರ್ವದೇವಾನ್ ಬ್ರವೀದ್ವಚಃ　　॥ ೪೪ ॥

॥ ಶ್ರೀರಾಮ ಉವಾಚ ॥

ಶೃಣುಧ್ವಂ ದೇವತಾ ಯೋ ಮಾಂ ಪ್ರತ್ಯಹಂ ಸಂಸ್ತುವಿಷ್ಯತಿ |
ಸ್ತವೇನ ಶಂಭುನೋಕ್ತೇನ ದೇವತುಲ್ಯೋ ಭವೇನ್ನರಃ　　॥ ೪೫ ॥

ವಿಮುಕ್ತಸ್ಸರ್ವಪಾಪೇಭ್ಯೋ ಮತ್ಸ್ವರೂಪಂ ಸಮಶ್ನುತೇ ।
ರಣೇ ಜಯಮವಾಪ್ನೋತಿ ನ ಕ್ವಚಿತ್ಪ್ರತಿಹನ್ಯತೇ　　॥ ೪೬ ॥

ಭೂತವೇತಾಳಕೃತ್ಯಾಭಿರ್ಗ್ರಹೈಶ್ಚಾಪಿ ನ ಬಾಧ್ಯತೇ |
ಅಪುತ್ರೋ ಲಭತೇ ಪುತ್ರಂ ಪತಿಂ ವಿಂದತಿ ಕನ್ಯಕಾ　　॥ ೪೭ ॥

---

೪೪. ಆಗ ದೇವತೆಗಳೆಲ್ಲರೂ ಭಯದಿಂದ ನಮಸ್ಕರಿಸಿದರು. ಆ ಸ್ವಾಮಿಯು ಈ ನರವಾನರರೂ ದೇವತೆಗಳೂ ನನ್ನ ರೂಪವನ್ನು ನೋಡಲಾರ ರೆಂದು ತಿಳಿದು ಮೊದಲಿನಂತೆ ಮಾಯಾಮನುಷ್ಯನೇ ಆಗಿ ದೇವತೆಗಳನ್ನು ಕುರಿತು ಇಂತೆಂದನು.

೪೫. ಶ್ರೀರಾಮನು ಹೇಳಿದನು-ಎಲೈ ದೇವತೆಗಳಿರಾ! ಕೇಳಿರಿ. ಈ ಶಂಭುವು ಮಾಡಿರುವ ನನ್ನ ಸ್ತೋತ್ರಪಾಠದಿಂದ ಯಾವನು ನನ್ನನ್ನು ಸ್ತುತಿಸುತ್ತಾನೆಯೋ ಅವನು ದೇವತೆಗಳಿಗೆ ಸಮನಾಗುತ್ತಾನೆ.

೪೬. ಅವನು ತನ್ನ ಪಾಪಗಳೆಲ್ಲವನ್ನೂ ಕಳೆದುಕೊಂಡು ನನ್ನ ಸ್ವರೂಪ ವನ್ನು ಹೊಂದುತ್ತಾನೆ. ಯುದ್ಧದಲ್ಲಿ ಜಯವನ್ನು ಹೊಂದುತ್ತಾನೆ. ಎಲ್ಲಿಯೂ ಸೋಲುವುದೇ ಇಲ್ಲ.

೪೭-೪೮. ಭೂತಗಳು, ಭೇತಾಳಗಳು, ಮಾಟಮುಂತಾದ ಗ್ರಹಗಳು ಇವನನ್ನು ತೊಂದರೆಪಡಿಸುವುದಿಲ್ಲ. ಮಕ್ಕಳಿಲ್ಲದವರು ಮಕ್ಕಳನ್ನೂ ಕನ್ನಿಕೆಯಾದವಳು ಗಂಡನನ್ನೂ ದರಿದ್ರನು ಐಶ್ವರ್ಯವನ್ನೂ ಹೊಂದುತ್ತಾರೆ.

ದರಿದ್ರಃ ಶ್ರಿಯಮಾಪ್ನೋತಿ ಸತ್ಯವಾನ್ ಶೀಲವಾನ್ ಭವೇತ್ ।
ಆತ್ಮತುಲ್ಯಸುತಃ ಶ್ರೀಮಾನ್ ಜಾಯತೇ ನಾತ್ರ ಸಂಶಯಃ ॥ ೪೮ ॥

ನಿರ್ವಿಘ್ನಂ ಸರ್ವಕಾರ್ಯೇಷು ಸರ್ವಾರಂಭೇಷು ವೈ ನೃಣಾಂ ।
ಯಂ ಯಂ ಕಾಮಯತೇ ಮರ್ತ್ಯಃ ತಂ ಲಭೇತ ಮನೋರಥಂ ॥ ೪೯ ॥

ಷಣ್ಮಾಸಾನ್ಮುಕ್ತಿಮಾಪ್ನೋತಿ ಸ್ತವಸ್ಯಾಸ್ಯ ಪ್ರಸಾದತಃ ।
ಯತ್ಪುಣ್ಯಂ ಸರ್ವತೀರ್ಥೇಷು ಸರ್ವಯಜ್ಞೇಷು ಯತ್ಫಲಂ ॥
ತತ್ಫಲಂ ಕೋಟಿಗುಣಿತಂ ಸ್ತವೇನಾನೇನ ಲಭ್ಯತೇ ॥ ೫೦ ॥

॥ ಈಶ್ವರ ಉವಾಚ ॥

ಇತ್ಯುಕ್ತ್ವಾ ರಾಮಚಂದ್ರೋಽಸೌ ವಿಸಸರ್ಜ ಮಹೇಶ್ವರಂ ।
ಬ್ರಹ್ಮಾದಿತ್ರಿದಶಾನ್ ಸರ್ವಾನ್ ವಿಸಸರ್ಜ ಸಮಾಗತಾನ್ ॥ ೫೧ ॥

---

ಮತ್ತು ಸತ್ಯವಂತರೂ ಶೀಲವಂತನೂ ಆಗುತ್ತಾರೆ ಅನಂತರ ತನಗೆ ಅನುರೂಪ ರಾದ ಮಕ್ಕಳು ಹುಟ್ಟುತ್ತಾರೆ. ಸಂಶಯವಿಲ್ಲ.

೪೯. ಅವನಿಗೆ ಯಾವಕೆಲಸಗಳಲ್ಲಿಯೂ ವಿಘ್ನವುಂಟಾಗುವುದಿಲ್ಲ. ಎಲ್ಲಾ ಕೆಲಸಗಳ ಆರಂಭವೂ ಸುಖವಾಗಿ ನಡೆಯುತ್ತದೆ. ಆ ಮನುಷ್ಯನು ಯಾವುದನ್ನು ಅಪೇಕ್ಷಿಸುತ್ತಾನೆಯೋ ಅವೆಲ್ಲವನ್ನೂ ಹೊಂದುತ್ತಾನೆ.

೫೦. ಈ ಸ್ತೋತ್ರವನ್ನು ಪಠಿಸುತ್ತಿದ್ದರೆ ಆರುತಿಂಗಳಲ್ಲಿ ಮುಕ್ತಿಯು ಲಭಿಸುತ್ತದೆ. ಎಲ್ಲಾ ತೀರ್ಥಗಳ ಪುಣ್ಯವೂ ಎಲ್ಲಾ ಯಜ್ಞಗಳ ಫಲವೂ ಎಷ್ಟಿದೆಯೋ ಅದರ ಕೋಟಿಯಷ್ಟು ಫಲವು ಈ ಸ್ತೋತ್ರದ ಪ್ರಸಾದದಿಂದ ಬರುತ್ತದೆ.

೫೧. ಈಶ್ವರನು ಹೇಳಿದನು–ರಾಮಚಂದ್ರನು ಹೀಗೆಂದು ಹೇಳಿ ಮಹೇಶ್ವರನನ್ನು ಕಳುಹಿಸಿದನು. ಅಲ್ಲದೆ ಅಲ್ಲಿಗೆ ಬಂದಿದ್ದ ಬ್ರಹ್ಮಾದಿದೇವತೆಗಳನ್ನೂ ಕಳುಹಿಸಿಬಿಟ್ಟನು.

ಅರ್ಚಿತಾ ಮಾನವಾಸ್ಸರ್ವೇ ಋಕ್ಷವಾನರದೈವತಾಃ ।
ವಿಸೃಷ್ಟಾ ರಾಮಚಂದ್ರೇಣ ಪ್ರೀತ್ಯಾಪರಮಯಾ ಯುತಾಃ ॥ ೫೨ ॥

ಇತ್ಥಂ ವಿಸೃಷ್ಟಾಃ ಖಲು ತೇ ಚ ಸರ್ವೇ
ಸುಖಂ ತದಾ ಜಗ್ಮುರತೀವ ಹೃಷ್ಟಾಃ ।
ಏವಂ ಪಠಂತಃ ಸ್ತವಮೀಶ್ವರೋಕ್ತಂ
ರಾಮಂ ಸ್ಮರಂತೋ ವರವಿಶ್ವರೂಪಂ ॥ ೫೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ವಿಶ್ವರೂಪ ದರ್ಶನಂ ನಾಮ ಸಪ್ತತ್ಯಧಿಕ ದ್ವಿಶತತಮೋಽಧ್ಯಾಯಃ

---

೫೨. ಆ ರಾಮಚಂದ್ರನು ಪ್ರೀತಿಯಿಂದ ಮನುಷ್ಯರನ್ನೂ ವಾನರರನ್ನೂ ಕರಡಿಗಳನ್ನೂ ದೇವತೆಗಳನ್ನೂ ಗೌರವಿಸಿ ಕಳುಹಿಸಿದನು.

೫೩. ರಾಮನು ಹೀಗೆ ಗೌರವಿಸಿ ಕಳುಹಿಸಲು ಅವರೆಲ್ಲರೂ ಬಹುವಾಗಿ ಸಂತೋಷವನ್ನು ಹೊಂದಿದರು. ಈಶ್ವರನು ಹೇಳಿದ ಈ ಸ್ತೋತ್ರವನ್ನು ಪಠಿಸುತ್ತ ರಾಮನನ್ನು ಸ್ಮರಿಸುತ್ತ ಸಂತೋಷಗೊಳ್ಳುತ್ತ ಹೊರಟುಹೋದರು.

ಇಂತು ಶ್ರೀಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ವಿಶ್ವರೂಪದರ್ಶನವೆಂಬ ಇನ್ನೂರ ಎಪ್ಪತ್ತನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಏಕಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ||



॥ ಶಂಕರ ಉವಾಚ ॥

**ಅಥ ರಾಮಸ್ತು ವೈದೇಹ್ಯಾ ರಾಜ್ಯಭೋಗಾ ಮನೋರಥಾನ್ |**
**ಬುಭುಜೇ ವರ್ಷಸಾಹಸ್ರಂ ಪಾಲಯನ್ ಸರ್ವತೋ ದಿಶಃ || ೧ ||**

**ಅಂತಃಪುರಜನಾಸ್ಸರ್ವೇ ತಾಕ್ಷಸಸ್ಯ ಗೃಹೇ ಸ್ಥಿತಾಂ |**
**ಗರ್ಹಯಂತಿ ಸ್ಮ ವೈದೇಹೀಂ ತಥಾ ಜಾನಪದಾ ಜನಾಃ || ೨ ||**

**ಲೋಕಾಪವಾದಭೀತ್ಯಾ ಚ ರಾಮಶ್ಶತ್ರುನಿವಾರಕಃ |**
**ದರ್ಶಯನ್ ಮಾನುಷಂ ಧರ್ಮಮನ್ವರ್ತತ್ಸೀಂ ನೃಪಾತ್ಮಜಾಂ || ೩ ||**

---

## ಇನ್ನೂರ ಎಪ್ಪತ್ತೊಂದನೆಯ ಅಧ್ಯಾಯವು



೧. ಶಂಕರನು ಹೇಳಿದನು-ಹೀಗೆ ರಾಮನು ಪಟ್ಟಾಭಿಷೇಕವಾದಮೇಲೆ ಒಂದು ಸಾವಿರವರ್ಷಗಳವರೆಗೂ ಸೀತೆಯೊಡನೆ ವಿಧ ವಿಧವಾದ ಭೋಗಗಳನ್ನು ಅನುಭವಿಸುತ್ತಾ ಎಲ್ಲಾ ದಿಕ್ಕುಗಳನ್ನೂ ಕಾಪಾಡುತ್ತಿದ್ದನು.

೨. ಅಂತಃಪುರದಲ್ಲಿರುವ ಸ್ತ್ರೀಜನಗಳೂ ಮತ್ತು ತನ್ನ ದೇಶದವರೂ ಕೂಡ ರಾಕ್ಷಸನ ಮನೆಯಲ್ಲಿ ವಾಸವಾಗಿದ್ದ ವೈದೇಹಿಗೆ ಅಪವಾದವನ್ನು ಹೊರಿಸಿ ನಿಂದಿಸುತ್ತಿದ್ದರು.

೩-೪. ಶತ್ರುಸೂದನನಾದ ರಾಮನು ಲೋಕಾಪವಾದಭೀತಿಯಿಂದ ತನ್ನ ಮಾನುಷಭಾವವನ್ನು ತೋರ್ಪಡಿಸುತ್ತಾ ತನ್ನ ಅಪವಾದವನ್ನು ಕಳೆದು ಕೊಳ್ಳಲು ಗರ್ಭಿಣಿಯಾಗಿರುವ ಹೆಂಡತಿಯನ್ನು ಗಂಗಾತೀರದಲ್ಲಿರುವ

ವಾಲ್ಮೀಕೇರಾಶ್ರಮೇ ಪುಣ್ಯೇ ಗಂಗಾತೀರೇ ಮಹಾವನೇ ।
ವಿಸಸರ್ಜ ಮಹಾತೇಜಾ ಗರ್ಭದುಃಖಸಮನ್ವಿತಾಂ ॥ ೪ ॥

ಸಾ ಭರ್ತುಃ ಪರತಂತ್ರಾ ಹಿ ಉವಾಸ ಮುನಿವೇಶ್ಮನಿ ।
ಅರ್ಚಿತಾ ಮುನಿಪತ್ನೀಭಿರ್ವಾಲ್ಮೀಕಿನಾ ಚ ರಕ್ಷಿತಾ ॥ ೫ ॥

ತತ್ರೈವಾಸೂತ ಯಮಳೌ ನಾಮ್ನಾ ಕುಶಲವೌ ಸುತೌ ।
ತೌ ಚ ತತ್ರೈವ ಮುನಿನಾ ವವೃಧಾತೇ ಸುಸಂಸ್ಕೃತೌ ॥ ೬ ॥

ರಾಮೋಽಪಿ ಭ್ರಾತೃಭಿಸ್ಸಾರ್ಧಂ ಪಾಲಯಾಮಾಸ ಮೇದಿನೀಂ ।
ಯಮಾದಿಗುಣಸಂಪನ್ನಃ ಸರ್ವಭೋಗವಿವರ್ಜಿತಃ ॥ ೭ ॥

---

ವಾಲ್ಮೀಕಿಯ ಆಶ್ರಮದಲ್ಲಿ ಬಿಟ್ಟು ಬಿಟ್ಟನು. ಆಕೆಯು ಗಂಡನು ಬಿಟ್ಟನಲ್ಲಾ ಯೆಂದು ಬಹುದುಃಖಿಸುತ್ತಿದ್ದಳು.

೫. ಪಾಪ ! ಅವಳು ಗಂಡನಿಗೆ ಅಧೀನಳಾದವಳಷ್ಟೆ ! ಅವಳು ಗಂಡನನ್ನೇ ಧ್ಯಾನಮಾಡುತ್ತಾ ಅವನ ಅಧೀನದಲ್ಲಿಯೇ ಇರುತ್ತಾ ಆ ವಾಲ್ಮೀಕಿಯ ಮನೆಯಲ್ಲಿದ್ದಳು. ಅಲ್ಲಿ ಆ ಮುನಿಪತ್ನಿಯರು ಅವಳನ್ನು ಗೌರವದಿಂದ ಕಾಣುತ್ತಾ ಕಾಪಾಡುತ್ತಿದ್ದರು. ವಾಲ್ಮೀಕಿಯೂ ಅವಳನ್ನು ರಕ್ಷಿಸುತ್ತಿದ್ದನು.

೬. ಆ ವಾಲ್ಮೀಕಿಯ ಆಶ್ರಮದಲ್ಲಿಯೇ ಸೀತೆಯು ಅವಳಿಜವಳಿ ಮಕ್ಕಳನ್ನು ಹೆತ್ತಳು. ಅವರ ಹೆಸರು ಕುಶಲವರೆಂದು. ಅವರಿಬ್ಬರನ್ನೂ ಆ ವಾಲ್ಮೀಕಿಯೇ ಬೆಳೆಸುತ್ತಾ ಅವರ ಜಾತಿಗೆ ಯುಕ್ತವಾದ ಕರ್ಮವೆಲ್ಲವನ್ನೂ ಮಾಡಿದನು.

೭-೮. ರಾಮನು ತಮ್ಮಂದಿರೊಡನೆ ಧರ್ಮದಿಂದ ರಾಜ್ಯವನ್ನು ಆಳುತ್ತಿದ್ದನು. ಆದರೆ ಅವನು ಇಂದ್ರಿಯನಿಗ್ರಹವುಳ್ಳವನಾಗಿದ್ದನು. ಭೋಗ ಗಳಾವುದನ್ನೂ ಅನುಭವಿಸುತ್ತಿರಲಿಲ್ಲ. ಸನಾತನನಾದ ಹರಿಯನ್ನು

ಅರ್ಚಯನ್ ಸತತಂ ವಿಷ್ಣುಮನಾದಿನಿಧನಂ ಹರಿಂ ।
ಬ್ರಹ್ಮಚರ್ಯಪರೋ ನಿತ್ಯಂ ಶಶಾಸ ಪೃಥಿವೀಂ ನೃಪಃ ॥ ೮ ॥

ಶತ್ರುಘ್ನೋ ಲವಣಂ ಹತ್ವಾ ಮಧುರಾಂ ದೇವನಿರ್ಮಿತಾಂ ।
ಪಾಲಯಾಮಾಸ ಧರ್ಮಾತ್ಮಾ ಪುತ್ರಾಭ್ಯಾಂ ಸಹ ರಾಘವಃ ॥ ೯ ॥

ಗಂಧರ್ವಾನ್ ಭರತೋ ಹತ್ವಾ ಸಿಂಧೋರುಭಯಪಾರ್ಶ್ವತಃ ।
ಸ್ವಾತ್ಮಜೌ ಸ್ಥಾಪಯಾಮಾಸ ತಸ್ಮಿನ್ ದೇಶೇ ಮಹಾಬಲೌ ॥ ೧೦ ॥

ಪಶ್ಚಿಮೇ ಮದ್ರದೇಶೇ ತು ಮದ್ರಾನ್ ಹತ್ವಾ ಚ ಲಕ್ಷ್ಮಣಃ ।
ಸ್ವಸುತೌ ಚ ಮಹಾವೀರ್ಯೌ ಅಭಿಷಿಚ್ಯ ಮಹಾಬಲಃ ॥ ೧೧ ॥

ಗತ್ವಾ ಪುನರಯೋಧ್ಯಾಂ ತು ರಾಮಪಾದಾವುಪಸ್ಪೃಶತ್ ।
ಬ್ರಾಹ್ಮಣಸ್ಯ ಮೃತಂ ಬಾಲಂ ಕಾಲಧರ್ಮಮುಪಾಗತಂ ॥ ೧೨ ॥

---

ಯಾವಾಗಲೂ ಪೂಜಿಸುತ್ತಿದ್ದನು. ಬ್ರಹ್ಮಚರ್ಯವುಳ್ಳವನಾಗಿದ್ದನು. ಈ ರೀತಿಯಾಗಿದ್ದುಕೊಂಡು ಭೂಮಿಯನ್ನು ಆಳುತ್ತಿದ್ದನು.

೯. ಶತ್ರುಘ್ನನು ಲವಣಾಸುರನನ್ನು ಕೊಂದು ಅನಂತರ ದೇವತೆಗಳಿಂದ ನಿರ್ಮಿತವಾದ ಮಧುರೆಯಲ್ಲಿಯೇ ಇದ್ದುಕೊಂಡು ತನ್ನ ಇಬ್ಬರು ಮಕ್ಕಳೊಡನೆ ರಾಜ್ಯಭಾರವನ್ನು ಮಾಡುತ್ತಿದ್ದನು.

೧೦. ಸಿಂಧುನದಿಯ ಎರಡುಕಡೆಯಲ್ಲಿಯೂ ಇದ್ದ ಗಂಧರ್ವರನ್ನು ಕೊಂದು ಭರತನು ತನ್ನ ಇಬ್ಬರ ಮಕ್ಕಳುಗಳನ್ನೂ ಆ ಸಿಂಧುದೇಶದಲ್ಲಿ ಇಟ್ಟನು.

೧೧-೧೭. ಇತ್ತ ಪಶ್ಚಿಮದ ಕಡೆ ಮದ್ರದೇಶದಲ್ಲಿ ಲಕ್ಷ್ಮಣನು ಮದ್ರರನ್ನು ಕೊಂದು ತನ್ನ ಇಬ್ಬರು ಮಕ್ಕಳನ್ನೂ ಆ ರಾಜ್ಯದಲ್ಲಿ ಅಭಿಷೇಕಮಾಡಿ ಅಲ್ಲಿಟ್ಟು ಮತ್ತೆ ಅಯೋಧ್ಯೆಗೆ ಬಂದು ಶ್ರೀರಾಮಚಂದ್ರನ ಪಾದಸೇವೆಯನ್ನು ಮಾಡುತ್ತಿದ್ದನು. ರಾಮನು ಅಯೋಧ್ಯೆಯಲ್ಲಿ ಅಕಾಲಮರಣವನ್ನು ಹೊಂದಿದ

ಜೀವಯಾಮಾಸ ಕಾಕುತ್ಸ್ಥಃ ಶೂದ್ರಂ ಹತ್ವಾ ಚ ತಾಪಸಂ ।
ತತಸ್ತು ಗೌತಮೀತೀರೇ ನೈಮಿಷೇ ಜನಸಂಸದಿ ॥ ೧೩ ॥

ಇಯಾಜ ವಾಜಿಮೇಧೇನ ರಾಘವಃ ಪರವೀರಹಾ ।
ಕಾಂಚನೀಂ ಜಾನಕೀಂ ಕೃತ್ವಾ ತಯಾ ಸಾರ್ಧಂ ಮಹಾಬಲಃ ॥ ೧೪ ॥

ಚಕಾರ ಯಜ್ಞಾನ್ ಬಹುಶೋ ರಾಘವಃ ಪರಮಾರ್ಥವಿತ್ ।
ಅಯುತಾನ್ಯಶ್ವಮೇಧಾನಿ ವಾಜಪೇಯಾನಿ ಚ ಪ್ರಭುಃ ॥ ೧೫ ॥

ಅಗ್ನಿಷ್ಟೋಮಂ ವಿಶ್ವಜಿತಂ ಗೋಮೇಧಂ ಚ ಶತಕ್ರತುಂ ।
ಚಕಾರ ವಿವಿಧಾನ್ ಯಜ್ಞಾನ್ ಪರಿಪೂರ್ಣಾನ್ ಸದಕ್ಷಿಣಾನ್ ॥ ೧೬ ॥

ಏತಸ್ಮಿನ್ನಂತರೇ ತತ್ರ ವಾಲ್ಮೀಕಿಃ ಸುಮಹಾತಪಾಃ ।
ಸೀತಾಮಾನೀಯ ಕಾಕುತ್ಸ್ಥಮಿದಂ ವಚನಮಬ್ರವೀತ್ ॥ ೧೭ ॥

---

ಬ್ರಾಹ್ಮಣ ಬಾಲಕನನ್ನು ಶೂದ್ರತಾಪಸನನ್ನು ಕೊಂದು ಬದುಕಿಸಿದನು. ಅನಂತರ ನೈಮಿಷಾರಣ್ಯದ ಗೌತಮೀನದಿಯ ದಡದಲ್ಲಿ ಬಹುಜನಗಳಿದ್ದ ಬಾಗದಲ್ಲಿ ರಾಘವನು ಚಿನ್ನದ ಸೀತೆಯನ್ನು ಮಾಡಿಕೊಂಡು ಅವಳೊಡನೆ ಅಶ್ವಮೇಧಯಾಗ ವನ್ನು ಮಾಡಿದನು. ವಿಷಯವನ್ನು ಚೆನ್ನಾಗಿ ಬಲ್ಲ ಆ ಶ್ರೀರಾಮನು ಈ ರೀತಿಯಾಗಿ ಅನೇಕ ಯಜ್ಞಗಳನ್ನು ಮಾಡಿದನು. ಆ ಶ್ರೀರಾಮನು ನೂರು ಅಶ್ವಮೇಧಗಳು, ಅನೇಕವಾದ ವಾಜಪೇಯಗಳು, ಅಗ್ನಿಷ್ಟೋಮ, ವಿಶ್ವಜಿತ್ತು, ಗೋಮೇಧ, ಶತಕ್ರತು, ಮುಂತಾದ ಯಾಗಗಳನ್ನು ವಿಧಿಪೂರ್ವಕವಾಗಿ ಮಾಡಿದನು. ಮತ್ತು ಪೂರ್ಣವಾದ ದಕ್ಷಿಣೆಯನ್ನೂ ಕೊಟ್ಟನು.

೧೭. ಈ ಯಾಗಗಳನ್ನು ಮಾಡುತ್ತಿರುವಾಗ ಮಹಾತಪಸ್ವಿಯಾದ ವಾಲ್ಮೀಕಿಯು ಅಲ್ಲಿಗೆ ಸೀತೆಯನ್ನು ಕರೆದುಕೊಂಡು ಬಂದು ರಾಮನನ್ನು ಕುರಿತು ಇಂತೆಂದು ಹೇಳಿದನು.

॥ ವಾಲ್ಮೀಕಿರುವಾಚ ॥

ಅಪಾಪಾಂ ಮೈಥಿಲೀಂ ರಾಮ ತ್ಯಕ್ತುಂ ನಾರ್ಹಸಿ ಸುವ್ರತ ।
ಇಯಂ ತು ವಿರಜಾ ಸಾಧ್ವೀ ಭಾಸ್ಕರಸ್ಯ ಪ್ರಭಾ ಯಥಾ ॥
ಅನನ್ಯಾ ತವ ಕಾಕುತ್‌ಸ್ಥ ಕಸ್ಮಾತ್ತ್ಯಕ್ತಾ ತ್ವಯಾನಘ ॥ ೧೮ ॥

॥ ಶ್ರೀರಾಮ ಉವಾಚ ॥

ಅಪಾಪಾಂ ಮೈಥಿಲೀಂ ಬ್ರಹ್ಮನ್ ಜಾನಾಮಿ ವಚನಾತ್ತವ ।
ರಾವಣೇನ ಹೃತಾ ಸಾಧ್ವೀ ದಂಡಕೇ ವಿಜನೇ ಪುರಾ ॥ ೧೯ ॥

ತಂ ಹತ್ವಾ ಸಮರೇ ದುಷ್ಟಂ ಶುದ್ಧಾಮಗ್ನಿಮುಖಂ ಗತಾಂ ।
ಪುನರ್ಮ್ಯಾತೋಽಸ್ಮ್ಯಯೋಧ್ಯಾಯಾಂ ಸೀತಾಮಾದಾಯ ಧರ್ಮತಃ ॥ ೨೦ ॥

ಲೋಕಾಪವಾದಃ ಸುಮಹಾನಭೂತ್ಪೌರಜನೇಷು ಚ ।
ತ್ಯಕ್ತಾ ಮಯಾ ಶುಭಾಚಾರಾ ತದ್ಭಯಾತ್ತವ ಸನ್ನಿಧೌ ॥ ೨೧ ॥

---

೧೮. ವಾಲ್ಮೀಕಿಯು ಹೇಳಿದನು-ಎಲೈ ಶ್ರೀರಾಮನೆ ! ಈ ಮೈಥಿಲಿಯು ಪಾಪಿನಿಯಲ್ಲ. ಇವಳನ್ನು ಬಿಡಬಾರದು. ಈಕೆಯು ಸೂರ್ಯನ ಪ್ರಭೆಯಂತೆ ಪಾಪರಹಿತಳು. ಬೇರೆಯವರನ್ನು ಕನಸಿನಲ್ಲಿಯೂ ಕಾಣಳು. ಅಂತಹ ಇವಳನ್ನು ಬಿಡಲು ಕಾರಣವೇನು ?

೧೯-೨೧. ಶ್ರೀರಾಮನು ಹೇಳಿದನು-ಎಲೈ ವಾಲ್ಮೀಕಿಯೆ! ಮೈಥಿಲಿಯು ಪಾಪಿನಿಯಲ್ಲವೆಂಬುದನ್ನು ಬಲ್ಲೆನು ನಿನ್ನ ಮಾತಿನ ಮೇಲೆ ಇನ್ನೂ ಧೃಡಪಟ್ಟಿತು. ಪೂರ್ವದಲ್ಲಿ ದಂಡಕಾವನದಲ್ಲಿದ್ದಾಗ ಈಕೆಯನ್ನು ರಾವಣನು ಕದ್ದನು. ಆ ದುಷ್ಟನನ್ನು ಕೊಂದೆನು. ಅನಂತರ ಅಗ್ನಿಮುಖದಿಂದ ಈ ಸೀತೆಯು ಶುದ್ಧಳಾಗಿ ಬಂದುದನ್ನೂ ಬಲ್ಲೆನು ಅಂತಹ ಸೀತೆಯನ್ನು ಕರೆದುಕೊಂಡು ಮತ್ತೆ ಅಯೋಧ್ಯೆಗೆ ಬಂದೆನು. ಆದರೂ ಇಲ್ಲಿ ದೇಶದಲ್ಲೆಲ್ಲವೂ ಬಹುವಾದ ಅಪವಾದವುಂಟಾಯಿತು. ಆದ್ದರಿಂದಲೇ ಅವಳು ಒಳ್ಳೆಯವಳಾಗಿದ್ದರೂ ಆ ಅಪವಾದದ ಭಯದಿಂದ ನಿನ್ನ ಬಳಿಯಲ್ಲಿ ಬಿಟ್ಟಿರುವೆನು.

ತಸ್ಮಾಲ್ಲೋಕಸ್ಯ ಸಂತುಷ್ಟ್ಯೈ ಸೀತಾ ಮಮ ಪರಾಯಣಾ ।
ಪಾರ್ಥಿವಾನಾಂ ಸಹರ್ಷೀಣಾಂ ಪ್ರತ್ಯಯಂ ಕರ್ತುಮರ್ಹತಿ ॥ ೨೨ ॥

॥ ಮಹೇಶ್ವರ ಉವಾಚ ॥

ಏವಮುಕ್ತಾ ತದಾ ಸೀತಾ ಮುನಿಪಾರ್ಥಿವಸಂಸದಿ ।
ದರ್ಶಯನ್ತ್ಯಸ್ಯ ಲೋಕಸ್ಯ ರಾಮಸ್ಯಾನನ್ಯತಾಂ ಸತೀ ॥ ೨೩ ॥

ಅಬ್ರವೀತ್ ಪ್ರಾಂಜಲಿಃ ಪ್ರೀತಾ ಸರ್ವೇಷಾಂ ಜನಸಂಸದಿ ।
ಚಕಾರ ಪ್ರತ್ಯಯಂ ದೇವೀ ಲೋಕಾಶ್ಚರ್ಯಕರಂ ಸತೀ ॥ ೨೪ ॥

॥ ಸೀತೋವಾಚ ॥

ಯಥಾಹಂ ರಾಘವಾದನ್ಯಂ ಮನಸಾಪಿ ನ ಚಿಂತಯೇ ।
ತಥಾ ಮೇ ಧರಣೀದೇವಿ ವಿವರಂ ದಾತುಮರ್ಹಸಿ ॥ ೨೫ ॥

---

೨೨. ಆದ್ದರಿಂದ ನನ್ನಲ್ಲಿಯೇ ಆಸಕ್ತಳಾಗಿರುವ ಈ ಸೀತೆಯು ತಾನು ಪರಿಶುದ್ಧಳೆಂಬುದನ್ನು ಲೋಕದ ನಂಬಿಕೆಗೋಸ್ಕರ ರಾಜರು ಋಷಿಗಳು ಇವರ ಎದುರಿಗೆ ಅವರನ್ನು ನಂಬಿಸುವಂತೆ ಪಾರಿಶುದ್ಧ್ಯವನ್ನು ತೋರಿಸಲಿ.

೨೩-೨೪. ಮಹೇಶ್ವರನು ಹೇಳಿದನು--ರಾಮನು ಸೀತೆಯನ್ನು ಕುರಿತು ಇಂತೆಂದು ಹೇಳಲು ಆಕೆಯು ಮುನಿಗಳು ರಾಜರುಗಳು ಇರುವ ಆ ಸಭೆಯಲ್ಲಿ ತಾನು ರಾಮನಲ್ಲಿಯೇ ಆಸಕ್ತಳಾಗಿರುವೆನೆಂಬುದನ್ನು ತೋರಿಸುತ್ತಾ ಕೈಮುಗಿದುಕೊಂಡು ಆ ಸಭೆಯಲ್ಲಿ ಲೋಕಾಶ್ಚರ್ಯವಾದ ನಂಬಿಕೆಯನ್ನು ತೋರಿಸಲು ಇಂತೆಂದಳು.

೨೫. ಸೀತೆಯು ಹೇಳಿದಳು–ನಾನು ರಾಘವನನ್ನು ಹೊರತಾಗಿ ಬೇರೆಯವನನ್ನು ಮನಸ್ಸಿನಲ್ಲಿಯೂ ಯೋಚಿಸುವುದಿಲ್ಲ. ಹಾಗಿದ್ದರೆ ಆ ಸತ್ಯದಿಂದ ಎಲೈ ಭೂದೇವಿಯೇ! ನನಗೆ ಸಂದನ್ನು ಬಿಟ್ಟು ಒಳಗೆ ಹೋಗಲು ಜಾಗವನ್ನು ಕೊಡು.

ಮನಸಾ ಕರ್ಮಣಾ ವಾಚಾ ಯಥಾ ರಾಮಂ ಸಮರ್ಚಯೇ ।
ತಥಾ ಮೇ ಧರಣೀದೇವಿ ವಿವರಂ ದಾತುಮರ್ಹಸಿ ॥ ೨೬ ॥

ಯಥೈವ ಸತ್ಯಮುಕ್ತಂ ಮೇ ವೇದ್ಮಿ ರಾಮಾತ್ಪರಂ ನ ಚ ।
ತಥಾ ಸಪತ್ನ್ಯಾಂ ವೈದೇಹ್ಯಾಂ ಧರಣೀ ಸಹಸಾ ಇಯಾತ್ ॥ ೨೭ ॥

॥ ಮಹೇಶ್ವರ ಉವಾಚ ॥

ನಾನಾರತ್ನಮಯಂ ಪೀಠಂ ಪೃಷ್ಠೇ ಧೃತ್ವಾ ಖಗೇಶ್ವರಃ ।
ರಸಾತಳಾ ದಾವಿರಭೂದ್ವಿಜ್ಞಾಯ ಜನನೀಂ ತದಾ ॥ ೨೮ ॥

ತತಸ್ತು ಧರಣೀದೇವೀ ಹಸ್ತಾಭ್ಯಾಂ ಗೃಹ್ಯ ಮೈಥಿಲೀಂ ।
ಸ್ವಾಗತೇನಾಭಿನಂದ್ಯೈನಾಮಾಸನೇ ಸನ್ಯವೇಶಯತ್ ॥ ೨೯ ॥

ತಾಮಾಸನಗತಾಂ ದೃಷ್ಟ್ವಾ ದಿವಿ ದೇವಗಣಾ ಭೃಶಂ ।
ಪುಷ್ಪವೃಷ್ಟಿಮವಿಚ್ಛಿನ್ನಾಂ ದಿವ್ಯಾಂ ಸೀತಾಮವಾಕಿರನ್ ॥ ೩೦ ॥

---

೨೬. ಮನೋವಾಕ್ಕಾಯಕರ್ಮಗಳಿಂದ ನಾನು ಮತ್ತೊಬ್ಬರನ್ನು ಚಿಂತಿಸದಿದ್ದರೆ ಆ ಸತ್ಯದಿಂದ ಎಲೈ ಭೂದೇವಿಯೇ ! ಒಳಗೆ ಹೋಗಲು ಜಾಗವನ್ನು ಕೊಡು.

೨೭. ರಾಮನಿಗಿಂತಲೂ ಪರರನ್ನು ನಾನು ಎಣಿಸಿಯೇ ಇಲ್ಲವೆಂಬುದನ್ನು ನಾನು ಸತ್ಯವಾಗಿಯೂ ಹೇಳಿದ್ದೇನೆ. ಎನ್ನಲು ಒಡನೆಯೇ ಸವತಿಯಾದ ಭೂಮಿಯು ಬೇಗನೆ ಅಲ್ಲಿಗೆ ಬಂದಳು.

೨೮. ಮಹೇಶ್ವರನು ಹೇಳಿದನು–ಒಡನೆಯೇ ಗರುಡನು ಬಗೆಬಗೆಯ ರತ್ನಗಳಿಂದ ಕೂಡಿದ ಒಂದು ಪೀಠವನ್ನು ಹೆಗಲಿನ ಮೇಲೆ ಹೊತ್ತುಕೊಂಡು ಆ ಸೀತೆಯ ವಿಷಯವನ್ನು ತಿಳಿದು ಪಾತಾಳದಿಂದ ಮೇಲಕ್ಕೆ ಬಂದನು.

೨೯. ಒಡನೆಯೇ ಭೂದೇವಿಯು ಸೀತೆಯನ್ನು ಕೈಗಳಿಂದಹಿಡಿದುಕೊಂಡು ಸ್ವಾಗತಿಸಿ ಆ ಪೀಠದಲ್ಲಿ ಕುಳ್ಳಿರಿಸಿದಳು.

೩೦. ಆ ಸೀತೆಯು ಆ ಆಸನದಲ್ಲಿ ಕುಳಿತುಕೊಂಡುದನ್ನು ನೋಡಿ ಅಂತರಿಕ್ಷದಲ್ಲಿ ದೇವತೆಗಳು ಸೀತೆಯ ಮೇಲೆ ಹೂಮಳೆಯನ್ನು ಎಡಬಿಡದೆ ಕರೆದರು.

ಸಾಪಿ ದಿವ್ಯಾಪ್ಸರೋಭಿಸ್ತು ಪೂಜ್ಯಮಾನಾ ಸನಾತನೀ ।
ವೈನತೇಯಂ ಸಮಾರುಹ್ಯ ತಸ್ಮಾನ್ಮಾರ್ಗಾದ್ದಿವಂ ಯಯೌ ॥ ೩೧ ॥

ದಾಸೀಗಣೈಃ ಪೂರ್ವಭಾಗೇ ಸಂವೃತಾ ಜಗದೀಶ್ವರೀ ।
ಸಂಪ್ರಾಪ ಪರಮಂ ಧಾಮ ಯೋಗಿಗಮ್ಯಂ ಸನಾತನಂ ॥ ೩೨ ॥

ರಸಾತಲಪ್ರವಿಷ್ಟಾಂ ತು ತಾಂ ದೃಷ್ಟ್ವಾ ಸರ್ವಮಾನುಷಾಃ ।
ಸಾಧುಸಾಧ್ವಿತಿ ಸೀತೇಯಮುಚ್ಚೈಸ್ಸರ್ವೇ ಪ್ರಚುಕ್ರುಶುಃ ॥ ೩೩ ॥

ರಾಮಃ ಶೋಕಸಮಾವಿಷ್ಟಃ ಸಂಗೃಹ್ಯ ತನಯಾವುಭೌ ।
ಮುನಿಭಿಃ ಪಾರ್ಥಿವೇಂದ್ರೈಶ್ಚ ಸಾಕೇತಂ ಪ್ರವಿವೇಶ ಹ ॥ ೩೪ ॥

ಅಥ ಕಾಲೇನ ಮಹತಾ ಮಾತರಸ್ಸಂಶಿತವ್ರತಾಃ ।
ಕಾಲಧರ್ಮಸಮಾಪನ್ನಾ ಭರ್ತುಃ ಸ್ವರ್ಗಂ ಪ್ರಪೇದಿರೇ ॥ ೩೫ ॥

---

೩೧. ಆ ಸೀತೆಯು ಉತ್ತಮವಾದ ಅಪ್ಸರಸ್ತ್ರೀಯರಿಂದ ಗೌರವಿಸಲ್ಪಡುತ್ತಾ ಗರುಡನ ಮೇಲೆ ಹತ್ತಿಕೊಂಡು ಪಾತಾಳದ ದಾರಿಯಿಂದಲೇ ವೈಕುಂಠಕ್ಕೆ ತೆರಳಿದಳು.

೩೨. ಮುಂಭಾಗದಲ್ಲಿ ಅನೇಕದಾಸಿಯರಿಂದ ಅನುಸರಿಸಿ ಸೇವಿಸಲ್ಪಡುತ್ತಾ ಆ ಸೀತಾದೇವಿಯು ಯೋಗಿಗಳು ಹೊಂದತಕ್ಕ ಸನಾತನವಾದ ವೈಕುಂಠವನ್ನು ಹೊಂದಿದಳು.

೩೩. ಸೀತೆಯು ಪಾತಾಳಲೋಕಕ್ಕೆ ಹೋದುದನ್ನು ನೋಡಿ ಎಲ್ಲರೂ ಸಾಧು, ಸಾಧು, ಬಹು ಉತ್ತಮಳು, ಎಂದು ಗಟ್ಟಿಯಾಗಿ ಹೊಗಳಿದರು.

೩೪. ರಾಮನಿಗೆ ಬಹುವಾಗಿ ಶೋಕಬಂದಿತು. ಅವನು ಆ ಮಕ್ಕಳನ್ನು ಕರೆದುಕೊಂಡು ಮುನಿಗಳೊಡನೆಯೂ ರಾಜರೊಡನೆಯೂ ಅಯೋಧ್ಯೆಗೆ ಹೋದನು.

೩೫. ಹೀಗಿರಲು ಬಹು ಕಾಲವಾದ ಮೇಲೆ ಆ ರಾಮನ ತಾಯಿಯರು ನಿಯಮದಿಂದಿದ್ದು ಕಾಲಕ್ಕೆ ಅನುಗುಣವಾದ ಮರಣವನ್ನು ಹೊಂದಿ ಯೋಗಿಗಳು ಹೊಂದತಕ್ಕ ಸ್ವರ್ಗದಲ್ಲಿ ತಮ್ಮ ಗಂಡನಿರುವ ಸ್ಥಾನವನ್ನು ಹೊಂದಿದರು.

ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ ।
ಚಕಾರ ರಾಜ್ಯಂ ಧರ್ಮೇಣ ರಾಘವಃ ಸಂಶಿತವ್ರತಃ ॥ ೩೬ ॥

ಕಸ್ಯ ಚಿತ್ತ್ವಥ ಕಾಲಸ್ಯ ರಾಘವಸ್ಯ ನಿವೇಶನಂ ।
ಕಾಲಃ ತಾಪಸರೂಪೇಣ ಸಂಪ್ರಾಪ್ಯೋವಾಕ್ಯಮಬ್ರವೀತ್ ॥ ೩೭ ॥

॥ ಕಾಲ ಉವಾಚ ॥

ರಾಮ ರಾಮ ಮಹಾಬಾಹೋ ಧಾತ್ರಾ ಸಂಪ್ರೇಷಿತೋಽಸ್ಮ್ಯಹಂ ।
ಯದ್ಬ್ರವೀಮಿ ರಘುಶ್ರೇಷ್ಠ ತಚ್ಛೃಣುಷ್ವ ಪ್ರಜಾಪತೇಃ ॥ ೩೮ ॥

ದ್ವಂದ್ವಮೇವ ಹಿ ಕಾರ್ಯಂ ಸ್ಯಾದಾವಯೋಃ ಪರಿಭಾಷಣಂ ।
ತದಂತರೇ ಯಃ ಪ್ರವಿಷ್ಟಃ ಸ ವಧಾರ್ಹೋ ಭವಿಷ್ಯತಿ ॥ ೩೯ ॥

---

೩೬. ರಾಮನು ನಿಯಮದಿಂದಿದ್ದುಕೊಂಡು ಹನ್ನೊಂದು ಸಾವಿರ ವರ್ಷಗಳವರೆಗೆ ಧರ್ಮದಿಂದ ರಾಜ್ಯವಾಳಿದನು.

೩೭. ಹೀಗಿರಲು ಒಂದುಸಾರಿ ಆ ಶ್ರೀರಾಮನ ಮನೆಗೆ ಕಾಲನು ಋಷಿಯ ವೇಷವನ್ನು ಹಾಕಿಕೊಂಡು ಬಂದು ಇಂತೆಂದು ಹೇಳಿದನು.

೩೮. ಕಾಲನು ಹೇಳಿದನು–ಮಹಾಬಾಹುವಾದ ರಾಮನೆ! ನನ್ನನ್ನು ಬ್ರಹ್ಮನು ಕಳುಹಿಸಿರುವನು. ಆ ಬ್ರಹ್ಮನು ಹೇಳಿರುವುದನ್ನು ಹೇಳುತ್ತೇನೆ. ಕೇಳು.

೩೯. ಎಲೈ ರಾಮನೆ! ನಾವುಗಳಿಬ್ಬರೇ ಮಾತನಾಡಬೇಕು. ನಾವಿಬ್ಬರೂ ಮಾತನಾಡುತ್ತಿರುವಾಗ ಮಧ್ಯದಲ್ಲಿ ಯಾವನಾದರೂ ಬಂದರೆ ಆಗ ಆ ಕಾವಲುಗಾರನು ವಧೆಗೆ ಯೋಗ್ಯನಾಗುವನು. (ತಪ್ಪಿತಸ್ಥನಾದ ಕಾವಲುಗಾರನನ್ನು ಕೊಂದುಹಾಕಬೇಕು).

॥ ಮಹೇಶ್ವರ ಉವಾಚ ॥

ತಥೇತಿ ಚ ಪ್ರತಿಶ್ರುತ್ಯ ರಾಮೋ ರಾಜೀವಲೋಚನಃ ।
ದ್ವಾಃಸ್ಥಂ ಕೃತ್ವಾ ತು ಸೌಮಿತ್ರಿಂ ಕಾಲೇನ ಸಮಭಾಷತ ॥
ವೈವಸ್ವತೋಽಬ್ರವೀದ್ವಾಕ್ಯಂ ರಾಮಂ ದಶರಥಾತ್ಮಜಂ　　|| ೪೦ ||

|| ಕಾಲ ಉವಾಚ ||

ಶೃಣು ರಾಮ ಯಥಾ ವೃತ್ತಂ ಮಮಾಗಮನಕಾರಣಂ ।
ದಶ ವರ್ಷಸಹಸ್ರಾಣಿ ದಶ ವರ್ಷಶತಾನಿ ಚ　　॥ ೪೧ ॥

ವಸಾಸ್ಮಿ ಮಾನುಷೇ ಲೋಕೇ ಹತ್ವಾ ರಾಕ್ಷಸಪುಂಗವೌ ।
ಏವಮುಕ್ತಸ್ಸುರಗಣೈಃ ಅವತೀರ್ಣೋಽಸಿ ಭೂತಲೇ　　|| ೪೨ ||

ತದದ್ಯ ಸಮಯಃ ಪ್ರಾಪ್ತಃ ಸ್ವರ್ಲೋಕಂ ಗಮಿತುಂ ನೃಪ ।
ಸನಾಥಾ ಹಿ ಸುರಾಸ್ಸರ್ವೇ ಭವಂತ್ವಥ ತ್ವಯಾನಘ　　|| ೪೩ ||

---

೪೦. ಮಹೇಶ್ವರನು ಹೇಳಿದನು—ರಾಜೀವಲೋಚನನಾದ ರಾಮನು ಹಾಗೆಯೇ ಆಗಲೆಂದು ಹೇಳಿ ಲಕ್ಷ್ಮಣನನ್ನು ಬಾಗಿಲಿನಲ್ಲಿ ಕಾವಲಿಗಿಟ್ಟು ಆ ಯಮನೊಡನೆ ಇಂತೆಂದು ಮಾತನಾಡಿದನು. ಆಗ ಮೊದಲು ಯಮನು ದಶರಥನ ಮಗನಾದ ರಾಮನನ್ನು ಕುರಿತು ಇಂತೆಂದು ಹೇಳಿದನು.

೪೧-೪೨. ಕಾಲನು ಹೇಳಿದನು—ಎಲೈ ರಾಮನೆ! ನಾನು ಬಂದುದಕ್ಕೆ ಕಾರಣವನ್ನು ಸರಿಯಾಗಿ ಹೇಳುತ್ತೇನೆ. ಕೇಳು. ರಾವಣ ಕುಂಭಕರ್ಣರನ್ನು ಕೊಂದಮೇಲೆ ಹನ್ನೊಂದು ಸಾವಿರ ವರ್ಷಗಳ ವರೆಗೂ ವಾಸಿಸುತ್ತಿರು, ಎಂದು ದೇವತೆಗಳು ಕೇಳಿಕೊಂಡರು. ಅದರಂತೆ ನೀನು ಈ ಭೂಮಿಯಲ್ಲಿ ಅವತರಿಸಿರುತ್ತೀಯೆ.

೪೩. ಆದ್ದರಿಂದ ನೀನು ಈಗ ಸ್ವರ್ಗಲೋಕವನ್ನು ಹೊಂದಲು ಸಮಯವು ಬಂದಿದೆ. ನೀನು ಸ್ವರ್ಲೋಕಕ್ಕೆ ಹೋಗು. ಅಲ್ಲಿ ದೇವತೆಗಳು ನಿನ್ನಿಂದ ಸನಾಥರಾಗಿ ಆಗಲಿ.

|| ಮಹೇಶ್ವರ ಉವಾಚ ||

ಏವಮಸ್ತ್ವಿತಿ ಕಾಕುತ್ಸ್ಥೋ ರಾಮಃ ಪ್ರಾಹ ಮಹಾಭುಜಃ ।
ಏತಸ್ಮಿನ್ನಂತರೇ ತತ್ರ ದೂರ್ವಾಸಸ್ತು ಮಹಾತಪಾಃ ॥
ರಾಜದ್ವಾರಮುಪಾಗಮ್ಯ ಲಕ್ಷ್ಮಣಂ ವಾಕ್ಯಮಬ್ರವೀತ್ || ೪೪ ||

|| ದುರ್ವಾಸಾ ಉವಾಚ ||

ಮಾಂ ನಿವೇದಯ ಕಾಕುತ್ಸ್ಥಂ ಶೀಘ್ರಂ ಗತ್ವಾ ನೃಪಾತ್ಮಜ || ೪೫ ||

|| ಮಹೇಶ್ವರ ಉವಾಚ ||

ತಮಬ್ರವೀಲ್ಲಕ್ಷ್ಮಣಸ್ತು ಅಸಾನ್ನಿಧ್ಯಮಿತಿ ದ್ವಿಜ ।
ತತಃ ಕ್ರೋಧಸಮಾವಿಷ್ಟಃ ಪ್ರಾಹ ತಂ ಮುನಿಸತ್ತಮಃ || ೪೬ ||

|| ದುರ್ವಾಸಾ ಉವಾಚ ||

ಶಾಪಂ ದಾಸ್ಯಾಮಿ ಕಾಕುತ್ಸ್ಥಂ ರಾಮಂ ಯದಿ ನ ದರ್ಶಯೇಃ || ೪೭ ||

---

೪೪. ಮಹೇಶ್ವರನು ಹೇಳಿದನು—ಆ ಮಹಾಭುಜನಾದ ರಾಮನು ಹಾಗೆಯೇ ಆಗಲೆಂದು ಹೇಳಿದನು. ಇವರು ಒಳಗೆ ಮಾತನಾಡುತ್ತಿರುವಾಗ ಹೊರಗಡೆ ಲಕ್ಷ್ಮಣನು ಕಾಯುತ್ತಿರುವ ಸಮಯದಲ್ಲಿ ಮಹಾತಪಸ್ವಿಯಾದ ದೂರ್ವಾಸನು ಬಂದನು. ಅರಮನೆಯ ಬಾಗಿಲಿಗೆ ಬಂದು ಬಾಗಿಲನ್ನು ಕಾಯುತ್ತಿದ್ದ ಲಕ್ಷ್ಮಣನನ್ನು ಕುರಿತು ಇಂತೆಂದನು.

೪೫. ದುರ್ವಾಸನು ಹೇಳಿದನು—ಎಲೈ ರಾಜಕುಮಾರನೆ! ಬೇಗ ಹೋಗಿ ನಾನು ಬಂದಿರುವ ವಿಷಯವನ್ನು ಶ್ರೀರಾಮನಿಗೆ ತಿಳಿಸು.

೪೬. ಮಹೇಶ್ವರನು ಹೇಳಿದನು—ಆಗ ಲಕ್ಷ್ಮಣನು ಅವನನ್ನು ಕುರಿತು ಈಗ ರಾಮನನ್ನು ನೋಡಲಾಗುವುದಿಲ್ಲ, ಎಂದನು. ಅದಕ್ಕೆ ಕೋಪಗೊಂಡ ಆ ಋಷಿಯು ಲಕ್ಷ್ಮಣನನ್ನು ಕುರಿತು ಇಂತೆಂದನು.

೪೭. ದುರ್ವಾಸನು ಹೇಳಿದನು—ಎಲೈ ಲಕ್ಷ್ಮಣನೆ! ರಾಮನನ್ನು ನನಗೆ ತೋರಿಸದಿದ್ದರೆ ನಿನಗೆ ಶಾಪವನ್ನು ಕೊಡುತ್ತೇನೆ.

|| ಮಹೇಶ್ವರ ಉವಾಚ ||

ತಸ್ಮಾಚ್ಛಾಪಭಯಾದ್ವಿಪ್ರಂ ರಾಘವಾಯ ನ್ಯವೇದಯತ್ |
ತತ್ರೈವಾಂತರ್ದಧೇ ಕಾಲಃ ಸರ್ವಭೂತಭಯಾವಹಃ || ೨೮ ||

ಪೂಜಯಾಮಾಸ ತಂ ಪ್ರಾಪ್ತಮೃಷಿಂ ದುರ್ವಾಸಸಂ ನೃಪಃ |
ಅಗ್ರಜಸ್ಯ ಪ್ರತಿಜ್ಞಾಂ ತು ವಿಜ್ಞಾಯ ರಘುಸತ್ತಮಃ || ೨೯ ||

ತತ್ಯಾಜ ಮಾನುಷಂ ರೂಪಂ ಲಕ್ಷ್ಮಣಃ ಸರಯೂಜಲೇ |
ವಿಸೃಜ್ಯ ಮಾನುಷಂ ರೂಪಂ ಪ್ರವಿವೇಶ ಸ್ವಕಾಂ ತನುಂ || ೩೦ ||

ಫಣಾಸಹಸ್ರಸಂಯುಕ್ತಃ ಕೋಟೀಂದುಸಮವರ್ಚಸಾ |
ದಿವ್ಯಮಾಲ್ಯಾಂಬರಧರೋ ದಿವ್ಯಗಂಧಾನುಲೇಪನಃ || ೩೧ ||

ನಾಗಕನ್ಯಾಸಹಸ್ರೈಸ್ತು ಸಂವೃತಃ ಸಮಲಂಕೃತಃ |
ವಿಮಾನಂ ದಿವ್ಯಮಾರುಹ್ಯ ಪ್ರಯಯೌ ವೈ ಪರಂಪದಂ || ೩೨ ||

---

೨೮. ಮಹೇಶ್ವರನು ಹೇಳಿದನು—ಆ ಶಾಪದ ಭಯದಿಂದ ಆ ದುರ್ವಾಸನಿಗೆ ರಾಮನನ್ನು ತೋರಿಸಿದನು. ಒಡನೆಯೇ ಅಲ್ಲಿದ್ದ ಕಾಲನು ಮರೆಯಾಗಿ ಹೊರಟುಹೋದನು.

೨೯-೩೦. ಅನಂತರ ಆ ರಾಮನು ದುರ್ವಾಸಋಷಿಯು ಬಂದುದನ್ನು ನೋಡಿ ಗೌರವಿಸಿದನು. ಆಗ ಅಣ್ಣನಾದ ರಾಮನ ಪ್ರತಿಜ್ಞೆಯನ್ನು ಲಕ್ಷ್ಮಣನು ಯೋಚಿಸಿ ರಾಮನು ಕೊಲ್ಲದೆ ಮನೆಯನ್ನು ಬಿಟ್ಟು ಓಡಿಸಲು ಲಕ್ಷ್ಮಣನು ಸರಯೂ ನದಿಯಲ್ಲಿ ತನ್ನ ಈ ಮಾನುಷರೂಪವನ್ನು ಬಿಟ್ಟುಬಿಟ್ಟನು. ಮತ್ತು ತನ್ನ ಪೂರ್ವದ ದೇಹವನ್ನು ಹೊಂದಿದನು

೩೧-೩೨. ಒಡನೆಯೇ ಸಾವಿರ ಹೆಡೆಗಳಿಂದ ಕೂಡಿಕೊಂಡು, ಕೋಟಿ ಜನ ಚಂದ್ರರಿಗೆ ಸಮನಾದ ಕಾಂತಿಯುಳ್ಳವನಾಗಿ, ದಿವ್ಯವಾದ ಮಾಲೆಯನ್ನು ಧರಿಸಿ, ದಿವ್ಯವಾದ ಗಂಧವನ್ನು ಪೂಸಿಕೊಂಡು, ಸಾವಿರಾರು ಜನ ನಾಗಕನ್ಯೆಯರಿಂದ ಕೂಡಿಕೊಂಡು, ದಿವ್ಯವಾದ ವಿಮಾನವನ್ನು ಹತ್ತಿಕೊಂಡು ವೈಕುಂಠಕ್ಕೆ ಹೋದನು.

ಲಕ್ಷ್ಮಣಸ್ಯ ಗತಿಂ ಸರ್ವಾಂ ವಿದಿತ್ವಾ ಸ ರಘೂತ್ತಮಃ ।
ಸ್ವಯಮಪ್ಯಥ ಕಾಕುತ್‍ಸ್ಥಃ ಸ್ವರ್ಗಂ ಗಂತುಮಭೀಪ್ಸಿತಃ ॥ ೫೩ ॥

ಅಭಿಷಿಚ್ಯಾಥ ಕಾಕುತ್‍ಸ್ಥೌ ಸ್ವಾತ್ಮಜೌ ಚ ಕುಶೀಲವೌ ।
ವಿಭಜ್ಯ ರಥನಾಗಾಶ್ವಂ ಸ ಧನಂ ಪ್ರದದೌ ತಯೋಃ ॥ ೫೪ ॥

ಕುಶಾವತ್ಯಾಂ ಕುಶಂ ವೀರಂ ದ್ವಾರವತ್ಯಾಂ ಲವಂ ತಥಾ ।
ಸ್ಥಾಪಯಾಮಾಸ ಧರ್ಮೇಣ ರಾಜ್ಯೇ ಸ್ವೇ ರಘುಸತ್ತಮಃ ॥ ೫೫ ॥

ಅಭಿಪ್ರಾಯಂ ತು ವಿಜ್ಞಾಯ ರಾಮಸ್ಯ ವಿದಿತಾತ್ಮನಃ ।
ಆಜಗ್ಮುರ್ವಾನರಾಸ್ಸರ್ವೇ ರಾಕ್ಷಸಾಃ ಸುಮಹಾಬಲಾಃ ॥ ೫೬ ॥

ವಿಭೀಷಣೋಥ ಸುಗ್ರೀವೋ ಜಾಂಬವಾನ್ಮಾರುತಾತ್ಮಜಃ ।
ನೀಲೋ ನಲಃ ಸುಷೇಣಶ್ಚ ನಿಷಾದಾಧಿಪತಿರ್ಗುಹಃ ॥ ೫೭ ॥

---

೫೩. ಲಕ್ಷ್ಮಣನ ಆ ರೀತಿಯಾದ ಗಮನದ ಸ್ಥಿತಿಯನ್ನು ಶ್ರೀರಾಮನು ತಿಳಿದುಕೊಂಡು ತಾನೂ ಕೂಡ ಸ್ವರ್ಗಕ್ಕೆ ಹೋಗಲು ಅಪೇಕ್ಷೆಪಟ್ಟನು.

೫೪. ಶ್ರೀರಾಮನು ಕುಶಲವರನ್ನು ರಾಜ್ಯದಲ್ಲಿ ಅಭಿಷೇಕಮಾಡಿ ರಥ, ಆನೆ, ಕುದುರೆ, ಧನ ಎಲ್ಲವನ್ನೂ ಕೂಡ ಸಮವಾದ ಭಾಗಮಾಡಿ ಹಂಚಿ ಕೊಟ್ಟನು.

೫೫. ಕುಶಾವತಿಯಲ್ಲಿ ವೀರನಾದ ಕುಶನನ್ನೂ ದ್ವಾರವತಿಯಲ್ಲಿ ಲವನನ್ನೂ ವಿಭಾಗ ಮಾಡಿದ ತನ್ನ ರಾಜ್ಯದಲ್ಲಿ ಸ್ಥಾಪಿಸಿದನು.

೫೬. ಧರ್ಮವನ್ನು ಬಲ್ಲ ರಾಮನ ಅಭಿಪ್ರಾಯವನ್ನು ತಿಳಿದು ರಾಕ್ಷಸರೂ ವಾನರರೂ ಅಲ್ಲಿಗೆ ಆಗಮಿಸಿದರು.

೫೭–೫೮. ವಿಭೀಷಣ, ಸುಗ್ರೀವ, ಜಾಂಬವಂತ, ಹನುಮಂತ, ನೀಲ, ನಲ, ಸಷೇಣ, ನಿಷಾದಾಧಿಪತಿಯಾದ ಗುಹ, ಶತ್ರುಘ್ನ ಇವರೆಲ್ಲರೂ ಕೂಡ

ಅಭಿಷಿಚ್ಯ ಸುತೌ ವೀರೌ ಶತ್ರುಘ್ನಃ ಸುಮಹಾಮನಾಃ ।
ಸರ್ವ ಏತೇ ಸಮಾಜಗ್ಮುರಯೋಧ್ಯಾಂ ರಾಮಪಾಲಿತಾಂ ॥
ತೇ ಪ್ರಣಮ್ಯ ಮಹಾತ್ಮಾನಮೂಚುಃ ಪ್ರಾಂಜಲಯೋ ನೃಪಂ ॥ ೫೮ ॥

॥ ವಾನರಪ್ರಭೃತಯ ಊಚುಃ ॥

ಸ್ವರ್ಲೋಕಂ ಗಂತುಮುದ್ಯುಕ್ತಂ ಜ್ಞಾತ್ವಾ ತ್ವಾಂ ರಘುಸತ್ತಮ ।
ಆಗತಾಃ ಸ್ಮ ವಯಂ ಸರ್ವೇ ತವಾನುಗಮನಂ ಪ್ರತಿ ॥ ೫೯ ॥

ನ ಶಕ್ತಾಃ ಸ್ಮ ಕ್ಷಣಂ ರಾಮ ಜೀವಿತುಂ ತ್ವಾಂ ವಿನಾ ಪ್ರಭೋ ।
ತಸ್ಮಾತ್ತ್ವಯಾ ವಿಶಾಲಾಕ್ಷ ಗಚ್ಛಾಮಸ್ತ್ರಿದಶಾಲಯಂ ॥ ೬೦ ॥

॥ ಮಹೇಶ್ವರ ಉವಾಚ ॥

ತೈರೇವಮುಕ್ತಃ ಕಾಕುತ್ಸ್ಥೋ ಬಾಢಮಿತ್ಯಬ್ರವೀತ್ತತಃ ।
ಅಥೋವಾಚ ಮಹಾತೇಜಾ ರಾಕ್ಷಸೇಂದ್ರಂ ವಿಭೀಷಣಂ ॥ ೬೧ ॥

---

ಆ ಕುಶಲವರನ್ನು ಅಭಿಷೇಕಮಾಡಿ ರಾಮನೊಡನೆ ಅಯೋಧ್ಯೆಗೆ ಬಂದರು. ಅವರೆಲ್ಲರೂ ಕೂಡ ಮಹಾತ್ಮನಾದ ರಾಮನನ್ನು ನಮಸ್ಕರಿಸಿ ಇಂತೆಂದರು.

೫೯. ವಾನರರೇ ಮುಂತಾದವರು ಹೇಳಿದರು–ಎಲೈ ರಘುರಾಮನೆ! ನೀನು ಸ್ವರ್ಗಲೋಕಕ್ಕೆ ಹೋಗುವುದನ್ನು ತಿಳಿದು ನಾವೆಲ್ಲರೂ ಬಂದಿದ್ದೇವೆ. ನಾವೆಲ್ಲರೂ ಕೂಡ ನಿನ್ನ ಜೊತೆಯಲ್ಲಿಯೇ ಬರಲು ಇಷ್ಟವುಳ್ಳವರಾಗಿದ್ದೇವೆ.

೬೦. ಎಲೈ ರಾಮನೆ! ನಿನ್ನನ್ನು ಬಿಟ್ಟು ಜೀವಿಸಲು ಕ್ಷಣಕಾಲವೂ ಶಕ್ತರಾಗಲಾರೆವು. ಆದ್ದರಿಂದ ನಿನ್ನ ಜೊತೆಯಲ್ಲಿಯೇ ನಾವೂ ಸ್ವರ್ಗಲೋಕಕ್ಕೆ ಬರುತ್ತೇವೆ.

೬೧. ಮಹೇಶ್ವರನು ಹೇಳಿದನು-ಅವರೆಲ್ಲರೂ ಹೀಗೆಂದು ಹೇಳಲು ರಾಘವನು ಹಾಗೆಯೇ ಆಗಲೆಂದನು ಆಮೇಲೆ ರಾಕ್ಷಸೇಂದ್ರನಾದ ವಿಭೀಷಣನನ್ನು ಕುರಿತು ಇಂತೆಂದನು.

॥ ಶ್ರೀರಾಮ ಉವಾಚ ॥

ರಾಜ್ಯಂ ಪ್ರಶಾಧಿ ಧರ್ಮೇಣ ಮಾ ಪ್ರತಿಜ್ಞಾಂ ವೃಥಾ ಕೃಥಾಃ ।
ಯಾವಚ್ಚಂದ್ರಶ್ಚ ಸೂರ್ಯಶ್ಚ ಯಾವತ್ತಿಷ್ಠತಿ ಮೇದಿನೀ ॥
ತಾವದ್ರಮಸ್ವ ಸುಪ್ರೀತಃ ಕಾಲೇ ಮಮ ಪದಂ ವ್ರಜ ॥ ೬೨ ॥

॥ ಮಹೇಶ್ವರ ಉವಾಚ ॥

ಇತ್ಯುಕ್ತ್ವಾಥ ಸ ಕಾಕುತ್ಸ್ಥಃ ಶಾರ್ಙ್ಗಂ ವಿಷ್ಣುಃ ಸನಾತನಂ ।
ಶ್ರೀರಂಗಶಾಯಿನಂ ಸೌಮ್ಯಮಿಕ್ಷ್ವಾಕುಕುಲದೈವತಂ ॥ ೬೩ ॥

ಸಂಪ್ರೀತ್ಯಾ ಪ್ರದದೌ ತಸ್ಮೈ ರಾಮೋ ರಾಜೀವಲೋಚನಃ ।
ಹನೂಮಂತಮಥೋವಾಚ ರಾಘವಃ ಶತ್ರುಸೂದನಃ ॥ ೬೪ ॥

॥ ಶ್ರೀರಾಮ ಉವಾಚ ॥

ಮತ್ಕಥಾಃ ಪ್ರಚರಿಷ್ಯಂತಿ ಯಾವಲ್ಲೋಕೇ ಹರೀಶ್ವರ ।
ತಾವದ್ರಮಸ್ವ ಮೇದಿನ್ಯಾಂ ಕಾಲೇ ಮಾಂ ವ್ರಜ ಸುವ್ರತ ॥ ೬೫ ॥

---

೬೨. ಶ್ರೀರಾಮನು ಹೇಳಿದನು-ಎಲೈ ವಿಭೀಷಣನೆ ! ನೀನು ರಾಜ್ಯವನ್ನು ಧರ್ಮದಿಂದ ಆಳುತ್ತಿರು. ಪ್ರತಿಜ್ಞೆಯನ್ನು ವ್ಯರ್ಥಮಾಡಬೇಡ. ಸೂರ್ಯ, ಚಂದ್ರ, ಭೂಮಿಗಳಿರುವವರೆಗೂ ಸಂತಸದಿಂದ ಇದ್ದುಕೊಂಡಿರು. ಅವೆಲ್ಲವೂ ನಾಶವಾದಾಗ ನನ್ನ ಸ್ಥಾನಕ್ಕೆ ಬಂದುಬಿಡು.

೬೩-೬೪. ಮಹೇಶ್ವರನು ಹೇಳಿದನು–ವಿಭೀಷಣನಿಗೆ ಹೀಗೆಂದು ಹೇಳಿ ಶ್ರೀರಾಮನು ಇಕ್ಷ್ವಾಕುಕುಲದೇವರಾದ ಶ್ರೀರಂಗದಲ್ಲಿ ಮಲಗಿರುವ ಶೃಂಗದಿಂದ ಮಾಡಿರುವ ವಿಷ್ಣುದೇವರನ್ನು ಅವನಿಗೆ ಕೊಟ್ಟನು. ಅನಂತರ ಹನುಮಂತನನ್ನು ಕುರಿತು ಇಂತೆಂದನು.

೬೫. ಶ್ರೀರಾಮನು ಹೇಳಿದನು—ಎಲೈ ಕಪೀಶ್ವರನೇ! ಲೋಕದಲ್ಲಿ ಎಲ್ಲಿಯವರೆಗೂ ನನ್ನ ಕಥೆಯು ಹರಡಿರುತ್ತದೆಯೋ ಅಲ್ಲಿಯವರೆಗೂ ಭೂಮಿಯಲ್ಲಿ ಸುಖವಾಗಿರು. ಅನಂತರ ನನ್ನ ಬಳಿಗೆ ಬಂದುಬಿಡು.

॥ ಮಹೇಶ್ವರ ಉವಾಚ ॥

ತಮೇವಮುಕ್ತ್ವಾ ಕಾಕುತ್ಸ್ಥೋ ಜಾಂಬವಂತಮಥಾಬ್ರವೀತ್ ॥ ೬೬ ॥

॥ ಶ್ರೀರಾಮ ಉವಾಚ ॥

ದ್ವಾಪರೇ ಸಮನುಪ್ರಾಪ್ತೇ ಯದೂನಾಮನ್ವಯೇ ಪುನಃ ।
ಭೂಭಾರಸ್ಯ ವಿನಾಶಾಯ ಸಮುತ್ಪತ್ಸ್ಯಾಮ್ಯಹಂ ಭುವಿ ॥
ಕರಿಷ್ಯೇ ತತ್ರ ಸಂಗ್ರಾಮಂ ತ್ವಯಾ ಚ ಪುರುಷರ್ಷಭ ॥ ೬೭ ॥

॥ ಮಹೇಶ್ವರ ಉವಾಚ ॥

ತಮೇವಮುಕ್ತ್ವಾ ಕಾಕುತ್ಸ್ಥಃ ಸರ್ವಾಂಸ್ತಾನೃಕ್ಷವಾನರಾನ್ ।
ಉವಾಚ ವಾಚಾ ಗಚ್ಛಧ್ವಮಿತಿ ರಾಮೋ ಮಹಾಬಲಃ ॥ ೬೮ ॥

ಮಂತ್ರಿಣೋ ನೈಗಮಾಶ್ಚೈವ ಭರತಃ ಕೈಕಯೀಸುತಃ ।
ರಾಘವಸ್ಯಾನುಗಮನೇ ನಿಶ್ಚಿತಾಸ್ತೇ ಸಮಾಯಯುಃ ॥ ೬೯ ॥

---

೬೬. ಮಹೇಶ್ವರನು ಹೇಳಿದನು—ಶ್ರೀರಾಮನು ಹನುಮಂತನಿಗೆ ಹೀಗೆಂದು ಹೇಳಿ ಜಾಂಬವಂತನನ್ನು ಕುರಿತು ಇಂತೆಂದನು.

೬೭. ಶ್ರೀರಾಮನು ಹೇಳಿದನು—ಎಲೈ ಜಾಂಬವನೆ! ದ್ವಾಪರಯುಗವು ಬಂದಾಗ ಭೂಭಾರವನ್ನು ನಾಶಮಾಡಲು ಯದುವಂಶದಲ್ಲಿ ನಾನು ಹುಟ್ಟುತ್ತೇನೆ. ಆಗ ನಿನ್ನೊಡನೆ ಯುದ್ಧ ಮಾಡುತ್ತೇನೆ.

೬೮. ಪರಮೇಶ್ವರನು ಹೇಳಿದನು—ಹೀಗೆಂದು ಹೇಳಿ ರಾಮನು ಆ ಕರಡಿಗಳನ್ನೂ ಕಪಿಗಳನ್ನೂ ಕುರಿತು ನನ್ನೊಡನೆ ಬನ್ನಿರಿ. ಮುಂದೆ ಹೊರಡಿ. ಎಂದನು.

೬೯. ಮಂತ್ರಿಗಳೂ ಅಲ್ಲಿನ ಅನೇಕ ಜನ ವೇದ ಓದಿದವರೂ ಕೈಕೇಯಿಯ ಮಗನಾದ ಭರತನೂ ರಾಘವನನ್ನು ಅನುಸರಿಸಿ ಹೋಗಬೇಕೆಂದು ಅಲ್ಲಿಗೆ ಬಂದರು.

ತತಃ ಶುಕ್ಲಾಂಬರಧರೋ ಬ್ರಹ್ಮಚಾರೀ ಯಯೌ ಪರಂ ।
ಕುಶಾನ್ ಗ್ರಹೀತ್ವಾ ಪಾಣಿಭ್ಯಾಮಶಕ್ತಃ ಪ್ರಯಯೌ ಪರಂ ॥ ೭೦ ॥

ರಾಮಸ್ಯ ದಕ್ಷಿಣೇ ಪಾರ್ಶ್ವೇ ಪದ್ಮಹಸ್ತಾ ರಮಾ ಗತಾ ।
ತಥೈವ ಧರಣೀ ದೇವೀ ದಕ್ಷಿಣೇ ನಿರಗಾತ್ತದಾ ॥ ೭೧ ॥

ವೇದಾಃ ಸಾಂಗಾಃ ಪುರಾಣಾನಿ ಸೇತಿಹಾಸಾನಿ ಸರ್ವತಃ ।
ಓಂಕಾರೋಥ ವಷಟ್ಕಾರಃ ಸಾವಿತ್ರೀ ಲೋಕಪಾವನೀ ॥ ೭೨ ॥

ಅಸ್ತ್ರಶಸ್ತ್ರಾಣಿ ಚ ತದಾ ಧನುರಾದೀನಿ ಪಾರ್ವತಿ ।
ಅನುಜಗ್ಮುಸ್ತಥಾ ರಾಮಂ ಸರ್ವೇ ಪುರುಷವಿಗ್ರಹಾಃ ॥ ೭೩ ॥

ಭರತಶ್ಚೈವ ಶತ್ರುಘ್ನಃ ಸರ್ವೇ ಪುರನಿವಾಸಿನಃ ।
ಸಪುತ್ರದಾರಾಃ ಕಾಕುತ್ಸ್ಥಮನುಜಗ್ಮುಃ ಸಹಾನುಗಾಃ ॥ ೭೪ ॥

ಮಂತ್ರಿಣೋ ಭೃತ್ಯವರ್ಗಾಶ್ಚ ಕಿಂಕರಾ ನೈಗಮಾಸ್ತಥಾ ।
ವಾನರಾಶ್ಚೈವ ಋಕ್ಷಾಶ್ಚ ಸುಗ್ರೀವಸಹಿತಾಸ್ತದಾ ॥ ೭೫ ॥

---

೭೦. ಅನಂತರ ರಾಮನು ಬಿಳಿಯ ಬಟ್ಟೆಗಳನ್ನು ಧರಿಸಿ ಕೈಯ್ಯಲ್ಲಿ ದರ್ಭೆಯನ್ನು ಹಿಡಿದು ಆಚಮನಮಾಡಿ ಸ್ವರ್ಗಕ್ಕೆ ಹೊರಟನು.

೭೧–೭೩. ರಾಮನ ಬಲಗಡೆಯಲ್ಲಿ ಪದ್ಮವನ್ನು ಕೈಯ್ಯಲ್ಲಿ ಹಿಡಿದು ಲಕ್ಷ್ಮಿಯು ಹೊರಟಳು. ಅಂತೆಯೇ ಭೂದೇವಿಯು ಬಲಗಡೆಯಲ್ಲಿ ಹೊರಟಳು. ಸಾಂಗವಾದ ವೇದಗಳು, ಪುರಾಣಗಳು, ಇತಿಹಾಸಗಳು, ಓಂಕಾರ, ವಷಟ್ಕಾರ, ಸಾವಿತ್ರೀ, ಅಸ್ತ್ರಗಳು, ಶಸ್ತ್ರಗಳು, ಧನುಸ್ಸುಗಳು, ಇವೆಲ್ಲವೂ ಪುರುಷಾಕಾರವನ್ನು ಹೊಂದಿ ರಾಮನನ್ನು ಅನುಸರಿಸಿ ಹೊರಟುವು.

೭೪–೮೦. ಭರತಶತ್ರುಘ್ನರೂ ಆ ಊರಿನವರೆಲ್ಲರೂ ಹೆಂಡತಿಮಕ್ಕಳು ಆಳುಗಳೊಡನೆ ಆ ಶ್ರೀರಾಮನನ್ನು ಅನುಸರಿಸಿ ಹೊರಟರು. ಮಂತ್ರಿಗಳು, ಆಳುಗಳು, ಭೃತ್ಯರು, ವೇದವಾದಿಗಳು, ವಾನರರು, ಋಕ್ಷರು, ಸುಗ್ರೀವನೇ

ಸಪುತ್ರದಾರಾಃ ಕಾಕುತ್‍ಸ್ಥಮನ್ವಗಚ್ಛನ್ ಮಹಾಮತಿಂ ।
ಪಶವಃ ಪಕ್ಷಿಣಶ್ಚೈವ ಸರ್ವೇ ಸ್ಥಾವರಜಂಗಮಾಃ ॥ ೭೬ ॥

ಅನುಜಗ್ಮುರ್ಮಹಾತ್ಮಾನಂ ಸಮೀಪಸ್ಥಾ ನರೋತ್ತಮಾಃ ।
ಯೇ ಚ ಪಶ್ಯಂತಿ ಕಾಕುತ್‍ಸ್ಥಂ ಸ್ವರ್ಗಾಯಾನುಗತಂ ಪ್ರಭುಂ ॥ ೭೭ ॥

ತೇ ತಥಾನುಗತಾ ರಾಮಂ ನ್ಯವರ್ತಂತ ನ ಕೇಚನ ।
ಅಥ ತ್ರಿಯೋಜನಂ ಗತ್ವಾ ನದೀಂ ಪಶ್ಚಾನ್ಮುಖೀಂ ಸ್ಥಿತಾಂ ॥ ೭೮ ॥

ಸರಯೂಂ ಪುಣ್ಯಸಲಿಲಾಂ ಪ್ರವಿವೇಶ ಸಹಾನುಗಃ ।
ತತಃ ಪಿತಾಮಹೋ ಬ್ರಹ್ಮಾ ಸರ್ವದೇವಗಣಾವೃತಃ ॥ ೭೯ ॥

ತುಷ್ಟಾವ ರಘುಶಾರ್ದೂಲಮೃಷಿಭಿಃ ಸಾರ್ಧಮುತ್ತಮೈಃ ।
ಅಬ್ರವೀತ್ತತ್ರ ಕಾಕುತ್‍ಸ್ಥಂ ಪ್ರವಿಷ್ಟಂ ಸರಯೂಜಲಂ ॥ ೮೦ ॥

---

ಮುಂತಾದವರೂ ಹೆಂಡತಿಮಕ್ಕಳು ಆಳುಗಳೊಡನೆ ಆ ಶ್ರೀರಾಮನನ್ನು ಅನುಸರಿಸಿ ಹೊರಟರು. ಪಶುಗಳು, ಪಕ್ಷಿಗಳು, ಅಲ್ಲಿನ ಚರಾಚರಗಳು, ಹತ್ತಿರದಲ್ಲಿದ್ದ ರಾಜರುಗಳು ಎಲ್ಲರೂ ಆ ಮಹಾಮಹಿಮನಾದ ರಾಮನನ್ನು ಅನುಸರಿಸಿ ಹೊರಟರು. ಸ್ವರ್ಗಕ್ಕೆ ಹೊರಟ ರಾಮನನ್ನು ಯಾರು ಯಾರು ನೋಡಿದರೋ ಅವರೆಲ್ಲರೂ ಹಾಗೆ ಹಾಗೆಯೇ ಹೊರಟರು. ಒಬ್ಬನೂ ಕೂಡ ಹಿಂದಿರುಗಲಿಲ್ಲ. ಅನಂತರ ಹೀಗೆ ಮೂರು ಯೋಜನಗಳವರೆಗೂ ಎಲ್ಲರ ಜೊತೆಯಲ್ಲಿಯೂ ಹೋಗಿ ಪಶ್ಚಿಮಾಭಿಮುಖವಾಗಿ ಹರಿಯುತ್ತಿರುವ ಪುಣ್ಯಕರವಾದ ಸರಯೂನದಿಯನ್ನು ಎಲ್ಲರ ಜೊತೆಯಲ್ಲಿಯೂ ಪ್ರವೇಶಿಸಿದನು. ಆಗ ಬ್ರಹ್ಮನು ಎಲ್ಲಾ ದೇವಗಣಗಳೊಡನೆಯೂ ಋಷಿಗಳೊಡನೆಯೂ ಕೂಡಿಕೊಂಡು ಅವನನ್ನು ಸ್ತುತಿಸಿದನು. ಮತ್ತು ಸರಯೂನದಿಯನ್ನು ಪ್ರವೇಶಿಸುತ್ತಿರುವ ಆ ಶ್ರೀರಾಮನನ್ನು ಕುರಿತು ಇಂತೆಂದನು.

॥ ಬ್ರಹ್ಮೋವಾಚ ॥

ಆಗಚ್ಛ ವಿಷ್ಣೋ ಭದ್ರಂ ತೇ ದಿಷ್ಟ್ಯಾ ಪ್ರಾಪ್ತೋಽಸಿ ಮಾನದ ।
ಭ್ರಾತೃಭಿಸ್ಸಹ ದೇವಾಭೈಃ ಪ್ರವಿಶಸ್ವ ನಿಜಾಂ ತನುಂ ॥ ೮೧ ॥

ವೈಷ್ಣವೀಂ ತಾಂ ಮಹಾತೇಜಾ ದೇವಾಕಾರಾಂ ಸನಾತನೀಂ ।
ತ್ವಂ ಹಿ ಲೋಕಗತಿರ್ದೇವ ನ ತ್ವಾಂ ಕೇಚಿತ್ತು ಜಾನತೇ ॥ ೮೨ ॥

ತ್ವಾಮಚಿಂತ್ಯಂ ಮಹಾತ್ಮಾನಮಕ್ಷಯಂ ಸರ್ವಸಂಗ್ರಹಂ ।
ಯಾಮಿಚ್ಛಸಿ ಮಹಾತೇಜಾಸ್ತಾಂ ತನುಂ ಪ್ರವಿಶಸ್ವ ಭೋಃ ॥ ೮೩ ॥

॥ ಮಹೇಶ್ವರ ಉವಾಚ ॥

ತಸ್ಮಿನ್ ಸೂರ್ಯಕರಾಕೀರ್ಣೇ ಪುಷ್ಪವೃಷ್ಟಿನಿಪಾತಿತೇ ।
ಉತ್ಸೃಜ್ಯ ಮಾನುಷಂ ರೂಪಂ ಸ್ವಾಂ ತನುಂ ಪ್ರವಿವೇಶ ಹ ॥ ೮೪ ॥

---

೮೧. ಬ್ರಹ್ಮನು ಹೇಳಿದನು.—ಎಲೈ ವಿಷ್ಣುವೆ? ನಿನಗೆ ಮಂಗಳವಾಗಲಿ. ಬಾ. ಬಾ. ನೀನು ಬಂದುದು ಬಹು ಒಳ್ಳೆಯದಾಯಿತು. ದೇವತೆಗಳ ಸ್ವರೂಪ ರಾದ ನಿನ್ನ ತಮ್ಮಂದಿರೊಡನೆ ಬಂದೆಯಲ್ಲ! ಇನ್ನು ನಿನ್ನ ಸರಿಯಾದ ದೇಹ ವನ್ನು ಹೊಂದು.

೮೨. ಎಲೈ ತೇಜಸ್ವಿಯೇ! ದೇವತೆಗಳ ಆಹಾರವನ್ನು ಹೊಂದಿರುವ ಸನಾತನವಾದ ಆ ವೈಷ್ಣವ ದೇಹವನ್ನು ಹೊಂದು. ಎಲೈ ಸ್ವಾಮಿಯೆ! ನೀನೇ ಲೋಕಕ್ಕೆ ಗತಿಯು ನಿನ್ನನ್ನು ಲೋಕದಲ್ಲಿ ಯಾರೂ ತಿಳಿಯರು.

೮೩. ಎಲೈ ಸ್ವಾಮಿಯೆ! ನೀನು ಯೋಚಿಸಲಿಕ್ಕೇ ಆಗದವನು. ಮಹಾ ತ್ಮನು. ನಾಶರಹಿತನು. ಎಲ್ಲರನ್ನೂ ನಿನ್ನ ದೇಹದಲ್ಲಿಯೇ ಉಳ್ಳವನು ಎಲೈ ತೇಜಸ್ವಿಯಾದ ಸ್ವಾಮಿಯೆ! ನೀನು ಯಾವ ದೇಹವನ್ನು ಅಪೇಕ್ಷಿಸು ತ್ತೀಯೋ ಅಂತಹ ಉತ್ತಮ ಶರೀರವನ್ನು ಹೊಂದು.

೮೪. ಮಹೇಶ್ವರನು ಹೇಳಿದನು—ಆಗ ಸೂರ್ಯನ ಕಿರಣಗಳಂತಿರುವ ಪುಷ್ಪ ವೃಷ್ಟಿಯು ಸುರಿಯುತ್ತಿರುವಾಗ ಆ ಮಾನುಷರೂಪವಾದ ರಾಮದೇಹವನ್ನು ಬಿಟ್ಟು ತನ್ನ ವಿಷ್ಣುವಿನ ದೇಹವನ್ನು ಹೊಂದಿದನು.

ಅಂಶಾಭ್ಯಾಂ ಶಂಖಚಕ್ರಾಭ್ಯಾಂ ಶತ್ರುಘ್ನಭರತಾವುಭೌ |
ಪ್ರವೇದಾತೇ ಮಹಾತ್ಮಾನೌ ದಿವ್ಯತೇಜಸ್ಸಮನ್ವಿತೌ || ೮೫ ||

ಶಂಖಚಕ್ರಗದಾಶಾಂರ್ಗಪದ್ಮಹಸ್ತಶ್ಚತುರ್ಭುಜಃ |
ದಿವ್ಯಾಭರಣಸಂಪನ್ನೋ ದಿವ್ಯಗಂಧಾನುಲೇಪನಃ || ೮೬ ||

ದಿವ್ಯಪೀತಾಂಬರಧರಃ ಪದ್ಮಪತ್ರನಿಭೇಕ್ಷಣಃ |
ಯುವಾ ಕುಮಾರಃ ಸೌಮ್ಯಾಂಗಃ ಕೋಮಲಾವಯವೋಜ್ಜ್ವಲಃ ||೮೭||

ಸುಸ್ನಿಗ್ಧ ನೀಲಕುಟಿಲಕುಂತಲಶ್ಶುಭಲಕ್ಷಣಃ |
ನವದೂರ್ವಾಂಕುರಶ್ಯಾಮಃ ಪೂರ್ಣಚಂದ್ರನಿಭಾನನಃ || ೮೮ ||

ದೇವೀಭ್ಯಾಂ ಸಹಿತಃ ಶ್ರೀಮಾನ್ ವಿಮಾನಮಧ್ಯರೋಹಯತ್ |
ತಸ್ಮಿನ್ ಸಿಂಹಾಸನೇ ದಿವ್ಯೇ ಮೂಲೇ ಕಲ್ಪತರೋಃ ಪ್ರಭುಃ || ೮೯ ||

---

೮೫. ಶಂಖಚಕ್ರಗಳ ಅಂಶರಾದ ಭರತಶತ್ರುಘ್ನರು ದಿವ್ಯತೇಜಸ್ಸನ್ನು ಹೊಂದಿ ಆ ಶಂಖಚಕ್ರಗಳಲ್ಲಿಯೇ ಸೇರಿಹೋದರು.

೮೬-೯೨. ಒಡನೆಯೇ ಶಂಖಚಕ್ರಗದೆಶಾಂರ್ಗ ಪದ್ಮಗಳನ್ನು ಹಿಡಿದು ನಾಲ್ಕು ತೋಳುಗಳನ್ನು ಧರಿಸಿಕೊಂಡನು. ದಿವ್ಯವಾದ ಆಭರಣಗಳನ್ನು ಧರಿಸಿಕೊಂಡನು. ದಿವ್ಯವಾದ ಗಂಧವನ್ನು ಬಳಿದುಕೊಂಡನು. ಪೀತಾಂಬರವನ್ನು ಚೆನ್ನಾಗಿ ಧರಿಸಿಕೊಂಡನು. ಪದ್ಮದ ಎಸಳುಗಳಂತೆ ಕಣ್ಣುಗಳಿದ್ದುವು. ಯುವಕನಾಗಿದ್ದನು. ಮನ್ಮಥನಂತಿದ್ದನು. ಸೌಮ್ಯನಾಗಿದ್ದನು. ಅವಯವಗಳು ಕೋಮಲವಾಗಿದ್ದುವು. ಪ್ರಕಾಶಮಾನನಾಗಿದ್ದನು. ತಲೆಗೂದಲು ನುಣುಪಾಗಿಯೂ ಗುಂಗುರುಗುಂಗುರಾಗಿಯೂ ಇದ್ದಿತು. ಚಿಗುರಾದ ಗರಿಕೆಯಂತೆ ಮೈಬಣ್ಣವಿದ್ದಿತು. ಪೂರ್ಣ ಚಂದ್ರನಂತೆ ಮುಖವಿದ್ದಿತು. ಶ್ರೀದೇವಿ ಭೂದೇವಿಯರಿಂದ ಕೂಡಿದ್ದನು. ಇಂತಹ ವೈಷ್ಣವ ದೇಹವನ್ನು ಹೊಂದಿದ ರಾಮನು ವಿಮಾನವನ್ನು ಹತ್ತಿದನು.

ನಿಷಸಾದ ಮಹಾತೇಜಾಃ ಸರ್ವದೇವೈರಭಿಷ್ಟುತಃ ।
ರಾಘವಾನುಗತಾ ಯೇ ಚ ಋಕ್ಷವಾನರಮಾನುಷಾಃ ॥ ೯೦ ॥

ಸ್ಪೃಷ್ಟ್ವೈವ ಸರಯೂತೋಯಂ ಸುಖೇನ ತ್ಯಕ್ತಜೀವಿತಾಃ ।
ರಾಮಪ್ರಸಾದಾತ್ತೇ ಸರ್ವೇ ದಿವ್ಯರೂಪಧರಾಃ ಶುಭಾಃ ॥ ೯೧ ॥

ದಿವ್ಯಮಾಲ್ಯಾಂಬರಧರಾಃ ದಿವ್ಯಮಂಗಳವರ್ಚಸಃ ।
ಆರುರೋಹ ವಿಮಾನಂ ತದಸಂಖ್ಯೈಸ್ತತ್ರ ದೇಹಿಭಿಃ ॥ ೯೨ ॥

ಸರ್ವೈಃ ಪರಿವೃತಶ್ಶ್ರೀಮಾನ್ ರಾಮೋರಾಜೀವಲೋಚನಃ ।
ಪೂಜಿತಸ್ಸುರಸಿದ್ಧೌಘೈಃ ಮುನಿಭಿಸ್ತು ಮಹಾತ್ಮಭಿಃ ॥ ೯೩ ॥

ಪ್ರಯಯೌ ಶಾಶ್ವತಂ ದಿವ್ಯಮಕ್ಷರಂ ಸ್ವಪದಂ ವಿಭುಃ ।
ಯಃ ಪಠೇದ್ರಾಮಚರಿತಂ ಶ್ಲೋಕಂ ಶ್ಲೋಕಾರ್ಧಮೇವ ವಾ ॥ ೯೪ ॥

---

ಅದರಲ್ಲಿ ಕಲ್ಪವೃಕ್ಷವಿದ್ದಿತು. ಅದರ ಕೆಳಗಡೆ ಒಂದು ಸಿಂಹಾಸನವಿದ್ದಿತು. ಅದ ರಲ್ಲಿ ಮಹಾ ತೇಜಸ್ವಿಯಾದ ರಾಮನು ಕುಳಿತುಕೊಂಡನು. ಆಗ ಅಲ್ಲಿ ಎಲ್ಲಾ ದೇವತೆಗಳೂ ಹೊಗಳಿದರು. ರಾಮನನ್ನು ಅನುಸರಿಸಿ ಹೋಗಿದ್ದ ಕಪಿ ಕರಡಿ ಮನುಷ್ಯರೆಲ್ಲರೂ ಆ ಸರಯೂ ನದಿಯ ನೀರನ್ನು ಮುಟ್ಟಿದ ಕೂಡಲೇ ಸುಖದಿಂದ ಪ್ರಾಣವನ್ನು ಬಿಟ್ಟರು. ಶ್ರೀರಾಮನ ಅನುಗ್ರಹದಿಂದ ಅವರೆಲ್ಲರೂ ದಿವ್ಯವಾದ ರೂಪವನ್ನು ಧರಿಸಿಕೊಂಡರು. ದಿವ್ಯವಾದ ಮಾಲೆಯನ್ನು ಧರಿಸಿದ್ದರು. ದಿವ್ಯ ವಾದ ಮಂಗಳವಾದ ಕಾಂತಿಯನ್ನು ಹೊಂದಿದರು. ಹೀಗಾಗಿ ಅವರೆಲ್ಲರೂ ಬಹುವಾಗಿ ಬಂದಿದ್ದ ವಿಮಾನಗಳಲ್ಲಿ ಕುಳಿತಿದ್ದರು.

೯೩-೯೬. ರಾಜೀವಲೋಚನನಾದ ಶ್ರೀರಾಮನು ಈ ರೀತಿ ಎಲ್ಲರಿಂದಲೂ ಕೂಡಿಕೊಂಡು ದೇವತೆಗಳಿಂದಲೂ ಮುನಿಗಳಿಂದಲೂ ಸಿದ್ಧರಿಂದಲೂ ಮಹಾತ ರಿಂದಲೂ ಪೂಜಿಸಿಕೊಳ್ಳುತ್ತಾ ದಿವ್ಯವೂ ನಾಶರಹಿತವೂ ಶಾಶ್ವತವೂ ಆದ ಆತನ ಸ್ಥಾನವಾದ ವೈಕುಂಠವನ್ನು ಹೊಂದಿದನು. ಈ ರಾಮಚರಿತ್ರೆಯನ್ನು

ಶೃಣುಯಾದ್ವಾ ತಥಾ ಭಕ್ತ್ಯಾ ಸ್ಮರೇದ್ವಾ ಶುಭದರ್ಶನೇ ।
ಕೋಟಿಜನ್ಮಾರ್ಜಿತಾತ್ಪಾಪಾತ್ ಜ್ಞಾನತೋಽಜ್ಞಾನತಃ ಕೃತಾತ್ ॥ ೯೫ ॥

ವಿಮುಕ್ತೋ ವೈಷ್ಣವಂ ಲೋಕಂ ಪುತ್ರದಾರಸ್ಸಬಾಂಧವೈಃ ।
ಸಮಾಪ್ನುಯಾದ್ಯೋಗಿಗಮ್ಯಮನಾಯಾಸೇನ ವೈ ನರಃ ॥ ೯೬ ॥

ಏತತ್ತೇ ಕಥಿತಂ ದೇವಿ ರಾಮಸ್ಯ ಚರಿತಂ ಮಹತ್ ।
ಧನ್ಯೋಽಸ್ಮ್ಯಹಂ ತ್ವಯಾ ದೇವಿ ರಾಮಚಂದ್ರಸ್ಯ ಕೀರ್ತನಾತ್ ।
ಕಿಮನ್ಯಚ್ಛ್ರೋತುಕಾಮಾಸಿ ತದ್ಬ್ರವೀಮಿ ವರಾನನೇ ॥ ೯೭ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀರಾಮಚರಿತಂ ನಾಮ ಏಕಸಪ್ತತ್ಯಧಿಕ ದ್ವಿಶತತಮೋಽಧ್ಯಾಯಃ

---

ಒಂದು ಶ್ಲೋಕವನ್ನಾಗಲೀ ಶ್ಲೋಕದ ಅರ್ಧವನ್ನಾಗಲೀ ಯಾವನು ಭಕ್ತಿಯಿಂದ ಕೇಳುತ್ತಾನೆಯೋ ಅಥವಾ ಹೇಳುತ್ತಾನೆಯೋ ಕೊನೆಗೆ ಸ್ಮರಿಸುತ್ತಾನೆಯೋ ಅವನು ಕೋಟಿ ಜನ್ಮಗಳಿಂದ ಜ್ಞಾನವಿದ್ದೋ ಇಲ್ಲದೆಯೋ ಬೇಕೆಂದೋ ತಿಳಿಯದೆಯೋ ಮಾಡಿದ ಪಾಪಗಳನ್ನು ಕಳೆದುಕೊಳ್ಳುತ್ತಾನೆ. ಮತ್ತು ಮಕ್ಕಳು ಹೆಂಡಿರು ಬಂಧುಗಳಿಂದ ಕೂಡಿಕೊಂಡು ಯೋಗಿಗಳು ಹೊಂದತಕ್ಕ ಉತ್ತಮವಾದ ವೈಷ್ಣವ ಲೋಕವನ್ನು ಸುಖವಾಗಿ ಹೊಂದುತ್ತಾನೆ.

೯೭. ಎಲೈ ದೇವಿಯೆ! ಮಹತ್ತಾದ ರಾಮನ ಚರಿತ್ರೆಯನ್ನು ಹೀಗೆ ಹೇಳಿದ್ದೇನೆ. ನಿನ್ನಿಂದ ರಾಮಚಂದ್ರನ ಕೀರ್ತನೆಯನ್ನು ಮಾಡಬೇಕಾಗಿ ಬಂದುದರಿಂದ ನಾನೂ ನೀನೂ ಧನ್ಯರಾದೆವು. ಇನ್ನು ಇನ್ನೇನನ್ನು ಕೇಳಬೇಕೆಂದಿದ್ದೀಯೆ? ಅದನ್ನು ಕೇಳು, ಹೇಳುತ್ತೇನೆ.

ಇಂತು ಶ್ರೀಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಶ್ರೀರಾಮ ಚರಿತ್ರೆಯ ಕಥನವೆಂಬ ಇನ್ನೂರ ಎಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ದ್ವಿಸಪ್ತತ್ಯಧಿಕ ದ್ವಿಶತತಮೋऽಧ್ಯಾಯಃ ॥



॥ ಪಾರ್ವತ್ಯುವಾಚ ॥

**ರಘುನಾಥಸ್ಯ ಚರಿತಂ ಸಾಧೂಕ್ತಂ ಹಿ ತ್ವಯಾ ವಿಭೋ ।**
**ಶ್ರುತ್ವಾ ಧನ್ಯಾಸ್ಮಿ ದೇವೇಶ ತ್ವತ್ಪ್ರಸಾದಾನ್ಮಹೇಶ್ವರ ॥ ೧ ॥**

**ಚರಿತಂ ವಾಸುದೇವಸ್ಯ ಕೃಷ್ಣಸ್ಯ ಚರಿತಂ ಮಹತ್ ।**
**ಶ್ರೋತುಮಿಚ್ಛಾಮಿ ದೇವಸ್ಯ ಚರಿತಂ ಕಲ್ಮಷಾಪಹಂ ॥ ೨ ॥**

॥ ರುದ್ರ ಉವಾಚ ॥

**ಶೃಣು ದೇವಿ ಪ್ರವಕ್ಷ್ಯಾಮಿ ಕೃಷ್ಣಸ್ಯಾಸ್ಯ ಮಹಾತ್ಮನಃ ।**
**ಚರಿತಂ ವಾಸುದೇವಸ್ಯ ಸರ್ವೇಷಾಂ ಫಲದಂ ನೃಣಾಂ ॥ ೩ ॥**

---

## ಇನ್ನೂರ ಎಪ್ಪತ್ತೆರಡನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು—ಎಲೈ ಪ್ರಭುವೆ! ರಘುನಾಥನ ಚರಿತ್ರೆಯನ್ನು ಚೆನ್ನಾಗಿ ವರ್ಣಿಸಿದೆ. ನಿನ್ನ ದಯೆಯಿಂದ ಅದನ್ನು ಕೇಳಿ ಧನ್ಯಳಾದೆನು.

೨. ವಸುದೇವನ ಮಗನಾದ ಕೃಷ್ಣನ ಚರಿತ್ರೆಯು ಪಾಪನಾಶಕವಾದುದು. ಆ ಸ್ವಾಮಿಯ ಪಾಪನಾಶಕವಾದ ಚರಿತ್ರೆಯನ್ನು ಕೇಳಲು ಇಚ್ಛಿಸುತ್ತೇನೆ.

೩. ರುದ್ರನು ಹೇಳಿದನು—ಎಲೈ ದೇವಿಯೆ! ಕೇಳು. ಮಹಾತ್ಮನಾದ ಕೃಷ್ಣನ ಚರಿತ್ರೆಯನ್ನು ಹೇಳುತ್ತೇನೆ. ಆ ವಾಸುದೇವನ ಮಗನಾದ ಕೃಷ್ಣನ ಚರಿತ್ರೆಯು ಎಲ್ಲರಿಗೂ ಒಳ್ಳೆಯ ಫಲವನ್ನು ಕೊಡುತ್ತದೆ.

**ಯದೂನಾಮನ್ವಯೇ ದೇವಿ ವಸುದೇವ ಇತೀರಿತಃ ।**
**ದೇವಮೀಢಸ್ಯ ಪುತ್ರೋಽಭೂತ್ಸರ್ವಧರ್ಮವಿದಾಂ ವರಃ ॥ ೪ ॥**

**ಉಗ್ರಸೇನಸ್ಯ ದುಹಿತಾಂ ದೇವಕೀಂ ದೇವವರ್ಣಿನೀಂ ।**
**ಉಪಯೇಮೇ ವಿಧಾನೇನ ಮಧುರಾಯಾಂ ನೃಪಾತ್ಮಜಃ ॥ ೫ ॥**

**ಉಗ್ರಸೇನಸ್ಯ ಪುತ್ರೋಽಭೂತ್ ಕಂಸಃ ಶೂರೋ ಮಹಾಬಲಃ ।**
**ತಯೋ ರಥವರಂ ತತ್ರ ಚೋದಯಾಮಾಸ ಸಾರಥಿಃ ॥ ೬ ॥**

**ಸಮಾಗತೇಷು ತೇಷ್ವೇವಂ ಪಾರ್ಥಿವಾದ್ಯೈಃ ಶುಭಾವಹೈಃ ।**
**ಅಂತರಿಕ್ಷೇಽಶರೀರಾವಾಕ್ಪ್ರಾಹ ಗಂಭೀರಯಾ ಗಿರಾ ॥ ೭ ॥**

**॥ ಆಕಾಶವಾಗುವಾಚ ॥**

**ಅಸ್ಯಾಸ್ತ್ವಾಮಷ್ಟಮೋ ಗರ್ಭಃ ಕಂಸ ಪ್ರಾಣಾನ್ ಹರಿಷ್ಯತಿ ॥ ೮ ॥**

---

೪. ಎಲೈ ದೇವಿಯೆ! ಯದುಗಳ ವಂಶದಲ್ಲಿ ವಸುದೇವನೆಂಬುವನು ಒಬ್ಬನಿದ್ದನು. ಅವನು ದೇವಮೀಢನ ಮಗನು. ಸರ್ವ ಧರ್ಮಗಳನ್ನೂ ತಿಳಿದವನು.

೫. ಆ ವಸುದೇವನು ಉಗ್ರಸೇನನ ಮಗಳಾದ ದೇವಕಿ ಎಂಬುವಳನ್ನು ಶಾಸ್ತ್ರ ರೀತಿಯಿಂದ ಮದುವೆಯಾದನು.

೬. ಆ ಉಗ್ರಸೇನನು ಮಧುರೆಗೆ ರಾಜನು. ಅವನಿಗೆ ಮಗನಾದವನು ಕಂಸನೆಂಬುವನೊಬ್ಬನಿದ್ದನು. ಈ ದೇವಕಿಯು ಕಂಸನ ಸೋದರಿಯು. ವಸುದೇವನಿಗೂ ದೇವಕಿಗೂ ಮದುವೆಯಾದಾಗ ಅವರ ಮೆರವಣಿಗೆಯಲ್ಲಿ ಕಂಸನು ತಾನೇ ರಥವನ್ನು ವಿಶ್ವಾಸದಿಂದ ನಡೆಸಿದನು.

೭. ಅನೇಕರಾದ ಉತ್ತಮರಾದ ರಾಜಪುತ್ರರೊಡನೆ ಮೆರವಣಿಗೆಯಲ್ಲಿ ಹೋಗುತ್ತಿರಲು ಅಂತರಿಕ್ಷದಲ್ಲಿ ಅಶರೀರವಾಣಿಯು ಗಂಭೀರವಾದ ಮಾತಿನಿಂದ ಇಂತೆಂದಿತು.

೮. ಆಕಾಶವಾಣಿಯು ಹೇಳಿತು.—ಎಲೈ ಕಂಸನೆ! ಈಕೆಯ ಎಂಟನೆಯ ಗರ್ಭವು ನಿನ್ನ ಪ್ರಾಣಗಳನ್ನು ತೆಗೆಯುತ್ತದೆ.

॥ ರುದ್ರ ಉವಾಚ ॥

ತಚ್ಛ್ರುತ್ವಾ ಹಂತುಮಾರೇಭೇ ಕಂಸೋಽಪಿ ಭಗಿನೀಂ ತದಾ ॥
ತಮಬ್ರವೀತ್ಸಸಂರಂಬ್ಧಂ ವಸುದೇವಸ್ಸುಬುದ್ಧಿಮಾನ್ ॥ ೯ ॥

॥ ವಸುದೇವ ಉವಾಚ ॥

ನ ಹನ್ತವ್ಯಾ ಮಹಾಭಾಗ ಭಗಿನೀ ಧರ್ಮತಸ್ತ್ವಯಾ ।
ಗರ್ಭಾನೇವ ಸಮುತ್ಪನ್ನಾನ್ ಜಹಿ ರಾಜನ್ ಮಹಾಬಲ ॥ ೧೦ ॥

॥ ರುದ್ರ ಉವಾಚ ॥

ತಥೇತ್ಯಾಹ ತದಾ ಕಂಸೋ ವಸುದೇವಂ ಚ ದೇವಕೀಂ ।
ನಿರುಧ್ಯ ಸ್ವಗೃಹೇ ರಮ್ಯೇ ಸರ್ವಭೋಗೈರ್ನ್ಯವೇಶಯತ್ ॥ ೧೧ ॥

ಏತಸ್ಮಿನ್ನಂತರೇ ದೇವಿ ಭೂರಿಭಾರಾವಪೀಡಿತಾ ।
ಜಗಾಮ ಧರಣೀ ದೇವೀ ಸಹಸಾ ಬ್ರಹ್ಮಣೋಽಂತಿಕೇ ॥ ೧೨ ॥

---

೯. ರುದ್ರನು ಹೇಳಿದನು.—ಆ ಮಾತನ್ನು ಕೇಳಿ ಕಂಸನು ತಂಗಿಯನ್ನು ಕೊಲ್ಲಲು ಹೋದನು. ಆಗ ಬುದ್ಧಿವಂತನಾದ ವಸುದೇವನು ಕೋಪಗೊಂಡಿರುವ ಆ ಕಂಸನನ್ನು ಕುರಿತು ಇಂತೆಂದನು.

೧೦. ವಸುದೇವನು ಹೇಳಿದನು.—ಎಲೈ ಪುಣ್ಯಾತ್ಮನೆ! ಇವಳು ನಿನಗೆ ಜೊತೆಯಲ್ಲಿ ಹುಟ್ಟಿದ ತಂಗಿಯು. ಇವಳನ್ನು ನೀನು ಕೊಲ್ಲುವುದು ಧರ್ಮವಲ್ಲ. ಎಲೈ ಮಹಾಬಲನೆ! ಇವಳಲ್ಲಿ ಉಂಟಾದ ಗರ್ಭಗಳನ್ನೇ ಕೊಂದುಹಾಕು.

೧೧. ರುದ್ರನು ಹೇಳಿದನು.—ಆಗ ಕಂಸನು ವಸುದೇವನಿಗೂ ದೇವಕಿಗೂ ಹಾಗೆಯೇ ಆಗಲೆಂದು ಹೇಳಿ ಅವರಿಬ್ಬರನ್ನೂ ತನ್ನದೇ ಒಂದಾದ ಒಳ್ಳೆಯ ಮನೆಯಲ್ಲಿ ಎಲ್ಲಾ ಭೋಗಗಳನ್ನೂ ಅನುಭವಿಸುವಂತೆ ಮಾಡಿ ಸೆರೆಯಿಟ್ಟನು.

೧೨. ಎಲೈ ದೇವಿಯೆ! ಇಷ್ಟರೊಳಗೆ ಭೂದೇವಿಯು ಭೂಭಾರದಿಂದ ಹೆಚ್ಚು ತೊಂದರೆಪಟ್ಟವಳಾಗಿ ಬ್ರಹ್ಮನ ಬಳಿಗೆ ತನ್ನ ಕಷ್ಟವನ್ನು ಹೇಳಿಕೊಳ್ಳಲು ಹೋದಳು.

ಸಮೇತ್ಯ ಜಗತಾಮೀಶಂ ಬ್ರಹ್ಮಾಣಂ ಪರಮೇಷ್ಠಿನಂ |
ಪ್ರಾಹ ಗಂಭೀರಯಾ ವಾಚಾ ಧರಣೀ ಲೋಕಧಾರಿಣೀ ॥ ೧೩ ॥

॥ ಧರಣ್ಯುವಾಚ ॥

ಪ್ರಜಾಪತೇ ನ ಶಕ್ತಾಸ್ಮಿ ಧರ್ತುಂ ಲೋಕಾನಿಮಾನ್ ಪ್ರಭೋ |
ರಾಕ್ಷಸಾಃ ಪಾಪಕರ್ಮಾಣಃ ಸಂಸ್ಥಿತಾ ಮಯಿ ಸುವ್ರತ ॥ ೧೪ ॥

ಜಗತಃ ಸಕಲಾನ್ ಧರ್ಮಾನ್ ವಿಧ್ವಂಸಂತಿ ಮಹಾಬಲಾಃ |
ಅಧರ್ಮವರ್ಚಸಃ ಸರ್ವೇ ನರಾಃ ಪಾಪವಿಮೋಹಿತಾಃ ॥ ೧೫ ॥

ಸ್ವಲ್ಪಮಲ್ಪತರಂ ಧರ್ಮಂ ಲೋಕೇಸ್ಮಿನ್ನ ಚ ದೃಶ್ಯತೇ |
ಧರ್ಮೇಣೈವ ಧೃತಾ ದೇವ ಸತ್ಯಶೌಚಯುತೇನ ಚ ।
ತಸ್ಮಾದಧರ್ಮಸಂಭೂತಂ ನ ಲೋಕಂ ಧರ್ತುಮುತ್ಸಹೇ ॥ ೧೬ ॥

---

೧೩. ಆ ಭೂದೇವಿಯು ಜಗತ್ತಿಗೆ ಒಡೆಯನಾದ ಉತ್ತಮಸ್ಥಾನದಲ್ಲಿ ಕುಳಿತಿರುವ ಆ ಬ್ರಹ್ಮನ ಬಳಿಗೆ ಹೋಗಿ ಗಂಭೀರವಾದ ಮಾತಿನಿಂದ ಇಂತೆಂದಳು.

೧೪. ಧರಣಿಯು ಹೇಳಿದಳು.—ಎಲೈ ಬ್ರಹ್ಮನೇ! ಈ ಲೋಕಗಳನ್ನು ನಾನು ಧರಿಸಲಾರೆನು. ಪಾಪಿಗಳಾದ ರಾಕ್ಷಸರು ಬಹುಜನರು ನನ್ನಲ್ಲಿ ಇದ್ದುಕೊಂಡಿರುವರು.

೧೫. ಅವರು ಜಗತ್ತಿನ ಧರ್ಮಗಳೆಲ್ಲವನ್ನೂ ನಾಶಮಾಡುತ್ತಿದ್ದಾರೆ. ಅವರೆಲ್ಲರೂ ಅಧರ್ಮದಲ್ಲಿ ಆಸಕ್ತಿಯುಳ್ಳವರು. ಪಾಪದಲ್ಲಿಯೇ ಮೋಹಿತರಾಗಿ ಅದನ್ನೇ ಆಚರಿಸುತ್ತಿರುವರು.

೧೬. ಎಲೈ ಸ್ವಾಮಿಯೆ! ಲೋಕದಲ್ಲಿ ಸ್ವಲ್ಪ ಧರ್ಮವೂ ಕಂಡುಬರುತ್ತಿಲ್ಲ. ಅತ್ಯಂತ ನಿಕೃಷ್ಟವಾದ ಧರ್ಮವನ್ನೂ ಕೂಡ ಯಾರೂ ಮಾಡುತ್ತಿಲ್ಲ. ಈ ಭೂಮಿಯಾದರೋ ಧರ್ಮದಿಂದಲೂ ಸತ್ಯ ಶೌಚಗಳಿಂದಲೂ ಧರಿಸಲ್ಪಟ್ಟಿರುವುದು. ಆದ್ದರಿಂದ ಅಧರ್ಮದಿಂದ ಕೂಡಿರುವ ಈ ಲೋಕಗಳನ್ನು ನಾನು ಧರಿಸಲು ಇಷ್ಟಪಡಲಾರೆನು.

|| ರುದ್ರ ಉವಾಚ ||

ಇತ್ಯುಕ್ತ್ವಾ ಧರಣೀ ದೇವೀ ತತ್ರೈವಾಂತರಧೀಯತ ।
ತತಃ ಸುರಗಣಾಸ್ಸರ್ವೇ ಬ್ರಹ್ಮರುದ್ರಪುರೋಗಮಾಃ || ೧೭ ||

ಕ್ಷೀರಾಬ್ಧೇರುತ್ತರಂ ಕೂಲಮುಧಿಗಮ್ಯ ಜಗತ್ಪತಿಂ ।
ತುಷ್ಟುವುಃ ಸ್ತುತಿಭಿಸ್ಸರ್ವೇ ಮುನಯಶ್ಚ ಮಹಾತಪಾಃ ।
ತತಃ ಪ್ರಸನ್ನಃ ಪ್ರಾಹೇಶಃ ಸರ್ವಾಂಸ್ತಾನ್ ಮುನಿಸತ್ತಮಾನ್ || ೧೮ ||

|| ಶ್ರೀ ಭಗವಾನುವಾಚ ||

ಭೋ ಭೋ ದೇವಗಣಾಸ್ಸರ್ವೇ ಕಿಂ ನಿಮಿತ್ತಮಿಹಾಗತಾಃ || ೧೯ ||

|| ರುದ್ರ ಉವಾಚ ||

ತತಃ ಪಿತಾಮಹಃ ಪ್ರಾಹ ದೇವದೇವಂ ಜನಾರ್ದನಂ || ೨೦ ||

|| ಬ್ರಹ್ಮೋವಾಚ ||

ದೇವದೇವ ಜಗನ್ನಾಥ ಪೃಥಿವೀ ಭಾರಪೀಡಿತಾ ।
ರಾಕ್ಷಸಾ ಬಹವೋ ಲೋಕೇ ಸಮುತ್ಪನ್ನಾ ದುರಾಸದಾಃ || ೨೧ ||

---

೧೭-೧೮. ರುದ್ರನು ಹೇಳಿದನು–ಆ ಭೂದೇವಿಯು ಹೀಗೆಂದು ಹೇಳಿ ಅಂತರ್ಧಾನಳಾದಳು. ಅನಂತರ ದೇವತೆಗಳೂ ಬ್ರಹ್ಮನೂ ರುದ್ರನೂ ಎಲ್ಲರೂ ಕೂಡ ಕ್ಷೀರಸಮುದ್ರದ ಉತ್ತರದಡಕ್ಕೆ ಹೋಗಿ ಆ ಸ್ವಾಮಿಯನ್ನು ನೋಡಿದರು. ಆಗ ಆ ದೇವತೆಗಳೂ ಮಹಾತಪಸ್ವಿಗಳೂ ಮುನಿಗಳೂ ಆ ವಿಷ್ಣುವನ್ನು ಸ್ತುತಿಸಿದರು. ಅನಂತರ ಪ್ರಸನ್ನನಾದ ಆ ವಿಷ್ಣುವು ಆ ಮುನಿಗಳನ್ನೂ ದೇವತೆಗಳನ್ನೂ ಕುರಿತು ಇಂತೆಂದನು.

೧೯. ಶ್ರೀ ಭಗವಂತನು ಹೇಳಿದನು.—ಎಲೈ ದೇವತೆಗಳಿರಾ! ನೀವು ಇಲ್ಲಿಗೆ ಏತಕ್ಕೋಸ್ಕರ ಬಂದಿರುವಿರಿ?

೨೦. ರುದ್ರನು ಹೇಳಿದನು.—ಅನಂತರ ಪಿತಾಮಹನಾದ ಬ್ರಹ್ಮನು ದೇವದೇವನಾದ ಜನಾರ್ದನನನ್ನು ಕುರಿತು ಇಂತೆಂದು ಹೇಳಿದನು.

೨೧–೨೨. ಬ್ರಹ್ಮನು ಹೇಳಿದನು. ದೇವದೇವನಾದ ವಿಷ್ಣುವೆ! ಪೃಥಿವಿಯು ಭಾರದಿಂದ ತೊಂದರೆಪಡುತ್ತಿರುವಳು. ಲೋಕದಲ್ಲಿ ಅನೇಕಜನ ರಾಕ್ಷಸರು

ಜರಾಸಂಧಶ್ಚ ಕಂಸಶ್ಚ ಪ್ರಲಂಬೋ ಧೇನುಕಾದಯಃ ।
ದುರಾತ್ಮಾನಃ ಪ್ರಬಾಧಂತೇ ಸರ್ವಾನ್ ಲೋಕಾನ್ ಸನಾತನಾನ್ ।
ಭಾರಾವತರಣಂ ಕರ್ತುಂ ಪೃಥಿವ್ಯಾಃ ತ್ವಮಿಹಾರ್ಹಸಿ ॥ ೨೨ ॥

॥ ರುದ್ರ ಉವಾಚ ॥
ಏವಮುಕ್ತೋ ಹೃಷೀಕೇಶೋ ಬ್ರಹ್ಮಣಾ ಪರಮೇಷ್ಠಿನಾ ।
ಪ್ರಾಹ ಗಂಭೀರಯಾ ವಾಚಾ ಜಗತಾಂ ಪತಿರವ್ಯಯಃ ॥ ೨೩ ॥

॥ ಶ್ರೀ ಭಗವಾನುವಾಚ ॥
ಅವತೀರ್ಯ ನೃಲೋಕೇಸ್ಮಿನ್ ಯದೂನಾಮನ್ವಯೇ ಸುರಾಃ ।
ಅವನೀಭಾರಮವ್ಯಗ್ರಮಪಾಸ್ಯಾಮಿ ಮಹಾಬಲಾಃ ॥ ೨೪ ॥

॥ ರುದ್ರ ಉವಾಚ ॥
ಏವಮುಕ್ತಾಃ ಪುರಾಸ್ಸರ್ವೇ ನಮಸ್ಕೃತ್ವಾ ಜನಾರ್ದನಂ ।
ಸ್ವಾನ್ ಸ್ವಾನ್ ಲೋಕಾನ್ ಸಮಾಸಾದ್ಯ ಪರೇಶಮನ್ವಚಿಂತಯನ್ ।
ತತೋ ಭಗವತೀಂ ಮಾಯಾಂ ಪರಮೇಶಃ ಸಮಬ್ರವೀತ್ ॥ ೨೫ ॥

---

ಹುಟ್ಟಿರುವರು. ಅವರು ಬಹುಶೂರರಾಗಿದ್ದಾರೆ. ಜರಾಸಂಧ, ಕಂಸ, ಪ್ರಲಂಬ, ಧೇನುಕ ಮುಂತಾದ ದುರಾತ್ಮರು ಎಲ್ಲಾ ಲೋಕವನ್ನೂ ತೊಂದರೆ ಪಡಿಸುತ್ತಿರುವರು. ಆದ್ದರಿಂದ ಈ ಭೂಮಿಯ ಭಾರವನ್ನು ಇಳಿಸಲು ನೀನೇ ಶಕ್ತನಾಗಿದ್ದೀಯೆ.

೨೩. ರುದ್ರನು ಹೇಳಿದನು.—ಹೃಷೀಕೇಶನಾದ ವಿಷ್ಣುವಿಗೆ ಬ್ರಹ್ಮನು ಇಂತೆಂದು ಹೇಳಲು ಆ ಅವ್ಯಯನೂ ಜಗತ್ಪತಿಯೂ ಆದ ವಿಷ್ಣುವು ಗಂಭೀರ ವಾಗಿ ಇಂತೆಂದನು.

೨೪. ಶ್ರೀ ಭಗವಂತನು ಹೇಳಿದನು—ಎಲೈ ದೇವತೆಗಳಿರ! ಈ ಮನುಷ್ಯ ಲೋಕದಲ್ಲಿ ಯದುವಿನ ವಂಶದಲ್ಲಿ ಹುಟ್ಟಿ ಈ ಭೂಮಿಯ ಭಾರವನ್ನು ಪೂರ್ತಿ ಯಾಗಿ ಪರಿಹರಿಸುತ್ತೇನೆ.

೨೫. ರುದ್ರನು ಹೇಳಿದನು.—ದೇವತೆಗಳಿಗೆ ಹೀಗೆಂದು ಹೇಳಲು ಅವ ರೆಲ್ಲರೂ ಜನಾರ್ದನನಿಗೆ ನಮಸ್ಕರಿಸಿ ಆ ಸ್ವಾಮಿಯನ್ನೇ ಚಿಂತಿಸುತ್ತ ತಮ್ಮ ತಮ್ಮ

॥ ಶ್ರೀ ಭಗವಾನುವಾಚ ॥

ಹಿರಣ್ಯಾಕ್ಷಸ್ಯ ಷಟ್ ಪುತ್ರಾನ್ ಸಮಾನೀಯ ಗಾವನೀತಲಾತ್ ।
ವಸುದೇವಸ್ಯ ಪತ್ನ್ಯಾಂ ತು ದೇವಕ್ಯಾಂ ಸನ್ನಿವೇಶಯ ॥ ೨೬ ॥

ಅನಂತಾಂಶಃ ಸಪ್ತಮೋತ್ರ ಸಂಪ್ರಕೃಷ್ಯ ಚ ಮಾ ಚಿರಂ ।
ತಸ್ಯಾಃ ಸಪತ್ನ್ಯಾಂ ರೋಹಿಣ್ಯಾಂ ದಧಸ್ವ ಶುಭದರ್ಶನೇ ॥ ೨೭ ॥

ತತೋಽಷ್ಟಮೋ ಮಮಾಂಶಸ್ತು ದೇವಕ್ಯಾಂ ಸಂಭವಿಷ್ಯತಿ ।
ನಂದಗೋಪಸ್ಯ ಪತ್ನ್ಯಾಂ ತು ಯಶೋದಾಯಾಂ ಸನಾತನೀ ॥ ೨೮ ॥

ತ್ವಂ ಹಿ ಭೂತ್ವಾ ಮಹಾನಿದ್ರಾ ವಿಂಧ್ಯಂ ಗತ್ವಾ ಮಹಾಬಲಾ ।
ತತ್ರ ಸಂಪೂಜ್ಯಮಾನಾ ಹಿ ದೇವೈರಿಂದ್ರಪುರೋಗಮೈಃ ॥ ೨೯ ॥

ಜಹಿ ದೈತ್ಯಾನ್ ಮಹಾವೀರ್ಯಾನ್ ಶುಂಭಾಸುರಪುರೋಗಮಾನ್ ॥ ೩೦ ॥

---

ಲೋಕಗಳಿಗೆ ಹೊರಟುಹೋದರು. ಆಗ ವಿಷ್ಣುವು ಭಗವತಿಯಾದ ಮಾಯೆಯನ್ನು ಕುರಿತು ಇಂತೆಂದು ಹೇಳಿದನು.

೨೬. ಶ್ರೀ ಭಗವಂತನು ಹೇಳಿದನು.—ಎಲೈ ಮಾಯೆಯೆ! ಹಿರಣ್ಯಾಕ್ಷನ ಆರು ಜನ ಮಕ್ಕಳನ್ನು ತಂದು ಭೂಲೋಕದಲ್ಲಿ ವಸುದೇವನ ಹೆಂಡತಿಯಾದ ದೇವಕಿಯಲ್ಲಿ ಇರಿಸು.

೨೭. ಏಳನೆಯವನಾದ ಅನಂತನ ಅಂಶವುಳ್ಳವನನ್ನೂ ಆ ದೇವಕಿಯ ಸಪತಿಯಾದ ರೋಹಿಣಿಯಲ್ಲಿರಿಸು.

೨೮–೩೦. ಅನಂತರ ಎಂಟನೆಯದಾದ ನನ್ನ ಅಂಶವು ದೇವಕಿಯಲ್ಲಿ ಹುಟ್ಟುತ್ತದೆ. ನಂದಗೋಪನ ಹೆಂಡತಿಯಾದ ಯಶೋದೆಯಲ್ಲಿ ಸನಾತನಿಯೂ ಮಹಾನಿದ್ರೆಯೂ ಆದ ನೀನು ಹುಟ್ಟಿ ವಿಂಧ್ಯಪರ್ವತದಲ್ಲಿ ನಿಂತು ಪೂಜಿಸಿಕೊಳ್ಳುತ್ತ ಶುಂಭಾಸುರನೇ ಮುಂತಾದ ರಾಕ್ಷಸರೆಲ್ಲರನ್ನೂ ಕೊಲ್ಲುವವಳಾಗು.

## ॥ ರುದ್ರ ಉವಾಚ ॥

ತಥೇತ್ಯುಕ್ತ್ವಾ ಮಹಾಭಾಗಾ ಹಿರಣ್ಯಾಕ್ಷಸುತಾಂಸ್ತದಾ ।
ಪರ್ಯಾಯೇಣೈವ ದೇವಕ್ಯಾಂ ಷಡ್ಗರ್ಭಾನ್ ಸನ್ನ್ಯವೇಶಯತ್ ॥ ೩೧ ॥

ತಾನ್ ಜಘಾನ ತದಾ ಕಂಸೋ ಜಾತಮಾತ್ರಾನ್ ಮಹಾಬಲಃ ।
ತತಸ್ತು ಸಪ್ತಮೋ ಗರ್ಭೋ ಹ್ಯನಂತಾಂಶೇನ ಚೋದಿತಃ ॥ ೩೨ ॥

ವರ್ಧಮಾನಂ ತು ಗರ್ಭಂ ತಂ ರೋಹಿಣ್ಯಾಂ ಸಮುಪಾನಯತ್ ।
ಗರ್ಭಸಂಕರ್ಷಣಾತ್ತಸ್ಯಾಂ ಜಾತಃ ಸಂಕರ್ಷಣೋಽವ್ಯಯಃ ॥ ೩೩ ॥

ಕೃಷ್ಣಾಷ್ಟಮ್ಯಾಂ ತು ರೋಹಿಣ್ಯಾಂ ಪ್ರೌಷ್ಠಪದ್ಯಾಂ ಶುಭೋದಯೇ ।
ರೋಹಿಣೀ ಜನಯಾಮಾಸ ಪುತ್ರಂ ಸಂಕರ್ಷಣಂ ಪ್ರಭುಂ ॥ ೩೪ ॥

---

೩೧. ರುದ್ರನು ಹೇಳಿದನು—ಆಕೆಯು ಸ್ವಾಮಿಯ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಹೇಳಿ ಹಿರಣ್ಯಾಕ್ಷನ ಆರುಜನ ಮಕ್ಕಳನ್ನೂ ಒಬ್ಬರಾಗುತ್ತಲೂ ಒಬ್ಬರನ್ನೂ ಆ ದೇವಕಿಯ ಗರ್ಭದಲ್ಲಿಟ್ಟಳು.

೩೨. ಮಹಾ ಬಲಿಷ್ಠನಾದ ಕಂಸನು ಆ ಗರ್ಭಗಳನ್ನು ಹುಟ್ಟಿದ ಕೂಡಲೇ ನಾಶಮಾಡಿದನು. ಅನಂತರ ಏಳನೆಯದಾದ ಅನಂತಾಂಶದ ಗರ್ಭವು ಆತನ ಅಪ್ಪಣೆಯ ಮೇರೆಗೆ ಆ ಗರ್ಭದಲ್ಲಿಡಲ್ಪಟ್ಟಿತು.

೩೩. ಈ ಏಳನೆಯ ಗರ್ಭವು ದೇವಕಿಯಲ್ಲಿ ಬೆಳೆಯುತ್ತಿರುವಂತೆಯೇ ಅದನ್ನು ಗರ್ಭಪಾತವಾಗುವಂತೆ ಮಾಡಿ ಎಳೆದು ತಂದು ರೋಹಿಣಿಯಲ್ಲಿಟ್ಟಳು. ಅದನ್ನು ಸಂಕರ್ಷಣ (ಎಳೆಯುವುದು) ಮಾಡಿದುದರಿಂದ ಸಂಕರ್ಷಣನೆಂದು ಆತನಿಗೆ ಹೆಸರು ಬಂದಿತು.

೩೪. ಭಾದ್ರಪದ ಮಾಸದ ಕೃಷ್ಣಾಷ್ಟಮಿಯ ದಿನ ಒಳ್ಳೆಯ ಲಗ್ನದಲ್ಲಿ ಗ್ರಹಗಳು ಚೆನ್ನಾಗಿರುವಾಗ ರೋಹಿಣಿಯು ಸಂಕರ್ಷಣನನ್ನು ಹೆತ್ತಳು.

ತತಸ್ತು ದೇವಕೀಗರ್ಭಮಾಪೇದೇ ಭಗವಾನ್ ಹರಿಃ ।
ಆಪನ್ನಗರ್ಭಾಂ ತಾಂ ದೃಷ್ಟ್ವಾ ಕಂಸೋ ಭಯನಿಪೀಡಿತಃ ॥ ೩೫ ॥

ತತಃ ಸುರಗಣಾಸ್ಸರ್ವೇ ಹರ್ಷನಿರ್ಭರಮಾನಸಾಃ ।
ತುಷ್ಟುವುರ್ದೇವಕೀಂ ತತ್ರ ವಿಮಾನಸ್ಥಾ ನಭಸ್ಥಳೇ ॥ ೩೬ ॥

ತತಸ್ತು ದಶಮೇ ಮಾಸಿ ಕೃಷ್ಣೇ ನಭಸಿ ಪಾರ್ವತಿ ।
ಅಷ್ಟಮ್ಯಾಮರ್ಧರಾತ್ರೇ ಚ ತಸ್ಯಾಂ ಜಾತೋ ಜನಾರ್ದನಃ ॥ ೩೭ ॥

ಇಂದೀವರದಳಶ್ಯಾಮಃ ಪದ್ಮಪತ್ರಾಯತೇಕ್ಷಣಃ ।
ಚತುರ್ಭುಜಃ ಸುಂದರಾಂಗೋ ದಿವ್ಯಾಭರಣಭೂಷಿತಃ ॥ ೩೮ ॥

ಶ್ರೀವತ್ಸಕೌಸ್ತುಭೋರಸ್ಕೋ ವನಮಾಲಾವಿಭೂಷಿತಃ ।
ವಸುದೇವಸ್ಯ ಜಾತೋಽಸೌ ವಾಸುದೇವಸ್ಸನಾತನಃ ॥ ೩೯ ॥

---

೩೫. ಅನಂತರ ಹರಿಯು ಎಂಟನೆಯದಾದ ದೇವಕಿಯ ಗರ್ಭದಲ್ಲಿ ಆವಿರ್ಭವಿಸಿದನು. ಆಕೆಯು ಆ ಗರ್ಭವನ್ನು ಧರಿಸಲು ಅದನ್ನು ತಿಳಿದು ಕಂಸನಿಗೆ ಬಹು ಭಯವಾಯಿತು.

೩೬. ದೇವತೆಗಳೆಲ್ಲರೂ ಹರ್ಷದಿಂದ ಕೂಡಿದವರಾಗಿ ವಿಮಾನದಲ್ಲಿದ್ದುಕೊಂಡು ಆ ದೇವಕಿಯನ್ನು ಸ್ತುತಿಸಿದರು.

೩೭. ಅನಂತರ ಆ ದೇವಕಿಗೆ ಒಂಬತ್ತು ತಿಂಗಳು ತುಂಬಲು ಹತ್ತನೆಯ ತಿಂಗಳಲ್ಲಿ ಶ್ರಾವಣಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿವಸ ಅರ್ಧರಾತ್ರಿಯಲ್ಲಿ ಆ ದೇವಕಿಯಲ್ಲಿ ಜನಾರ್ದನನು ಹುಟ್ಟಿದನು.

೩೮-೩೯. ಅವನಿಗೆ ಕನ್ನೆಯದೆಲೆಯಂತೆ ಬಣ್ಣವಿದ್ದಿತು. ಪದ್ಮದ ಎಸಳಿನಂತೆ ಕಣ್ಣುಗಳಿದ್ದುವು. ನಾಲ್ಕು ತೋಳುಗಳಿದ್ದುವು. ಸುಂದರನಾಗಿದ್ದನು. ದಿವ್ಯವಾದ ಆಭರಣಗಳನ್ನು ಧರಿಸಿದ್ದನು. ಶ್ರೀವತ್ಸವೂ ಕೌಸ್ತುಭಮಣಿಯೂ ಎಲೆಯಲ್ಲಿದ್ದು, ವನಮಾಲೆಯೆಂಬ ದೊಡ್ಡಮಾಲೆಯನ್ನು ಹಾಕಿಕೊಂಡಿದ್ದನು. ವಸುದೇವನಿಗೆ ಈತನು ಹುಟ್ಟಿದುದರಿಂದ ವಾಸುದೇವನೆಂದು ಹೆಸರುಳ್ಳವನಾದನು.

ತಂ ದೃಷ್ಟ್ವಾ ಜಗತಾಂ ನಾಥಂ ಕೃಷ್ಣಮಾನಕದುಂದುಭಿಃ ।
ಉವಾಚ ಪ್ರಾಂಜಲಿರ್ಭೂತ್ವಾ ನಮಸ್ಕೃತ್ಯ ಜಗನ್ಮಯಂ ॥ ೪೦ ॥

॥ ವಸುದೇವ ಉವಾಚ ॥

ಜಾತೋಽಸಿ ಮೇ ಜಗನ್ನಾಥ ಭಕ್ತಕಲ್ಪತರೋ ಪ್ರಭೋ ।
ತ್ವಮೇವ ಸರ್ವದೇವಾನಾಮನಾದಿಃ ಪುರುಷೋತ್ತಮಃ । ॥ ೪೧ ॥

ತ್ವಮಚಿಂತ್ಯೋ ಮಹದ್ಭೂತೋ ಯೋಗಿಧ್ಯೇಯಸ್ಸನಾತನಃ ।
ಮಮ ಪುತ್ರತ್ವಮಾಪನ್ನೋ ಧರಣ್ಯಾಂ ಧರಣೀಧರಃ ॥ ೪೨ ॥

ದೃಷ್ಟ್ವೈತದದ್ಭುತಂ ರೂಪಮೈಶ್ವರಂ ಪುರುಷೋತ್ತಮ ।
ದಾನವಾಃ ಪಾಪಕರ್ಮಾಣೋ ನ ಸಹಂತೇ ಮಹೌಜಸಃ ॥ ೪೩ ॥

॥ ರುದ್ರ ಉವಾಚ ॥

ಇತ್ಯರ್ಥಿತಃ ಸ್ತುತಸ್ತೇನ ಪದ್ಮನಾಭಃ ಸನಾತನಃ ।
ಉಪಸಂಹೃತವಾನ್ ರೂಪಂ ಚತುರ್ಭುಜಸಮನ್ವಿತಂ ॥ ೪೪ ॥

---

೪೦. ಆ ಜಗನ್ನಾಥನಾದ ಸ್ವಾಮಿಯು ತನ್ನ ಗರ್ಭದಲ್ಲಿ ಹುಟ್ಟಲು ಆ ನಕದುಂದುಭಿ ಎಂಬ ಹೆಸರುಳ್ಳ ವಸುದೇವನು ಕೈಮುಗಿದುಕೊಂಡು ಆ ಸ್ವಾಮಿಗೆ ನಮಸ್ಕರಿಸಿ ಇಂತೆಂದನು.

೪೧-೪೨. ವಸುದೇವನು ಹೇಳಿದನು.—ಎಲೈ ಭಕ್ತವತ್ಸಲನಾದ ಜಗನ್ನಾಥನೆ! ಭಕ್ತರ ಕಲ್ಪತರುವೆ! ನನ್ನಲ್ಲಿ ನೀನು ಈಗ ಹುಟ್ಟಿದ್ದೀಯೆ. ನೀನು ಎಲ್ಲಾ ದೇವರಿಗೂ ಆದಿಭೂತನು. ಪುರುಷೋತ್ತಮನು. ನೀನು ಇಂತಹವನೆಂದು ಯೋಚಿಸುವುದಕ್ಕೆ ಕೂಡ ಆಗುವುದಿಲ್ಲ. ಯೋಗಿಗಳಿಂದ ಧ್ಯಾನಮಾಡಲು ಅರ್ಹನಾಗಿದ್ದೀಯೆ. ಸನಾತನನು. ಇಂತಹ ನೀನು ನನಗೆ ಮಗನಾಗಿ ಹುಟ್ಟಿದ್ದೀಯೆ.

೪೩. ಈಶ್ವರನಾದ ನಿನ್ನ ಈ ಅದ್ಭುತರೂಪವನ್ನು ನೋಡಿ ಪಾಪಿಗಳೂ ಮಹಾ ಬಲಿಷ್ಠರೂ ಆದ ದಾನವರು ಸಹಿಸಲಾರರು.

೪೪-೫೩. ರುದ್ರನು ಹೇಳಿದನು—ಈ ರೀತಿಯಾಗಿ ಆ ವಸುದೇವನು ಸ್ತುತಿಸಿ ಕೇಳಿಕೊಳ್ಳಲು ಆ ಸ್ವಾಮಿಯು ನಾಲ್ಕು ತೋಳುಗಳುಳ್ಳ ತನ್ನ ಆ ರೂಪವನ್ನು

ಮಾನುಷೇಣೈವ ಭಾವೇನ ದ್ವಿಭುಜೇನ ವ್ಯರೋಚತ ।
ಯೇ ಚಾಂಗರಕ್ಷಕಾಸ್ಸರ್ವೇ ದಾನವಾಸ್ತತ್ರ ಸಂಸ್ಥಿತಾಃ ॥ ೪೫ ॥

ತೇ ಚಾಪಿ ಮಾಯಯಾ ತಸ್ಯ ಮೋಹಿತಾಸ್ತಮಸಾವೃತಾಃ ।
ಏತಸ್ಮಿನ್ನಂತರೇ ದೇವಮಾದಾಯಾನಕದುಂದುಭಿಃ ॥ ೪೬ ॥

ಪ್ರಯಯೌ ನಗರಾತ್ತೂರ್ಣಂ ಸರ್ವದೇವೈರಭಿಷ್ಟುತಃ ।
ಪಯೋಧರೇ ವರ್ಷಮಾಣೇ ನಾಗರಾಜೋ ಮಹಾಬಲಃ ॥ ೪೭ ॥

ಫಣಾಸಹಸ್ರೇಣಾಚ್ಛಾದ್ಯ ಭಕ್ತ್ಯಾ ದೇವಂ ಸಮನ್ವಗಾತ್ ।
ತೇ ಗೋಪುರಕಪಾಟೇ ತು ತತ್ಪಾದಸ್ಪರ್ಶನಾತ್ತದಾ ॥ ೪೮ ॥

ಭಿದ್ಯಮಾನೇ ಸುವಿವೃತೇ ತತ್ರಸ್ಥಾಶ್ಚ ವಿಮೋಹಿತಾಃ ।
ಸ್ರೋತಸ್ವಿನೀ ಸುಪೂರ್ಣಾ ಯಾ ಯಮುನಾಪಿ ಮಹಾತ್ಮನಃ ॥ ೪೯ ॥

---

ಮರೆಮಾಡಿಕೊಂಡನು. ಮತ್ತು ಎರಡು ಭುಜಗಳನ್ನು ಹೊಂದಿ ಮನುಷ್ಯರೂಪ ದಿಂದ ಪ್ರಕಾಶಿಸಿದನು. ಅಲ್ಲಿ ಕಾಯ್ದುಕೊಂಡಿದ್ದ ಅಂಗರಕ್ಷಕರಾದ ದಾನವರೂ ಕೂಡ ಆ ಸ್ವಾಮಿಯ ಮಾಯೆಯಿಂದ ಕೂಡಿಕೊಂಡು ಕಣ್ಣುಕಾಣದವರಾದರು. ಈ ಮಧ್ಯದಲ್ಲಿ ಆನಕ ದುಂದುಭಿಯು ಆ ಮಗುವನ್ನು ಎತ್ತಿಕೊಂಡು ಆ ಪಟ್ಟಣ ದಿಂದ ಹೊರಕ್ಕೆ ಹೊರಟನು. ಆಗ ದೇವತೆಗಳು ಹೊಗಳುತ್ತಿದ್ದರು. ಆಗ ಮಳೆಯು ಹುಯ್ಯುತ್ತಿರಲು ಮಹಾ ಬಲಿಷ್ಠನಾದ ಆದಿಶೇಷನು ತನ್ನ ಸಾವಿರ ಹೆಡೆಗಳಿಂದ ಮೇಲುಭಾಗದಲ್ಲಿ ಮರೆಮಾಡಿಕೊಂಡು ಭಕ್ತಿಯಿಂದ ಆ ದೇವನನ್ನು ಅನುಸರಿಸಿಕೊಂಡು ಹೋದನು. ಆಗ ಆ ಪಟ್ಟಣದ ಬಾಗಿಲುಗಳು ಇವನ ಕಾಲುಗಳು ತಗುಲಿದಒಡನೆಯೇ ಒಡೆದುಹೋಗಿ ತೆರೆದುಕೊಂಡವು. ಅಲ್ಲಿರುವವ ರೆಲ್ಲರೂ ಮಾಯೆಯಿಂದ ಮೋಹಿತರಾದರು. ಆ ದಾರಿಯಲ್ಲಿದ್ದ ಯಮುನೆಯೂ ಕೂಡ ಪೂರ್ಣ ಪ್ರವಾಹದಿಂದ ಹರಿಯುತ್ತಿದ್ದರೂ ಕೂಡ ಈ ವಸುದೇವನು ನೀರಿಗೆ ಇಳಿದೊಡನೆಯೇ ಅದರ ನೀರು ಅವನ ಮಂಡಿಯುದ್ದವಾಯಿತು.

ಪ್ರವೇಶಾಜ್ಜಾನುಮಾತ್ರಂ ತು ಜಲಂ ತತ್ರಾಭವತ್ತದಾ ।
ಉತ್ತೀರ್ಯ ಯಮುನಾಂ ಸೋಥ ವ್ರಜಂ ತತ್ತೀರಸಂಸ್ಥಿತಂ　　|| ೫೦ ||

ಸಂಸ್ತೂಯಮಾನಸ್ತ್ರಿದಶೈಃ ಪ್ರವಿವೇಶ ಯದೂತ್ತಮಃ ।
ತತ್ರ ನಂದಸ್ಯ ಪತ್ನೀ ಸಾ ಪ್ರಸೂತಾ ಗೋವ್ರಜೇ ಶುಭೇ　　|| ೫೧ ||

ವಿಮೋಹಿತಾ ಮಾಯಯೈವ ಸುಷುಪ್ತಾ ತಮಸಾವೃತಾ ।
ತಸ್ಯಾಸ್ತು ಶಯನೇ ದೇವಂ ವಿನಿಕ್ಷಿಪ್ಯ ಸ ಯಾದವಃ　　|| ೫೨ ||

ತಾಂ ಕನ್ಯಾಂ ಸಮುಪಾದಾಯ ಪ್ರಯಯೌ ಮಥುರಾಂ ಪುನಃ ।
ಪತ್ನ್ಯೈ ದತ್ವಾಥ ತಾಂ ಬಾಲಾಮುವಾಸ ಸುಸಮಾಹಿತಃ　　|| ೫೩ ||

ರುರೋದ ಬಾಲಭಾವತ್ವಾತ್ಸಾ ದೇವಕೀಶಯನಂ ಗತಾ ।
ಅಥ ಬಾಲಧ್ವನಿಂ ಶ್ರುತ್ವಾ ತದ್ಗೃಹಸ್ಯಾಂಗರಕ್ಷಕಾಃ　　|| ೫೪ ||

---

ಆ ವಸುದೇವನು ಯಮುನೆಯನ್ನು ದಾಟಿ ಆಚೆಯ ದಡದಲ್ಲಿರುವ ಹಳ್ಳಿಗೆ ಹೋದನು. ಆಗ ದೇವತೆಗಳೆಲ್ಲರೂ ಸ್ತುತಿಸಿದರು. ಆ ಹಳ್ಳಿಯಲ್ಲಿ ನಂದ ಪತ್ನಿಯು ಹೆಣ್ಣುಮಗುವನ್ನು ಹೆತ್ತಿದ್ದಳು. ಆಗ ಅವಳೂ ಅಲ್ಲಿರುವವರೂ ಮಾಯೆಯಿಂದ ಮೋಹಿತರಾಗಿ ಕಣ್ಣುಕಾಣದವರಾಗಿದ್ದರು ಆಕೆಯ ಹಾಸಿಗೆ ಯಲ್ಲಿ ಈ ಮಗುವಾದ ಸ್ವಾಮಿಯನ್ನಿಟ್ಟು ಆ ಹಾಸಿಗೆಯಲ್ಲಿ ಮಲಗಿದ್ದ ಆಕೆಯ ಹೆಣ್ಣುಮಗುವನ್ನು ತೆಗೆದುಕೊಂಡು ಮಥುರೆಗೆ ಹಿಂದಿರುಗಿ ಬಂದನು. ಆ ಮಗು ವನ್ನು ಹೆಂಡತಿಗೆ ಕೊಟ್ಟು ತಾನು ಸುಖವಾಗಿದ್ದನು.

೫೪-೫೬. ದೇವಕಿಯ ಹಾಸಿಗೆಯಲ್ಲಿ ಮಲಗಿದ್ದ ಆ ಮಗುವು ತನ್ನ ಸ್ವಭಾವದಿಂದ ಅಳತೊಡಗಿತು. ಆಗ ಮಗುವಿನ ಅಳುವನ್ನು ಕೇಳಿದ ಆ ಮನೆಯ ಕಾವಲುಗಾರರು ದೇವಕಿಯು ಹೆತ್ತಿರುವ ವಿಷಯವನ್ನು ಕಂಸನಿಗೆ ತಿಳಿಸಿದರು. ಒಡನೆಯೇ ಕಂಸನು ಬಂದು ಆ ಮಗುವನ್ನು ಹಿಡಿದು ಕೊಂಡನು. ಅದನ್ನು ಕೊಲ್ಲುವ ಉದ್ದೇಶದಿಂದ ಕಲ್ಲುಬಂಡೆಯ ಮೇಲೆ

ಕಂಸಾಯಾವೇದಯಾಮಾಸುರ್ದೇವಕೀಪ್ರಸವಂ ಶುಭಂ ।
ಕಂಸಸ್ತೂರ್ಣಮುಪೇತ್ಯೈನಾಂ ಜಗ್ರಾಹ ಬಾಲಿಕಾಂ ತದಾ || ೫೫ ||

ಚಿಕ್ಷೇಪ ಚ ಶಿಲಾಪೃಷ್ಠೇ ಸಾಪಿ ತೂರ್ಣಂ ವಿಯತ್‌ಸ್ಥಿತಾ ।
ತಸ್ಯೋತ್ತಮಾಂಗೇ ಸ್ವಪದಂ ದತ್ವಾ ತೂರ್ಣಂ ಖಮಾಸ್ಥಿತಾ ।
ಉವಾಚಾಷ್ಟಭುಜಾ ದೇವೀ ತದಾ ರಾಕ್ಷಸಪುಂಗವಂ || ೫೬ ||

|| ದೇವ್ಯುವಾಚ ||

ಕಿಂ ಮಯಾ ಕ್ಷಿಪ್ತಯಾ ಮಂದ ಜಾತೋ ಯಸ್ತ್ವಾಂ ವಧಿಷ್ಯತಿ ।
ಸರ್ವಸ್ಯ ಜಗತಃ ಸ್ರಷ್ಟಾ ಧರ್ತಾ ಹರ್ತಾ ಚ ಯಃ ಪ್ರಭುಃ ।
ಅಸ್ಮಿನ್ ಲೋಕೇ ಸಮುತ್ಪನ್ನಃ ಸ ತೇ ಪ್ರಾಣಾನ್ ಹರಿಷ್ಯತಿ || ೫೭ ||

|| ರುದ್ರ ಉವಾಚ ||

ಇತ್ಯುಕ್ತ್ವಾ ತೇಜಸಾ ದೇವೀ ಸಹಸಾ ಪೂರಯನ್ನಭಃ ।
ಜಗಾಮ ದೇವಗಂಧರ್ವೈಃ ಸ್ತೂಯಮಾನಾ ಹಿಮಾಚಲಂ || ೫೮ ||

---

ಹೊಡೆಯಲು ಆ ಮಗುವು ಆ ಏಟನ್ನು ತಪ್ಪಿಸಿಕೊಂಡು ಆಕಾಶಕ್ಕೆ ಹಾರಿತು. ಆಕಾಶಕ್ಕೆ ಹಾರುವಾಗ ಆ ಕಂಸನ ತಲೆಯ ಮೇಲೆ ಕಾಲನ್ನು ಇಟ್ಟುಕೊಂಡು ಹಾರಿತು. ಮತ್ತು ಎಂಟು ಭುಜಗಳನ್ನು ಹೊಂದಿ ಆಕಾಶದಲ್ಲಿ ನಿಂತುಕೊಂಡು ಆ ರಾಕ್ಷಸಶ್ರೇಷ್ಠನಾದ ಕಂಸನನ್ನು ಕುರಿತು ಇಂತೆಂದಿತು

೫೭ ದೇವಿಯು ಹೇಳಿದಳು.—ಎಲೈ ದಡ್ಡನೆ! ನನ್ನನ್ನು ಎಸೆದುದರಿಂದಾಗಲಿ ಕೊಂದುದರಿಂದಾಗಲಿ ಪ್ರಯೋಜನವೇನಿರುವುದು? ನಿನ್ನನ್ನು ಕೊಲ್ಲ ತಕ್ಕವನು ಹುಟ್ಟಿರುವನು. ಜಗತ್ತಿಗೆಲ್ಲಾ ಸೃಷ್ಟಿಕರ್ತನಾದ ಧರಣಕರ್ತನಾದ ನಾಶಕರ್ತನಾದ ಆ ಸ್ವಾಮಿಯು ಈ ಲೋಕದಲ್ಲಿ ಹುಟ್ಟಿರುವನು. ಅವನು ನಿನ್ನ ಪ್ರಾಣಗಳನ್ನು ನಾಶಮಾಡುವನು.

೫೮. ರುದ್ರನು ಹೇಳಿದನು.—ಆ ದೇವಿಯು ಹೀಗೆಂದು ಹೇಳುತ್ತ ತನ್ನ ಕಾಂತಿಯಿಂದ ಆ ಆಕಾಶವನ್ನೆಲ್ಲಾ ತುಂಬಿದಳು. ದೇವತೆಗಳೂ ಗಂಧರ್ವರೂ ಸ್ತೋತ್ರಮಾಡುತ್ತಿರಲು ಹಿಮಾಚಲಕ್ಕೆ ಹೊರಟುಹೋದಳು.

ಕಂಸಸ್ತದೋದ್ವಿಗ್ನಮನಾಃ ಸಮಾಹೂಯ ಸ್ವದಾನವಾನ್ ।
ಪ್ರಲಂಬಪ್ರಮುಖಾನ್ ವೀರಾನ್ ಉವಾಚ ಭಯಪೀಡಿತಃ ॥ ೪೯ ॥

॥ ಕಂಸ ಉವಾಚ ॥

ಅಸ್ಮದ್ಭಯಾತ್ಸುರಗಣಾ ಉಪೇತ್ಯ ಕ್ಷೀರಸಾಗರಂ ।
ಸಮಾಚಖ್ಯುರ್ಹರೇಸ್ಸರ್ವಂ ರಕ್ಷೋವಿಧ್ವನಂ ಪ್ರತಿ ॥ ೫೦ ॥

ತೇಷಾಂ ತು ವಚನಂ ಶ್ರುತ್ವಾ ಧರಣ್ಯಾಂ ಧರಣೀಧರಃ ।
ಮಾನುಷೇಣೈವ ಭಾವೇನ ಸಮುತ್ಪನ್ನೋ ಹಿ ಸೋಽವ್ಯಯಃ ॥ ೫೧ ॥

ತದದ್ಯ ಸರ್ವೇ ಯೂಯಂ ವೈ ರಾಕ್ಷಸಾಃ ಕಾಮರೂಪಿಣಃ ।
ಸಮುದ್ರಿಕ್ತಬಲಾನ್ ಬಾಲಾನ್ ಮಾರಯಧ್ವಮಶಂಕಿತಾಃ ॥ ೫೨ ॥

---

೪೯. ಆಗ ಕಂಸನು ಹೆದರಿದವನಾಗಿ ಪ್ರಲಂಬನೇ ಮುಂತಾದ ತನ್ನ ವೀರರಾದ ದಾನವರನ್ನು ಕರೆದು ಭಯದಿಂದ ಅವರನ್ನು ಕುರಿತು ಇಂತೆಂದು ಹೇಳಿದನು.

೫೦. ಕಂಸನು ಹೇಳಿದನು.—ನಮ್ಮ ಭಯದಿಂದ ದೇವತೆಗಳು ಕ್ಷೀರಸಮುದ್ರಕ್ಕೆ ಹೋಗಿ ಹರಿಗೆ ಈ ದಾನವರ ವಿಷಯವನ್ನು ಕುರಿತು ಎಲ್ಲವನ್ನೂ ಹೇಳಿರುವರು.

೫೧. ಅವರ ಮಾತನ್ನು ಕೇಳಿ ಆ ಧರಣೀಧರನಾದ ವಿಷ್ಣುವು ಭೂಮಿಯಲ್ಲಿ ಮನುಷ್ಯರೂಪದಿಂದ ಹುಟ್ಟಿರುವನು.

೫೨. ಆದ್ದರಿಂದ ರಾಕ್ಷಸರಾದ ನೀವೆಲ್ಲರೂ ನಿಮಗೆ ಅನುಕೂಲವಾದ ರೂಪಗಳನ್ನು ಧರಿಸಿಕೊಂಡು ಯಾವ ಮಕ್ಕಳಲ್ಲಿ ಗಟ್ಟಿತನವೂ ಅಲೌಕಿಕ ವಿಷಯವೂ ತೋರುವುದೋ ಅವೆಲ್ಲವನ್ನೂ ಯೋಚನೆಮಾಡದೆ ಕೊಂದುಹಾಕಿರಿ.

॥ ರುದ್ರ ಉವಾಚ ॥

ಇತ್ಯಾದಿಶ್ಯ ತತಃ ಕಂಸೋ ವಸುದೇವಂ ಚ ದೇವಕೀಂ ।
ಆಶ್ವಾಸ್ಯ ಮೋಚಯಿತ್ವಾಥ ಸ್ವವೇಶ್ಮಾನ್ತರ್ವಿವೇಶ ಹ ॥ ೬೩ ॥

ವಸುದೇವಸ್ತತೋ ಗತ್ವಾ ನಂದವ್ರಜಮನುತ್ತಮಂ ।
ತೇನ ಸಂಪೂಜಿತಸ್ತತ್ರ ನಿರೀಕ್ಷ್ಯ ತನಯಂ ಮುದಾ ॥ ೬೪ ॥

ಉವಾಚ ನಂದಪತ್ನೀಂ ತಾಂ ಯಶೋದಾಂ ಯದುನಂದನಃ । ॥ ೬೫ ॥

॥ ವಸುದೇವ ಉವಾಚ ॥

ಸುಭಗೇ ಮತ್ಸುತಮಿಮಂ ರೋಹಿಣೀ ಜಠರೋದ್ಭವಂ ।
ಸ್ವಪುತ್ರಮಿವ ರಕ್ಷಸ್ವ ಭಿಯಾ ಕಂಸಾದಿಹಾಗತಂ ॥ ೬೬ ॥

---

೬೩. ರುದ್ರನು ಹೇಳಿದನು:—ಅವರೆಲ್ಲರಿಗೂ ಕಂಸನು ಈ ರೀತಿಯಾಗಿ ಕಟ್ಟಪ್ಪಣೆಯನ್ನು ಮಾಡಿ ಆ ದೇವಕಿಯನ್ನೂ ವಸುದೇವನನ್ನೂ ಸಮಾಧಾನ ಪಡಿಸಿ ಬಂಧನದಿಂದ ಬಿಟ್ಟುಬಿಟ್ಟು ತನ್ನ ಮನೆಗೆ ಹೊರಟುಹೋದನು.

೬೪-೬೫. ಅನಂತರ ವಸುದೇವನು ನಂದನ ಆ ಹಳ್ಳಿಗೆ ಹೋದನು. ಅಲ್ಲಿ ನಂದನು ಅವನನ್ನು ಗೌರವದಿಂದ ಕಂಡನು. ವಸುದೇವನು ತನ್ನ ಮಗನನ್ನು ಸಂತೋಷದಿಂದ ನೋಡಿದನು. ಮತ್ತು ನಂದ ಪತ್ನಿಯಾದ ಯಶೋದೆಯನ್ನು ಕುರಿತು ಇಂತೆಂದು ಹೇಳಿದನು.

೬೬. ವಸುದೇವನು ಹೇಳಿದನು:— ಅಮ್ಮ! ರೋಹಿಣಿಯ ಹೊಟ್ಟೆಯಲ್ಲಿ ಹುಟ್ಟಿದ ನನ್ನ ಮಗನನ್ನು ಕಂಸನ ಭಯದಿಂದ ಇಲ್ಲಿಗೆ ತಂದಿಟ್ಟಿದ್ದೇನೆ. ಅವನನ್ನು ನಿನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನಂತೆ ಕಾಪಾಡು.

## ॥ ರುದ್ರ ಉವಾಚ ॥

ತಥೇತ್ಯಾಹ ತದಾ ತನ್ವೀ ನಂದಪತ್ನೀ ದೃಢವ್ರತಾ ।
ಲಬ್ಧ್ವೈವ ಪುತ್ರಯುಗಳಮುತ್ಪುಪೋಷ ಮುದಾನ್ವಿತಾ ॥ ೬೭ ॥

ನಿಕ್ಷಿಪ್ಯ ತನಯೌ ಗೇಹೇ ನಂದಗೋಪಸ್ಯ ಯಾದವಃ ।
ವಿಶ್ರಬ್ಧಃ ಪ್ರಯಯೌ ತೂರ್ಣಂ ಮಥುರಾಂ ಕಂಸಪಾಲಿತಾಂ ॥ ೬೮ ॥

ತತೋ ಗರ್ಗಶ್ಶುಭದಿನೇ ವಸುದೇವೇನ ನೋದಿತಃ ।
ನಂದಗೋಪವ್ರಜಂ ಗತ್ವಾ ತತ್ರಸ್ಥೈಃ ಪೂಜಿತೋ ದ್ವಿಜಃ ॥ ೬೯ ॥

ವಿಧಿನಾ ಜಾತಕಂ ಕರ್ಮ ಕೃತ್ವಾ ದೇವಸ್ಯ ಗೋಕುಲೇ ।
ನಾಮ ಚಾತ್ರಾಕರೋದ್ದಿವ್ಯಂ ಪುತ್ರಯೋರ್ವಾಸುದೇವಯೋಃ ॥ ೭೦ ॥

ಸಂಕರ್ಷಣೋ ರೌಹಿಣೇಯೋ ಬಲಭದ್ರೋ ಮಹಾಬಲಃ ।
ರಾಮ ಇತ್ಯಾದಿನಾಮಾನಿ ಪೂರ್ವಜಸ್ಯಾಕರೋದ್ದ್ವಿಜಃ ॥ ೭೧ ॥

---

೬೭. ರುದ್ರನು ಹೇಳಿದನು:—ನಂದನ ಹೆಂಡತಿಯಾದ ಆ ಯಶೋದೆಯು ಹಾಗೇ ಆಗಲೆಂದಳು. ಆ ಇಬ್ಬರು ಮಕ್ಕಳನ್ನೂ ಕೂಡ ಬಹು ಸಂತೋಷದಿಂದ ಕಾಪಾಡಿದಳು.

೬೮. ಆ ವಸುದೇವನು ಈ ರೀತಿಯಾಗಿ ಆ ಇಬ್ಬರು ಮಕ್ಕಳನ್ನೂ ನಂದ ಗೋಪನ ಮನೆಯಲ್ಲಿಟ್ಟು ನಿರಾತಂಕನಾಗಿ ಜಾಗ್ರತೆಯಾಗಿ ಕಂಸನು ಆಳುತ್ತಿರುವ ಮಥುರೆಗೆ ಹೊರಟುಹೋದನು.

೬೯–೭೦. ಅನಂತರ ಗರ್ಗಋಷಿಯು ವಸುದೇವನಿಂದ ವಿಜ್ಞಾಪಿಸಲ್ಪಟ್ಟವ ನಾಗಿ ಒಂದು ಶುಭದಿನದಲ್ಲಿ ಆನಂದಗೋಪನ ಮನೆಗೆ ಬಂದು ಅಲ್ಲಿಯವರಿಂದ ಗೌರವವನ್ನು ಹೊಂದಿ ಆ ವಸುದೇವನ ಇಬ್ಬರು ಮಕ್ಕಳಿಗೂ ಶಾಸ್ತ್ರದ ರೀತಿಯಿಂದ ಜಾತಕರ್ಮ ನಾಮಕರಣಗಳನ್ನು ಮಾಡಿದನು.

೭೧. ಅವರಲ್ಲಿ ಹಿರಿಯವನಿಗೆ ಸಂಕರ್ಷಣ, ರೌಹಿಣೇಯ, ಬಲಭದ್ರ ಮಹಾಬಲ, ರಾಮ ಇವೇ ಮುಂತಾದ ಹೆಸರುಗಳನ್ನಿಟ್ಟನು.

ಶ್ರೀಧರಃ ಶ್ರೀಕರಃ ಶ್ರೀಮಾನ್ ಕೃಷ್ಣೋಽನಂತೋ ಜಗತ್ಪತಿಃ |
ವಾಸುದೇವೋ ಹೃಷೀಕೇಶಃ ಇತ್ಯಾದ್ಯವರಜಸ್ಯ ಚ || ೭೨ ||

ರಾಮಕೃಷ್ಣಾವಿತಿ ಖ್ಯಾತಿಮಸ್ಮಿನ್ ಲೋಕೇ ಗಮಿಷ್ಯತಃ |
ಏವಮುಕ್ತ್ವಾ ದ್ವಿಜಶ್ರೇಷ್ಠಃ ಸಂಪೂಜ್ಯ ಪಿತೃದೇವತಾಃ || ೭೩ ||

ಸಂಪೂಜ್ಯಮಾನೋ ಗೋಪಾಲೈಃ ಪ್ರಯಯೌ ಮಥುರಾಂ ಪುನಃ ।
ಕಂಸೇನ ಪ್ರೇಷಿತಾ ರಾತ್ರೌ ಪೂತನಾ ಬಾಲಘಾತಿನೀ || ೭೪ ||

ವಿಷಲಿಪ್ತಂ ಸ್ತನಂ ಪ್ರಾದಾತ್ಕೃಷ್ಣಾಯಾಮಿತತೇಜಸೇ |
ಕೃಷ್ಣಸ್ತು ರಾಕ್ಷಸೀಂ ಜ್ಞಾತ್ವಾ ಪಪೌ ಗಾಢಂ ಸ್ತನಂ ಭೃಶಂ || ೭೫ ||

ಪ್ರಾಣೈಸ್ಸಹ ಮಹಾತೇಜಾ ರಾಕ್ಷಸ್ಯಾ ಯದುಪುಂಗವಃ |
ಸಾ ವಿಹ್ವಲಾಂಗೀ ಪ್ರಮದಾ ಸಂಧ್ವಸ್ತಸ್ನಾಯುಬಂಧನಾ || ೭೬ ||

---

೭೨. ಶ್ರೀಧರ, ಶ್ರೀಕರ, ಶ್ರೀಮಾನ್, ಕೃಷ್ಣ, ಅನಂತ, ಜಗತ್ಪತಿ, ವಾಸುದೇವ, ಹೃಷೀಕೇಶ, ಇವೇ ಮುಂದಾದ ಹೆಸರುಗಳನ್ನು ಕಿರಿಯ ಮಗನಿಗೆ ಇಟ್ಟನು.

೭೩–೭೫. ನೀವಿಬ್ಬರೂ ರಾಮಕೃಷ್ಣರೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಈ ಲೋಕದಲ್ಲಿ ಹೊಂದುತ್ತೀರಿ ಎಂಬದಾಗಿ ಆ ಗರ್ಗನು ಹೇಳಿ ಪಿತೃಗಳನ್ನೂ ದೇವತೆಗಳನ್ನೂ ಪೂಜಿಸಿ ತಾನೂ ಆ ಗೋಪಾಲರಿಂದ ಗೌರವವನ್ನು ಹೊಂದಿ ಮಥುರೆಗೆ ಹೊರಟುಬಂದನು. ಕಂಸನು ಪೂತನಿ ಎಂಬ ರಾಕ್ಷಸಿಯನ್ನು ರಾತ್ರಿಯಲ್ಲಿ ಕಳುಹಿಸಲು ಆಕೆಯು ಸ್ತನಗಳಿಗೆ ವಿಷವನ್ನು ಬಳಿದುಕೊಂಡು ಪರಮಾತ್ಮನಾದ ಕೃಷ್ಣನಿಗೆ ಎದೆಹಾಲನ್ನು ಕೊಡಲು ಬಂದಳು. ಕೃಷ್ಣನು ಈಕೆಯು ರಾಕ್ಷಸಿ ಎಂಬುದನ್ನು ತಿಳಿದು ಆ ಸ್ತನಗಳನ್ನು ಬಹು ರಭಸದಿಂದ ಕುಡಿದನು.

೭೬–೮೫. ಆ ಸ್ವಾಮಿಯಾದ ಶ್ರೀ ಕೃಷ್ಣನು ಪ್ರಾಣಗಳು ಹೋಗುವಂತೆ ಆ ಮೊಲೆಹಾಲನ್ನು ಕುಡಿಯಲು ಮೊದಲಿಟ್ಟನು. ಒಡನೆಯೇ ನರಗಳೆಲ್ಲವೂ

**ಪಪಾತ ವೇಪಮಾನಾ ಸಾ ಮಮಾರ ಚ ಮಹಾಸ್ವನಾ ।**
**ತಸ್ಯಾಃ ಶಬ್ದೇನ ಮಹತಾ ಪೂರಿತಂ ಚ ನಭಸ್ತಲಂ　　　　|| ೭೭ ||**

**ತ್ರಸ್ತಾಃ ಸರ್ವೇ ತತೋ ಗೋಪಾ ದೃಷ್ಟ್ವಾ ತಾಂ ಪತಿತಾಂ ಭುವಿ ।**
**ಕೃಷ್ಣಂ ಚ ಕ್ರೀಡಮಾನಂ ತಂ ರಾಕ್ಷಸ್ಯಾಶ್ಚ ಮಹೋರಸಿ　　　　|| ೭೮ ||**

**ಸಮುದ್ವಿಗ್ನಾ ತತಸ್ತೂರ್ಣಮಾದಾಯ ತನಯಂ ತದಾ ।**
**ರಕ್ಷೋಭಿಯಾ ತದಾ ತಸ್ಮಿನ್ ಗೋಪುರೀಷೇಣ ಮೂರ್ಧನಿ　　　　|| ೭೯ ||**

**ಸಮ್ಮಾರ್ಜಯಾಮಾಸ ತದಾ ಗೋವಾಲೇನ ತದಾನನಂ ।**
**ನಂದಗೋಪಃ ಸಮಭ್ಯೇತ್ಯ ಸುತಮಾದಾಯ ಭಾಮಿನಿ　　　　|| ೮೦ ||**

**ಭಗವನ್ನಾಮಭಿಸ್ತಸ್ಯ ಸರ್ವಾಂಗೇಷು ಪ್ರಮಾರ್ಜನಂ ।**
**ಕೃತ್ವಾ ತಾಂ ರಾಕ್ಷಸೀಂ ಭೀಮಾಂ ಬಹಿರ್ನಿನ್ಯಸ್ಯ ಗೋವ್ರಜಾತ್　　|| ೮೧ ||**

**ದದಾಹ ಗೋಪವೃಂದೈಶ್ಚ ತ್ರಾಸಿತೈಸ್ತತ್ರ ಗೋವ್ರಜೇ ।**
**ಕದಾಚಿಚ್ಛಕಟಸ್ಯಾಧಃ ಶಯಾನೋ ಭಗವಾನ್ ಹರಿಃ　　　　|| ೮೨ ||**

---

ಸಡಿಲವಾಗಿ ನಡುಗುತ್ತಾ ಕೆಳಗೆ ಬಿದ್ದು ಗಟ್ಟಿಯಾಗಿ ಕೂಗುತ್ತಾ ಆಕೆಯು ಸತ್ತು ಹೋದಳು. ಆಕೆಯ ಆ ಶಬ್ದದಿಂದ ಆಕಾಶವೆಲ್ಲವೂ ತುಂಬಿಹೋಯಿತು. ಇದನ್ನು ನೋಡಿ ಆ ಗೋಕುಲದ ಗೋಪರೆಲ್ಲರೂ ನೆಲದ ಮೇಲೆ ಬಿದ್ದರು. ಈ ರಾಕ್ಷಸಿಯನ್ನು ನೋಡಿ ಹೆದರಿಬಿಟ್ಟರು. ಆಗ ಅವರೆಲ್ಲರೂ ಆ ಕೃಷ್ಣನು ರಾಕ್ಷಸಿಯ ಎದೆಯ ಮೇಲೆ ಆಡುತ್ತಿರುವುದನ್ನು ನೋಡಿದರು. ಒಡನೆಯೇ ಹೆದರಿಕೊಂಡು ಶೀಘ್ರವಾಗಿ ಆ ಮಗುವನ್ನು ಎತ್ತಿಕೊಂಡರು. ರಾಕ್ಷಸನೆಂಬ ಹೆದರಿಕೆಯಿಂದ ಹಸುವಿನ ಸಗಣಿಯನ್ನು ತಂದು ಅವನ ತಲೆಯನ್ನು ಒರಸಿ ಗೋವಿನ ಬಾಲದಿಂದ ಅವನ ಮುಖವನ್ನು ಒರಸಿ ನಿವಾಳಿಸಿದಳು. ಒಡನೆಯೇ ನಂದಗೋಪನು ಬಂದು ಮಗುವನ್ನು ಎತ್ತಿಕೊಂಡು ಸ್ವಾಮಿಯ ನಾಮಗಳನ್ನು ಹೇಳುತ್ತ ಅದರ ಮೈಗೆಲ್ಲವೂ ನೀರನ್ನು ತೊಡೆದನು. ಅನಂತರ ಆ ಭಯಂಕರವಾದ ರಾಕ್ಷಸಿಯ ದೇಹವನ್ನು ಗೊಲ್ಲದೊಡ್ಡಿಯಿಂದ ಹೊರಗೆ ಗೋಪರೊಡನೆ ಸಾಗಿಸಿ ಸುಟ್ಟುಬಿಟ್ಟನು. ಒಂದುಸಾರಿ ಒಂದು ಬಂಡಿಯ ಕೆಳಗೆ ಹರಿಯು ಮಲಗಿರುತ್ತಾ ಕಾಲುಗಳನ್ನು

ಪ್ರಸಾರ್ಯ ಚರಣೌ ತತ್ರ ರುರೋದ ಮಧುಸೂದನಃ ।
ತಸ್ಯ ಪಾದಪ್ರಹಾರೇಣ ಶಕಟಂ ಪರಿವರ್ತಿತಂ ॥ ೮೩ ॥

ವಿಧ್ವಸ್ತಕುಂಭಭಾಂಡಂ ತದ್ವಿಪರೀತಂ ಪಪಾತ ವೈ ।
ತತೋ ಗೋಪ್ಯಶ್ಚ ಗೋಪಾಶ್ಚ ದೃಷ್ಟ್ವಾ ತಚ್ಛಕಟಂ ಮಹತ್ ॥ ೮೪ ॥

ವಿಸ್ಮಯಂ ಪರಮಂ ಜಗ್ಮುಃ ಕಿಮೇತದಿತಿ ಶಂಕಿತಾಃ ।
ಯಶೋದಾ ಚ ತದಾ ತೂರ್ಣಂ ಬಾಲಂ ಜಗ್ರಾಹ ವಿಸ್ಮಿತಾ ॥ ೮೫ ॥

ಅಲ್ಪೇನೈವ ಹಿ ಕಾಲೇನ ಬಾಲಕೌ ತೌ ಯದೂತ್ತಮೌ ।
ವರ್ಧಮಾನೌ ಯಶೋದಾಯಾಃ ಸ್ತನಪಾನೇನ ಪೋಷಿತೌ ॥ ೮೬ ॥

ಜಾನುಭ್ಯಾಮಥ ಹಸ್ತಾಭ್ಯಾಂ ರಮಮಾಣೌ ವಿಚೇರತುಃ ।
ಮಾಯಾವೀ ರಾಕ್ಷಸಃ ಕಶ್ಚಿತ್ತತ್ರ ಕುಕ್ಕುಟವೇಷಧೃಕ್ ॥ ೮೭ ॥

ಕೃಷ್ಣಂ ಹಂತುಂ ಸಮಾರಬ್ಧೋ ವಿಚಚಾರ ಮಹೀತಲೇ ।
ಜ್ಞಾತ್ವಾ ಕೃಷ್ಣಸ್ತು ತದ್ರಕ್ಷೋ ನಿಜಘಾನ ತಲೇನ ವೈ ॥ ೮೮ ॥

---

ನೀಡಿ ಒದ್ದಾಡುತ್ತಾ ಅತ್ತನು. ಅವನ ಆ ಕಾಲಿನ ಏಟಿನಿಂದ ಆ ಗಾಡಿಯು ತಲೆಕೆಳಗಾಗಿ ಅದರ ಮೇಲಿದ್ದ ಮಡಕೆ ಕುಡಿಕೆಗಳೆಲ್ಲವೂ ಒಡೆದುಹೋದುವು. ಆಗ ಗೋಪಿಯರೂ ಗೋಪರೂ ಇದೇನೆಂದು ನೋಡುತ್ತಾ ಬಹು ಆಶ್ಚರ್ಯಗೊಂಡರು. ಕೂಡಲೇ ಯಶೋದೆಯು ಓಡಿಬಂದು ಮಗುವಿನ ಮೇಲಿನ ಪ್ರೀತಿಯಿಂದ ಅದನ್ನು ಎತ್ತಿಕೊಂಡಳು.

೮೬–೮೮. ಆ ಯದುಕುಲದ ಬಾಲರು ಆ ಯಶೋದೆಯ ಹಾಲನ್ನು ಕುಡಿಯುತ್ತ ಬೆಳೆಯುತ್ತ ಬಂದು ಸ್ವಲ್ಪ ದಿನಗಳಲ್ಲಿಯೇ ಅಂಬೆಗಾಲಿಡುತ್ತ ಆಟವಾಡಲು ಮೊದಲುಮಾಡಿದರು. ಆಗ ಮಾಯಾವಿಯಾದ ಒಬ್ಬ ರಾಕ್ಷಸನು ಕೋಳಿಯ ರೂಪವನ್ನು ಹೊಂದಿ ಕೃಷ್ಣನನ್ನು ಕೊಲ್ಲಲು ಅಲ್ಲಲ್ಲಿ ಹೊಂಚುಕಾಯುತ್ತಿದ್ದನು. ಇದನ್ನು ಕೃಷ್ಣನು ತಿಳಿದು ಅಂಗೈ ಹೊಡೆತದಿಂದಲೇ ಅವನನ್ನು ಕೊಂದುಹಾಕಿದನು.

ರಾಕ್ಷಸೇನೈವ ರೂಪೇಣ ನಿಪಪಾತ ಮಮಾರ ಚ ।
ವಿಚಚಾರ ತತಃ ಸರ್ವಂ ಗೋವ್ರಜಂ ಮಧುಸೂದನಃ　　　　|| ೮೯ ||

ನವನೀತಂ ಜಹಾರಾಶು ಗೋಪೀನಾಂ ಚ ಗೃಹೇ ಗೃಹೇ ।
ತದಾ ಯಶೋದಾ ಕುಪಿತಾ ದಾಮ್ನಾ ಮಧ್ಯ ಉಲೂಖಲೇ　　　　|| ೯೦ ||

ನಿಬಧ್ಯ ಕೃಷ್ಣಂ ಪ್ರಯಯೌ ವಿಕ್ರೇತುಂ ಗೋರಸಾದಿಕಂ ।
ಕರ್ಷಮಾಣಃ ತತಃ ಕೃಷ್ಣೋ ದಾಮ್ನಾ ಬದ್ಧ ಉಲೂಖಲೇ　　　　|| ೯೧ ||

ಯಮಳಾರ್ಜುನಯೋರ್ಮಧ್ಯೇ ಜಗಾಮ ಧರಣೀಧರಃ ।
ಉಲೂಖಲೇನ ಗೋವಿಂದಃ ಪಾತಯಾಮಾಸ ತಾವುಭೌ　　　　|| ೯೨ ||

---

೮೯. ಅವನು ರಾಕ್ಷಸನ ಆಕಾರವನ್ನು ಹೊಂದಿ ಕೆಳಗೆ ಬಿದ್ದು ಸತ್ತನು. ಅನಂತರ ಓಡಿಯಾಡುವಂತಾಗಲು ಆ ಕೃಷ್ಣನು ಆ ಗೊಲ್ಲರ ದೊಡ್ಡಿಯಲ್ಲೆಲ್ಲಾ ಓಡಾಡಲು ಮೊದಲುಮಾಡಿದನು.

೯೦. ಅವನು ಆ ಗೊಲ್ಲರ ದೊಡ್ಡಿಯಲ್ಲಿರುವ ಗೋಪಿಯರ ಮನೆಯಲ್ಲೆಲ್ಲಾ ಬೆಣ್ಣೆಯನ್ನು ಕದಿಯುತ್ತಿದ್ದನು. ಅವರೆಲ್ಲರೂ ಬಂದು ಯಶೋದೆಗೆ ಚಾಡಿಯನ್ನು ಹೇಳಲು ಯಶೋದೆಯು ಕೃಷ್ಣನ ಸೊಂಟಕ್ಕೆ ಹಗ್ಗವನ್ನು ಕಟ್ಟಿ ಆ ಹಗ್ಗವನ್ನು ಒರಳಿನ ಕಲ್ಲಿಗೆ ಕಟ್ಟಿದಳು.

೯೧. ಹೀಗೆ ಆ ಯಶೋದೆಯು ಆ ಕೃಷ್ಣನನ್ನು ಒರಳಿಗೆ ಕಟ್ಟಿಹಾಕಿ ಮೊಸರನ್ನು ಮಾರಲು ಹೊರಟುಹೋದಳು. ಆ ಕೃಷ್ಣನು ಆ ಹಗ್ಗದೊಡನೆ ಒರಳು ಕಲ್ಲನ್ನು ಎಳೆಯುತ್ತಾ ಓಡಾಡುತ್ತಿದ್ದನು.

೯೨. ಆಗ ಆ ಕೃಷ್ಣನು ಆ ಕಲ್ಲನ್ನು ಎಳೆದುಕೊಂಡು ಜೊತೆಯಾಗಿ ಬೆಳೆದಿದ್ದ ಎರಡು ಮತ್ತಿ ಮರಗಳ ಮಧ್ಯದಲ್ಲಿ ಹೋದನು. ಆಗ ಆ ಕಲ್ಲು ಮರದ ಮಧ್ಯದಲ್ಲಿ ಬಾರದಿರಲು ಬಲವಾಗಿ ಎಳೆದನು. ಆಗ ಆ ಎರಡು ಮರಗಳೂ ಬುಡಸಹಿತವಾಗಿ ಕಿತ್ತು ಬಿದ್ದುಹೋದುವು.

ಭಗ್ನಸ್ಕಂಧೌ ನಿಪತಿತೌ ಸ್ವರೇಣ ಧರಣೀತಲೇ |
ತೇನ ಶಬ್ದೇನ ಮಹತಾಽಽಜಗ್ಮುಸ್ತತ್ರ ಮಹೌಜಸಃ || ೯೩ ||

ಗೋಪವೃದ್ಧಾಸ್ತತೋ ದೃಷ್ಟ್ವಾ ವಿಸ್ಮಯಂ ಪರಮಂ ಗತಾಃ |
ಯಶೋದಾಪಿ ಸಮುದ್ವಿಗ್ನಾ ವಿಮುಚ್ಯ ಧರಣೀಧರಂ || ೯೪ ||

ಸುವಿಸ್ಮಿತಾ ಸಮಾದಾಯ ಸ್ತನಂ ಪ್ರಾದಾನ್ಮಹಾತ್ಮನೇ |
ಯಸ್ಮಾನ್ನಿಬಧ್ಯಮಾನಸ್ತು ದಾಮ್ನಾ ಮಾತ್ರಾ ಜಗತ್ಪತಿಃ || ೯೫ ||

ತಸ್ಮಾನ್ಮಹದ್ಭಿಸ್ಸರ್ವೈಶ್ಚ ದಾಮೋದರ ಇತೀರಿತಃ |
ತೌ ತಂ ಕಿನ್ನರತಾಂ ಪ್ರಾಪ್ತೌ ವಿಮುಕ್ತೌ ಯಮಳಾರ್ಜುನೌ || ೯೬ ||

ಗೋಪವೃದ್ಧಾಸ್ತತಃ ಸರ್ವೇ ನಂದಗೋಪಪುರೋಗಮಾಃ |
ಮಹೋತ್ಪಾತಮಿಮಂ ಜ್ಞಾತ್ವಾ ಸ್ಥಾನಾಂತರಮುಪಾಯಯುಃ || ೯೭ ||

---

೯೩–೯೬. ಆ ಮರಗಳು ಬೀಳುವಾಗ ಬಹುವಾಗಿ ಶಬ್ದಮಾಡುತ್ತ ಭೂಮಿಯಮೇಲೆ ಬಿದ್ದುವು. ಆ ಗಟ್ಟಿಯಾದ ಶಬ್ದದಿಂದ ಹೆದರಿ ಅಲ್ಲಿನವರೆಲ್ಲರೂ ಬಂದರು ಅದರಲ್ಲಿ ವಯಸ್ಸಾದ ಗೋಪರು ಅದನ್ನು ನೋಡಿ ಬಹುವಾಗಿ ಆಶ್ಚರ್ಯ ಪಟ್ಟರು. ಅದನ್ನು ನೋಡಿದ ಯಶೋದೆಯು ಬಹುವಾಗಿ ಹೆದರಿದವಳಾಗಿ ಅವನಿಗೆ ಕಟ್ಟಿದ್ದ ಆ ಹಗ್ಗವನ್ನು ಬಿಚ್ಚಿ ಆಶ್ಚರ್ಯಪಡುತ್ತ ಆ ಪುಣ್ಯಾತ್ಮನಿಗೆ ಎದೆ ಹಾಲನ್ನು ಕೊಟ್ಟಳು. ತಾಯಿಯು ಹೊಟ್ಟೆಯ ಪ್ರದೇಶಕ್ಕೆ ಹಗ್ಗವನ್ನು ಹಾಕಿ ಕಟ್ಟಿದ್ದುದರಿಂದ ಆ ಜಗತ್ಪತಿಯನ್ನು ಮಹಾತ್ಮರು ದಾಮ ಹಗ್ಗವು ಉದರ ಹೊಟ್ಟೆಯಲ್ಲಿದ್ದುದರಿಂದ ದಾಮೋದರ ಎಂದು ಕರೆದರು. ಅನಂತರ ಆ ಮತ್ತಿ ಮರಗಳೆರಡೂ ಕಿನ್ನರರಾಗಿ ಹೋದುವು.

೯೭. ನಂದಗೋಪನೇ ಮೊದಲಾದ ಗೋಪರ ಯಜಮಾನರು ಈ ಅಪ ಶಕುನಗಳನ್ನು ನೋಡಿ ಬೇರೆಯ ಜಾಗಕ್ಕೆ ಹೊರಟುಹೋದರು.

ವೃಂದಾವನೇ ಮನೋರಮ್ಯೇ ಯಮುನಾಯಾಸ್ತಟೇ ಶುಭೇ ।
ನಿವಾಸಂ ಚಕ್ರಿರೇ ರಮ್ಯಂ ಗವಾಂ ಗೋಪೀಜನಸ್ಯ ಚ || ೯೮ ||

ತತ್ರ ತೌ ರಾಮಕೃಷ್ಣೌ ತು ವರ್ಧಮಾನೌ ಮಹಾಬಲೌ ।
ವತ್ಸಪಾಲಯುತೌ ವತ್ಸಾನ್ ಪಾಲಯಾಮಾಸತುಃ ಸದಾ || ೯೯ ||

ಗೋವತ್ಸಮಧ್ಯೇ ಕೃಷ್ಣಂ ಚ ಬಕೋ ನಾಮ ಮಹಾಸುರಃ ।
ಬಕರೂಪೇಣ ತಂ ಹಂತುಂ ಉದ್ಯುಕ್ತೋತ್ರ ಯದೂತ್ತಮಂ || ೧೦೦ ||

ತಂ ದೃಷ್ಟ್ವಾ ವಾಸುದೇವೋಽಪಿ ಲೋಷ್ಟಮುದ್ಯಮ್ಯ ಲೀಲಯಾ ।
ತಾಡಯಾಮಾಸ ಪಕ್ಷಾಂತೇ ಪಪಾತೋರ್ವ್ಯಾಂ ಮಹಾಸುರಃ || ೧೦೧ ||

ತತಃ ಕತಿಪಯಾಹಸ್ಸು ಗೋವತ್ಸಪಾಲಕಾ ವನೇ ।
ಛಾಯಾಯಾಂ ಯಜ್ಞವೃಕ್ಷಸ್ಯ ಪ್ರಸುಪ್ತಾ ಪಲ್ಲವೇ ತದಾ || ೧೦೨ ||

---

೯೮. ಅವರು ಹೊರಟು ಯಮುನಾ ನದಿಯ ದಡದಲ್ಲಿರುವ ವೃಂದಾವನ ದಲ್ಲಿ ಗೋವು ಗೋಪೀಜನ ಗೋಪರೊಡನೆ ಬಾಗವನ್ನು ಮಾಡಿಕೊಂಡರು.

೯೯. ಅಲ್ಲಿ ಆ ರಾಮಕೃಷ್ಣರು ಬೆಳೆಯುತ್ತ ಬಂದರು. ಮಹಾಬಲಿಷ್ಠರೂ ಆಗುತ್ತಾ ಬಂದರು. ಮತ್ತು ಕರುಕಾಯುವ ಹುಡುಗರೊಡನೆ ತಾವೂ ಸೇರಿ ಕೊಂಡು ಕರುಗಳನ್ನು ಕಾಯುತ್ತಾ ಬಂದರು.

೧೦೦. ಆಗ ಬಕನೆಂಬ ಅಸುರನು ಕರುಗಳ ಮಧ್ಯದಲ್ಲಿ ಬಕಪಕ್ಷಿಯ ರೂಪ ದಲ್ಲಿದ್ದುಕೊಂಡು ಕೃಷ್ಣನನ್ನು ಕೊಲ್ಲಲು ಸಿದ್ಧನಾಗಿ ಹೊಂಚುಕಾಯುತ್ತಿದ್ದನು.

೧೦೧. ಕೃಷ್ಣನು ಆ ಬಕವು ರಾಕ್ಷಸನ ರೂಪವಾದುದೆಂದು ತಿಳಿದು ಮಣ್ಣಿನ ಹೆಂಟೆಯನ್ನು ತೆಗೆದುಕೊಂಡು ಬಹು ಸರಾಗವಾಗಿಯೇ ರೆಕ್ಕೆಗಳ ಮಧ್ಯಕ್ಕೆ ಹೊಡೆಯಲು ಆ ರಾಕ್ಷಸನು ಕೆಳಗೆ ಬಿದ್ದು ಸತ್ತುಹೋದನು.

೧೦೨–೧೦೬. ಅನಂತರ ಕೆಲವು ದಿನಗಳ ಮೇಲೆ ಆ ಕರುಕಾಯುವ ಹುಡುಗರು ಕರುಗಳನ್ನು ಕಾಯುತ್ತಿರುವಾಗ ಕಾಡಿನಲ್ಲಿ ಅತ್ತಿಮರದ ಕೆಳಗೆ ಅದರ

ಏತಸ್ಮಿನ್ನಂತರೇ ದೇವೋ ಬ್ರಹ್ಮಾ ದೇವಗಣೈರ್ವೃತಃ ।
ದ್ರಷ್ಟುಂ ಕೃಷ್ಣಂ ಸಮಾಗಮ್ಯ ಸುಪ್ತೌ ದೃಷ್ಟ್ವಾ ಯದೂತ್ತಮೌ॥ ೧೦೩ ॥

ವತ್ಸಾನ್ ಗೋಪಶಿಶೂನ್ ಹೃತ್ವಾ ಜಗಾಮ ತ್ರಿದಿವಂ ಪುನಃ ।
ಪ್ರಬುದ್ಧೌ ತೌ ಸಮಾಲೋಕ್ಯ ವಿನಷ್ಟಾನ್ ಶಿಶುವತ್ಸಕಾನ್ ॥ ೧೦೪ ॥

ಗೋವತ್ಸಾ ಗೋಪಬಾಲಾಶ್ಚ ಕ್ವ ಗತಾ ಇತಿ ವಿಸ್ಮಿತಾಃ ।
ಜ್ಞಾತ್ವಾ ಕೃಷ್ಣಸ್ತು ತತ್ಕರ್ಮ ಪ್ರಜಾಪತಿಕೃತಂ ತದಾ ॥ ೧೦೫ ॥

ತಥೈವ ಸಸೃಜೇ ಬಾಲಾನ್ ಗೋವತ್ಸಾಂಶ್ಚ ಸನಾತನಃ ।
ಯಥಾವರ್ಣಂ ಯಥಾರೂಪಂ ತಥೈವ ಮಧುಸೂದನಃ ॥ ೧೦೬ ॥

ಸ ಏಷ ವತ್ಸಾನ್ ಗೋಪಾಲಾನ್ನಿರ್ಮಮೇ ಜಗತಾಂ ಪ್ರಭುಃ ।
ದೃಷ್ಟ್ವಾ ವತ್ಸಾನುಪಾಗಮ್ಯ ಯಥಾಪೂರ್ವಂ ಪ್ರವರ್ತಿತಾಃ ॥ ೧೦೭ ॥

ಏವಂ ಸಂವತ್ಸರೇ ಕಾಲೇ ಗತೇ ತತ್ರ ಮಹಾತ್ಮನಃ ।
ಪ್ರಜಾಪತಿಃ ಪುನಸ್ತಸ್ಮೈ ದದೌ ವತ್ಸಾನ್ ಸಬಾಲಕಾನ್ ॥ ೧೦೮ ॥

---

ಚಿಗುರನ್ನು ಹಾಸಿಕೊಂಡು ರಾಮಕೃಷ್ಣರು ಮಲಗಿದ್ದರು. ಆಗ ಅಲ್ಲಿಗೆ ಬ್ರಹ್ಮನು ದೇವತೆಗಳೊಡನೆ ಸ್ವಾಮಿಯನ್ನು ನೋಡಲು ಬಂದನು. ಅವರಿಬ್ಬರೂ ಅಲ್ಲಿ ಮಲಗಿರುವುದನ್ನು ನೋಡಿದನು. ಅಲ್ಲಿದ್ದ ಗೋಪಾಲ ಬಾಲಕರನ್ನೂ ಗೋವಿನ ಕರುಗಳನ್ನೂ ಕದ್ದುಕೊಂಡು ಸ್ವರ್ಗಕ್ಕೆ ಹೊರಟು ಹೋದನು. ಆ ರಾಮಕೃಷ್ಣರು ಎಚ್ಚೆತ್ತು ಆ ಕರುಗಳೂ ಗೋಪಾಲ ಬಾಲಕರೂ ಇಲ್ಲದಿದ್ದುದನ್ನು ನೋಡಿ ಅವರೆಲ್ಲರೂ ಎಲ್ಲಿಹೋದರೆಂದು ಆಶ್ಚರ್ಯಪಟ್ಟು ಕೊನೆಗೆ ಕೃಷ್ಣನು ಇದು ಬ್ರಹ್ಮನ ಕೆಲಸವೆಂದು ತಿಳಿದು ಆ ಹುಡುಗರನ್ನೂ ಆ ಕರುಗಳನ್ನೂ ಅವರವರುಗಳ ರೀತಿ ಯಲ್ಲಿಯೇ ವರ್ಣವಯಸ್ಸುಗಳನ್ನಿಟ್ಟು ಸೃಷ್ಟಿಸಿದನು.

೧೦೭–೧೦೯. ಆ ಗೋಪಬಾಲಕರ ರೂಪವೂ ವಯಸ್ಸೂ ಅವುಗಳಂತೆಯೇ ಇದ್ದುಕೊಂಡು ಸ್ವಲ್ಪವೂ ಹೆಚ್ಚುಕಡಮೆಯಾಗದಂತೆ ಆ ಸ್ವಾಮಿಯು ನಿರ್ಮಿಸಿದನು. ಸಾಯಂಕಾಲವಾಗುತ್ತಲೂ ತಾಯಿಯಾದ ಗೋವುಗಳು. ಅವುಗಳ ಕರುಗಳನ್ನು ಹೊಂದಿ ಮೊದಲಿನ ಕರುಗಳಂತೆ ಸ್ನೇಹದಿಂದ ಪ್ರವರ್ತಿಸಿದುವು.

ಕೃತಾಂಜಲಿಪುಟೋ ಭೂತ್ವಾ ಪರಿಣೀಯ ಪ್ರಣಮ್ಯ ಚ ।
ಭಯಾದುವಾಚ ಗೋವಿಂದಂ ಬ್ರಹ್ಮಾ ತ್ರಿಭುವನೇಶ್ವರಃ　　॥ ೧೯ ॥

॥ ಬ್ರಹ್ಮೋವಾಚ ॥

ನಮೋ ನಮಸ್ತೇ ಸರ್ವಾತ್ಮನ್ ತತ್ವಜ್ಞಾನಸ್ವರೂಪಿಣೇ ।
ನಿತ್ಯಾನಂದಸ್ವರೂಪಾಯ ಪ್ರಯತಾತ್ಮನ್ ಮಹಾತ್ಮನೇ　　॥ ೧೧೦ ॥

ಅಣುಬೃಹತ್‌ಸ್ಥೂಲತರರೂಪ ಸರ್ವಗತಾವ್ಯಯ ।
ಅನಾದಿಮಧ್ಯಾನ್ತರೂಪಸ್ವರೂಪಾತ್ಮನ್ನಮೋಸ್ತುತೇ　　॥ ೧೧೧ ॥

ನಿತ್ಯಜ್ಞಾನಬಲೈಶ್ವರ್ಯತೇಜೋಮಯಸ್ವರೂಪಿಣೇ ।
ಮಹಾಶಕ್ತೇ ನಮಸ್ತುಭ್ಯಂ ಪೂರ್ಣಷಾಡ್ಗುಣ್ಯಮೂರ್ತಯೇ　　॥ ೧೧೨ ॥

---

ಅವಕ್ಕೆ ಇವು ಬೇರೆಯವೆಂದು ತಿಳಿಯಲೇ ಇಲ್ಲ. ಹೀಗೆ ಒಂದು ವರ್ಷಕಾಲ ಕಳೆದ ಮೇಲೆ ಬ್ರಹ್ಮನು ಮತ್ತೆ ಬಂದು ಆ ಕರುಗಳನ್ನೂ ಗೊಲ್ಲರ ಮಕ್ಕಳನ್ನೂ ಹಿಂದಕ್ಕೆ ಕೊಟ್ಟನು. ಆಗ ಬ್ರಹ್ಮನು ಭಯದಿಂದ ಕೈಮುಗಿದು ಕೊಂಡು ಅವನಿಗೆ ನಮ್ರತೆಯಿಂದ ನಮಸ್ಕರಿಸಿ ಇಂತೆಂದು ಹೇಳಿದನು.

೧೧೦-೧೧೨. ಬ್ರಹ್ಮನು ಹೇಳಿದನು-ಎಲೈ ಸರ್ವಾತ್ಮನೆ! ನಿನಗೆ ನಮಸ್ಕಾರವು. ತತ್ವಜ್ಞಾನ ಸ್ವರೂಪಿಯೇ! ನಿನಗೆ ನಮಸ್ಕಾರವು. ನಿತ್ಯನೂ, ಆನಂದ ಸ್ವರೂಪನೂ ಆದ ನಿನಗೆ ನಮಸ್ಕಾರವು. ವಶೀಕೃತವಾದ ಆತ್ಮವುಳ್ಳ ಮತ್ತು ಮಹಾತ್ಮನಾದ ನಿನಗೆ ನಮಸ್ಕಾರವು. ಅಣು, ಬೃಹತ್, ಸ್ಥೂಲ, ರೂಪನೂ ಎಲ್ಲರಲ್ಲಿಯೂ ಇರತಕ್ಕವನೂ ಆದ ನಿನಗೆ ನಮಸ್ಕಾರವು. ಆದಿ ಮಧ್ಯ ಅಂತರಹಿತನಾದ ನಿನಗೆ ನಮಸ್ಕಾರವು. ನಿತ್ಯಜ್ಞಾನ- ನಿತ್ಯಬಲ, ನಿತ್ಯೈಶ್ವರ್ಯವುಳ್ಳ ನಿನಗೆ ನಮಸ್ಕಾರವು. ತೇಜೋರೂಪನಾದ ನಿನಗೆ ನಮಸ್ಕಾರವು ಮಹಾಶಕ್ತಿಯುಳ್ಳ ನಿನಗೆ ನಮಸ್ಕಾರವು ಷಡ್ಗುಣಗಳೂ ಪೂರ್ತಿಯಾಗಿರುವ ನಿನಗೆ ನಮಸ್ಕಾರವು.

ತ್ವಂ ವೇದಪುರುಷೋ ಬ್ರಹ್ಮನ್ ಮಹಾಪುರುಷ ಏವ ಚ ।
ಶರೀರಪುರುಷಸ್ತ್ವಾದ್ಯಃ ಶುದ್ಧಃ ಪುರುಷ ಏವ ಚ ॥ ೧೧೩ ॥

ಚತ್ವಾರಃ ಪುರುಷಾಃ ತ್ವಂ ಚ ಪುರಾಣಃ ಪುರುಷೋತ್ತಮಃ ।
ವಿಭೂತಯಃ ತವ ಬ್ರಹ್ಮನ್ ಪೃಥಿವ್ಯಗ್ನ್ಯನಿಲಾದಯಃ ॥ ೧೧೪ ॥

ತವ ವಾಚಾ ಸಮುದ್ಭೂತೌ ಕ್ಷ್ಮಾ ವಹ್ನೀ ಜಗದೀಶ್ವರ ।
ಅಂತರಿಕ್ಷಂ ಚ ವಾಯುಶ್ಚ ಸೃಷ್ಟೌ ಪ್ರಾಣೇನ ತೇ ವಿಭೋ ॥ ೧೧೫ ॥

ಚಕ್ಷುಷಾ ತವ ಸಂಸೃಷ್ಟೌ ದ್ಯೌಶ್ಚಾದಿತ್ಯಸ್ತಥೈವ ಚ ।
ದಿಶಶ್ಚ ಚಂದ್ರಮಾಃ ಸೃಷ್ಟಾಃ ಶ್ರೋತ್ರೇಣ ತವ ಚಾನಘ ॥ ೧೧೬ ॥

ಅಪಾಂ ಸ್ರಾವಶ್ಚ ವರುಣೋ ಮನಸಾ ತೇ ಮಹೇಶ್ವರ ।
ಉಕ್ತೇ ಮಹತಿ ಮೀಮಾಂಸೇ ಯತ್ತದ್ಬ್ರಹ್ಮ ಪ್ರಕಾಶತೇ ॥ ೧೧೭ ॥

---

೧೧೩. ನೀನೇ ವೇದಪುರುಷನು. ಬ್ರಹ್ಮನು. ಮಹಾಪುರುಷನು. ನೀನೇ ಶರೀರವುಳ್ಳವರಲ್ಲಿ ಮೊದಲನೆಯವನು. ಶುದ್ಧನಾದವನು.

೧೧೪. ಧರ್ಮ, ಅರ್ಥ, ಕಾಮ, ಮೋಕ್ಷರೂಪನಾದ ಪುರುಷನು ನೀನೇ. ನೀನೇ ಪುರಾಣಪುರುಷನು. ಮತ್ತು ಪುರುಷೋತ್ತಮನು. ಭೂಮಿ, ಅಗ್ನಿ, ಗಾಳಿ ಮುಂತಾದುವು ನಿನ್ನಿಂದ ಹೊರಟ ಮಹಿಮೆಗಳಾಗಿವೆ.

೧೧೫. ಎಲೈ ಜಗದೀಶ್ವರನೆ! ನಿನ್ನ ಮುಖದಿಂದಲೇ ಭೂಮಿಯೂ ಬೆಂಕಿಯೂ ಹುಟ್ಟಿದುವು. ಆಕಾಶ ವಾಯು ಎರಡೂ ಕೂಡ ನಿನ್ನ ಉಸಿರಿನಿಂದ ಸೃಷ್ಟಿಸಲ್ಪಟ್ಟುವು.

೧೧೬. ಅಂತರಿಕ್ಷವೂ ಸೂರ್ಯನೂ ನಿನ್ನ ಕಣ್ಣಿನಿಂದ ಹುಟ್ಟಿದರು. ದಿಕ್ಕು ಚಂದ್ರ ಇವರು ನಿನ್ನ ಕಿವಿಯಿಂದ ಹುಟ್ಟಿದರು.

೧೧೭. ನದಿಗಳಿಗೆ ಅಧಿಪತಿಯಾದ ವರುಣನೂ ನಿನ್ನ ಮನಸ್ಸಿನಿಂದ ಹುಟ್ಟಿದನು. ಮೀಮಾಂಸದಲ್ಲಿ ಯಾವ ಬ್ರಹ್ಮವು ಪ್ರಕಾಶಿಸುತ್ತದೆಯೋ ಅದೇ ನೀನು.

ತಥೈವ ಚಾಧ್ವರೇಷ್ವೇತದೇತದೇವ ಮಹಾವ್ರತೇ |
ಛಂದೋಗೇಯ ನಮಸ್ಯೇ ತ್ವಾಂ ದಿವ್ಯಂ ತೇ ವಪುರೇವ ತತ್ || ೧೧೮ ||

ಆಕಾಶ ಏತದೇವೇದಮೋಷಧೀಷ್ವೇವಮೇವ ಚ |
ನಕ್ಷತ್ರೇಷು ಚ ಸರ್ವೇಷು ಗ್ರಹೇಷ್ವೇತದ್ದಿವಾಕರೇ || ೧೧೯ ||

ಏವಂಭೂತೇಷ್ವೇವಮೇವ ಬ್ರಹ್ಮೇತಿ ವದತಿ ಶ್ರುತಿಃ |
ತದೇವಂ ಪರಮಂ ಬ್ರಹ್ಮ ಪ್ರಜ್ಞಾತಂ ಪರಿತೋವೃತಂ || ೧೨೦ ||

ಹಿರಣ್ಮಯೋಽವ್ಯಯೋ ಯಜ್ಞಃ ಶುಚಿಃ ಶುಚಿಷದಿತ್ಯಪಿ |
ವೈದಿಕಾನ್ಯಭಿಧೇಯಾನಿ ತವ ನಾನ್ಯಸ್ಯ ಕಸ್ಯ ಚಿತ್ || ೧೨೧ ||

ಚಕ್ಷುರ್ಮಯಂ ಶ್ರೋತ್ರಮಯಂ ಛಂದೋಮಯಮನೋಮಯಂ |
ವಾಙ್ಮಯಂ ಪರಮಾತ್ಮಾನಂ ಪರೇಶಂ ಶಂಸತಿ ಶ್ರುತಿಃ || ೧೨೨ ||

---

೧೧೮. ಈ ಯಾಗಗಳಲ್ಲಿಯೂ ಮಹಾವ್ರತಗಳಲ್ಲಿಯೂ ನಿನ್ನ ದೇಹವೇ ಬೆಳಗುತ್ತಿರುವುದು. ಛಂದಸ್ಸುಗಳೆಲ್ಲವೂ ನಿನ್ನನ್ನೇ ಹೇಳುತ್ತಿವೆ. ಇಂತಹ ನಿನ್ನನ್ನು ನಮಸ್ಕರಿಸುತ್ತೇನೆ. ಅವೆಲ್ಲವೂ ಕೂಡ ನಿನ್ನ ಶರೀರಗಳಾಗಿಯೇ ಇರುತ್ತವೆ

೧೧೯–೧೨೦. ಆಕಾಶದಲ್ಲಿ ನಿನ್ನ ಸ್ವರೂಪವಾದ ಬ್ರಹ್ಮವೇ ಇರುವುದು. ಔಷಧಿಗಳಲ್ಲಿಯೂ ನಿನ್ನ ಸ್ವರೂಪವೇ ಇರುವುದು. ನಕ್ಷತ್ರ, ಗ್ರಹಗಳು, ಸೂರ್ಯ ಎಲ್ಲದರಲ್ಲಿಯೂ ಈ ನಿನ್ನ ರೂಪವಾದ ಬ್ರಹ್ಮವಿರುವುದೆಂದು ಶ್ರುತಿಗಳು ಹೇಳುತ್ತವೆ. ಆ ರೀತಿಯಾದ ನಿನ್ನ ಸ್ವರೂಪದ ಬ್ರಹ್ಮವೇ ಎಲ್ಲಾ ಕಡೆಯಲ್ಲಿಯೂ ಆವರಿಸಿಕೊಂಡಿದೆ ಎಂದು ನನಗೆ ತಿಳಿಯಿತು.

೧೨೧. ಹಿರಣ್ಮಯ, ಅವ್ಯಯ, ಯಜ್ಞ, ಶುಚಿಷತ್, ಎಂಬದಾಗಿ ನಿನಗೆ ವೇದೋಕ್ತವಾದ ಹೆಸರುಗಳು ಇವೆ. ಮತ್ತೊಬ್ಬರಿಗೂ ಇಂತಹ ಹೆಸರುಗಳಿಲ್ಲವೇ ಇಲ್ಲ.

೧೨೨. ನೀನೇನೇ ಚಕ್ಷುರ್ಮಯನು. ಶ್ರೋತ್ರಮಯನು. ಛಂದೋಮಯನು. ವಾಙ್ಮಯನು. ಪರಮಾತ್ಮನು. ಪರೇಶನು ಎಂದು ಶ್ರುತಿಯೇ ಹೇಳುತ್ತದೆ.

ಇತಿ ಸರ್ವೋಪನಿಷದಾಮರ್ಥಸ್ತ್ವಂ ಕಮಲೇಕ್ಷಣ ।
ಸ್ತೋತುಂ ನ ಶಕ್ನುವೇ ತ್ವಾಂ ತು ಸರ್ವವೇದಾಂತಪಾರಗಂ ॥ ೧೨೩ ॥

ಮಹಾಪರಾಧಮೇತತ್ತೇ ವತ್ಸಾಪಹರಣಂ ಮಯಾ ।
ಕೃತಂ ತತ್ ಕ್ಷಮ್ಯತಾಂ ನಾಥ ಶರಣಾಗತವತ್ಸಲ ॥ ೧೨೪ ॥

॥ ಮಹೇಶ್ವರ ಉವಾಚ ॥

ಏವಂ ಸ್ತುತ್ವಾ ಹರಿಂ ವೇಧಾಃ ಪ್ರಣಮ್ಯ ಚ ಪುನಃ ಪುನಃ ।
ವತ್ಸಾನ್ ದತ್ವಾ ಪುನಸ್ತಸ್ಮೈ ಪ್ರಯಯೌ ಸ್ವೀಯಮಾಲಯಂ ॥ ೧೨೫ ॥

ಹೃದಿ ಕೃತ್ವಾ ಮಹಾದೇವಂ ಬಾಲರೂಪಂ ಹರಿಂ ವಿಧಿಃ ।
ಉವಾಸ ತ್ರಿದಶೈಸ್ಸಾರ್ಧಂ ಹೃಷ್ಟಃ ಪುಷ್ಟೋ ಮಹಾತಪಾಃ ॥ ೧೨೬ ॥

---

೧೨೩. ಎಲೈ ಕಮಲೇಕ್ಷಣನೆ! ನಾನು ಹೇಳಿದ ಇದೆಲ್ಲವೂ ಎಲ್ಲಾ ಉಪನಿಷತ್ತುಗಳ ಅರ್ಥವಾಗಿದೆ. ಎಲ್ಲಾ ವೇದಾಂತಗಳಲ್ಲಿಯೂ ಹೊಗಳಲ್ಪಡುತ್ತಿರುವ ನಿನ್ನನ್ನು ನಾನು ಸ್ತೋತ್ರಮಾಡಲಾರೆ.

೧೨೪. ನಿನ್ನ ಈ ಗೋಪರ ಮಕ್ಕಳನ್ನೂ ಹಸುವಿನ ಕರುಗಳನ್ನೂ ಕದ್ದುದು ಮಹಾಪರಾಧವಾಗಿದೆ. ಎಲೈ ಶರಣಾಗತವತ್ಸಲನೆ! ಅದನ್ನು ಕ್ಷಮಿಸು.

೧೨೫. ಮಹೇಶ್ವರನು ಹೇಳಿದನು.—ಆ ಬ್ರಹ್ಮನು ಈ ರೀತಿಯಾಗಿ ಹರಿಯನ್ನು ಸ್ತುತಿಸಿ ಮತ್ತೆ ಮತ್ತೆ ನಮಸ್ಕರಿಸಿ ಆ ಕರುಗಳನ್ನೂ ಹುಡುಗರನ್ನೂ ಕೊಟ್ಟು ತನ್ನ ಲೋಕಕ್ಕೆ ಹೊರಟುಹೋದನು.

೧೨೬. ಬ್ರಹ್ಮನು ಬಾಲರೂಪನಾದ ಆ ಹರಿಯನ್ನು ಹೃದಯದಲ್ಲಿ ಧ್ಯಾನಿಸುತ್ತಾ ದೇವತೆಗಳೊಡನೆ ಸಂತೋಷದಿಂದಿದ್ದನು.

ಕೃಷ್ಣೇನ ಸೃಷ್ಟಾ ವತ್ಸಾಶ್ಚ ಪೂರ್ವವತ್ಸಾಸ್ತಥಾರ್ಭಕಾಃ ।
ಅವಾಪುರೇಕತಾಂ ತತ್ರ ಪಶ್ಯತಾಂ ತ್ರಿದಿವೌಕಸಾಂ ॥ ೧೨೭ ॥

ಕೃಷ್ಣಸ್ತು ವತ್ಸಪಾಲೈಸ್ತೈಃ ಪ್ರಯಯೌ ನಂದಗೋಕುಲಂ ।
ತತಃ ಕತಿಪಯಾಹಸ್ಸು ಗೋಪಾಲೈರ್ಯದುಪುಂಗವಃ ॥ ೧೨೮ ॥

ಹ್ರದಂ ಗತ್ವಾ ಥ ಕಾಳಿಂದ್ಯಾಃ ತತ್ರಸ್ಥಂ ಸುಮಹಾವಿಷಂ ।
ಸಹಸ್ರಶೀರ್ಷಂ ಬಲಿನಂ ನಾಗರಾಜಾನಮಚ್ಯುತಃ ॥ ೧೨೯ ॥

ನಿಷ್ಪಿಷ್ಯ ಫಣಸಾಹಸ್ರಂ ಪಾದೇನೈಕೇನ ಲೀಲಯಾ ।
ಪ್ರಾಣಸಂಶಯಮಾಪನ್ನಂ ಚಕಾರ ಮಧುಸೂದನಃ ॥ ೧೩೦ ॥

ಸ ಕಾಲಿಯೋ ಲಬ್ಧಸಂಜ್ಞಃ ತಮೇವ ಶರಣಂ ಯಯೌ ।
ರರಕ್ಷ ಭಗವಾನ್ ಕೃಷ್ಣೋ ನಾಗಂ ತ್ಯಕ್ತ್ವವಿಷಂ ತದಾ ॥ ೧೩೧ ॥

---

೧೨೭. ಕೃಷ್ಣನು ಸೃಷ್ಟಿಸಿದ ಕರುಗಳೂ ಹುಡುಗರೂ ಬ್ರಹ್ಮನು ತಂದು ಕೊಟ್ಟ ಹಿಂದಿನ ಹುಡುಗರೂ ಕರುಗಳೂ ದೇವತೆಗಳು ನೋಡುತ್ತಿರುವಂತೆಯೇ ಒಂದಾದುವು

೧೨೮-೧೩೦. ಕೃಷ್ಣನು ಕರುಗಳನ್ನು ಕಾಯುವ ಹುಡುಗರೊಡನೆ ನಂದ ಗೋಕುಲಕ್ಕೆ ಹೋದನು. ಅನಂತರ ಕೆಲವು ದಿನಗಳ ಮೇಲೆ ಆ ಗೋಪಾಲನಾದ ಕೃಷ್ಣನು ಅಲ್ಲಿರುವ ಕಾಲಿಂದಿ ನದಿಯ ಮಡುವನ್ನು ಹೊಂದಿ ಅದರಲ್ಲಿದ್ದ ಮಹಾ ವಿಷವುಳ್ಳ ಬಲಿಷ್ಠನಾದ ಸಾವಿರ ಹೆಡೆಗಳುಳ್ಳ ನಾಗರಾಜನನ್ನು ಒಂದೇ ಕಾಲಿನಿಂದ ಬಹು ಸರಾಗವಾಗಿಯೇ ಸಾವಿರ ಹೆಡೆಗಳನ್ನೂ ಅಮುಕಿ ತುಳಿದು ಅವನನ್ನು ಪ್ರಾಣವುಳಿಯುವುದೋ ಇಲ್ಲವೋ ಎಂಬಂತೆ ಸಂಶಯಗ್ರಸ್ತನನ್ನಾಗಿ ಮಾಡಿದನು.

೧೩೧-೧೩೨ ಆ ಕಾಲಿಯ ಸರ್ಪವು ಚೇತರಿಸಿಕೊಂಡು ಆ ಸ್ವಾಮಿಯನ್ನೇ ಶರಣುಹೊಂದಿತು. ಆಗ ಆ ಕಾಲಿನ ಮರ್ದನದಿಂದ ವಿಷವೆಲ್ಲವನ್ನೂ

ವೈನತೇಯಭಯಾದ್ಭೀತಂ ಸ್ವಪದೇನಾಂಕ್ಯ ಮೂರ್ಧಸು ।
ಪ್ರವಾದ್ವಿವಾಸಯಾಮಾಸ ಕಾಲಿಂದ್ಯಾ ಯದುಪುಂಗವಃ ॥ ೧೩೨ ॥

ತ್ಯಕ್ತ್ವಾ ಸ ತಂ ಹ್ರದಂ ತೂರ್ಣಂ ಪುತ್ರದಾರಸಮನ್ವಿತಃ ।
ನಮಸ್ಕೃತ್ಯಾಥ ಗೋವಿಂದಂ ಪ್ರಯಯೌ ಕಾಳಿಯಸ್ತದಾ ॥ ೧೩೩ ॥

ವಿಷದಗ್ಧಾಸ್ತು ಯೇ ಪೂರ್ವಂ ತತ್ತೀರಸ್ಥಾಶ್ಚ ಶಾಖಿನಃ ।
ಕೃಷ್ಣೇನ ವೀಕ್ಷಿತಾಸ್ತೂರ್ಣಂ ಫಲಿನಃ ಪುಷ್ಪಿತಾ ಭವನ್ ॥ ೧೩೪ ॥

ಅಥ ಕಾಲೇನ ಕೌಮಾರಮವಾಪ್ಯ ಮಧುಸೂದನಃ ।
ಗೋವೃಂದಂ ಪಾಲಯಾಮಾಸ ಸರ್ವದೇವಮಯಃ ಪ್ರಭುಃ ॥ ೧೩೫ ॥

ಸ್ವಸಮಾನವಯೋಭಿಸ್ತು ಗೋಪಾಲೈಸ್ತು ಯದೂತ್ತಮಃ ।
ವೃಂದಾವನೇ ಮನೋರಮ್ಯೇ ಸರಾಮೋ ವಿಚಚಾರ ಹ ॥ ೧೩೬ ॥

---

ನಾಶಮಾಡಿಕೊಂಡಿದ್ದ ಆ ಕಾಲಿಯನನ್ನು ಕಾಪಾಡಿದನು. ಅನಂತರ ಗರುಡನ ಹೆದರಿಕೆಯನ್ನು ಹೊಂದಿರುವ ಅದನ್ನು ತನ್ನ ಪಾದದ ಗುರುತಿನಿಂದ ತಲೆಯಲ್ಲಿ ಗುರುತುಮಾಡಿ ಆ ಕಾಳಿಂದಿಯ ಮಡುವಿನಿಂದ ಓಡಿಸಿಬಿಟ್ಟನು.

೧೩೩. ಅನಂತರ ಆ ಕಾಲಿಯನು ಹೆಂಡತಿ ಮಕ್ಕಳೊಡನೆ ಆ ಮಡುವನ್ನು ಬಿಟ್ಟು ಗೋವಿಂದನಿಗೆ ನಮಸ್ಕರಿಸಿ ಹೊರಟುಹೋದನು

೧೩೪. ಹಿಂದೆ ಆ ಕಾಲಿಯನ ವಿಷದಿಂದ ಬೆಂದುಹೋಗಿದ್ದ ಆ ಮಡುವಿನ ದಡದಲ್ಲಿದ್ದ ಮರಗಳನ್ನು ಕೃಷ್ಣನು ಕಡೆಗಣ್ಣಿನ ದೃಷ್ಟಿಯಿಂದ ನೋಡಲಾಗಿ ಅವು ಚಿಗುರಿ ಹೂವು ಹಣ್ಣುಗಳನ್ನು ಬಿಟ್ಟುವು.

೧೩೫. ಕೆಲವು ಕಾಲದ ಮೇಲೆ ಕೌಮಾರ ವಯಸ್ಸು ಬರಲು ಆ ಮಧುಸೂದನನು ಗೋವುಗಳ ಮಂದೆಯನ್ನು ಕಾಯುತ್ತಿದ್ದನು.

೧೩೬. ಆ ಯದೂತ್ತಮನಾದ ಗೋಪಾಲನು ತನಗೆ ಸಮಾನ ವಯಸ್ಸಿನವರಿಂದ ಕೂಡಿಕೊಂಡು ಆ ರಮ್ಯವಾದ ವೃಂದಾವನದಲ್ಲಿ ಸಂಚರಿಸುತ್ತಿದ್ದನು.

ತತ್ರ ಹತ್ವಾ ಮಹಾಘೋರಂ ಸರ್ಪರೂಪಂ ಮಹಾಸುರಂ ।
ಅಪಹೃತ್ಯ ಮಹಾಕಾಯಂ ಮೇರುಮಂದರಗೌರವಂ　　॥ ೧೩೭ ॥

ಧೇನುಕಸ್ಯ ವನಂ ಪ್ರಾಪ್ಯ ತಾಲಹಿಂತಾಳಗಹ್ವರಂ ।
ಧೇನುಕಂ ಪರ್ವತಾಕಾರಂ ಖರರೂಪಂ ದುರಾಸದಂ　　॥ ೧೩೮ ॥

ಪಾದೌ ಗೃಹ್ಯ ಸಮುತ್ ಕ್ಷಿಪ್ಯ ತಾಲೇನ ವಿಜಘಾನ ಹ ।
ಫಲೈಸ್ಸಂತೃಪ್ತಾ ಗೋಪಾಲಾಸ್ತದ್ವನೇ ರೇಮಿರೇ ತದಾ　　॥ ೧೩೯ ॥

ನಿಷ್ಕ್ರಮ್ಯ ತದ್ವನಾತ್ತೂರ್ಣಂ ಭಾಂಡೀರಂ ವಟಮಾಗತಾಃ ।
ತತ್ರ ತೇ ರಾಮಕೃಷ್ಣಾಭ್ಯಾಂ ಚಿಕ್ರೀಡುರ್ಬಾಲಲೀಲಯಾ　　॥ ೧೪೦ ॥

ಗೋಪವೇಷೇಣ ತತ್ರಾಗಾತ್ ಪ್ರಲಂಬೋ ನಾಮ ರಾಕ್ಷಸಃ ।
ರಾಮಂ ಸ್ವಪೃಷ್ಠಮಾರೋಪ್ಯ ತತೋ ಯಾತೋ ನಭಸ್ತಲಂ　　॥ ೧೪೧ ॥

---

೧೩೭. ಅಲ್ಲಿ ಸರ್ಪರೂಪದಿಂದಿದ್ದ ಮಹಾ ಅಸುರನನ್ನು ಕೊಂದು ಅನಂತರ ಮೇರು ಮಂದರಗಳಷ್ಟು ಭಾರವುಳ್ಳ ಅವನ ದೇಹವನ್ನು ದೂರಕ್ಕೆಸೆದನು.

೧೩೮-೧೩೯. ತಾಲಹಿಂತಾಲಗಳಿಂದ ಕೂಡಿರುವ ಧೇನುಕನ ವನಕ್ಕೆ ಹೋಗಿ ಅಲ್ಲಿ ಪರ್ವತಾಕಾರನೂ ಕತ್ತೆಯ ರೂಪದಿಂದಿರುವವನೂ ಆದ ಧೇನುಕನ ಕಾಲುಗಳನ್ನು ಹಿಡಿದುಕೊಂಡು ತಾಲೆಯ ಮರಕ್ಕೆ ಬಡಿಯುತ್ತ ಕೊಂದನು. ಆಗ ಆ ಗೋಪಾಲರು ಆ ಕಾಡಿನಲ್ಲಿ ಹಣ್ಣುಗಳನ್ನು ತಿನ್ನುತ್ತಾ ತೃಪ್ತಿಪಟ್ಟು ಕೊಂಡು ರಮಿಸಿದರು.

೧೪೦. ಅನಂತರ ಅವರು ಧೇನುಕ ವನದಿಂದ ಹೊರಟು ಗೋಪರ ಸ್ಥಾನ ವಿದ್ದ ಆಲದ ಮರದ ಹತ್ತಿರಕ್ಕೆ ಬಂದು ಅಲ್ಲಿ ಹುಡುಗರಾಡುವ ಆಟಗಳನ್ನು ಆಡುತ್ತಿದ್ದರು.

೧೪೧. ಅಲ್ಲಿಗೆ ಗೋಪಾಲಕರ ವೇಷದಿಂದ ಪ್ರಲಂಬನೆಂಬ ರಾಕ್ಷಸನು ಬಂದನು. ಅವನು ಆ ಆಟದಲ್ಲಿ ರಾಮನನ್ನು ತನ್ನ ಬೆನ್ನಿನ ಮೇಲೆ ಕೂರಿಸಿ ಕೊಂಡು ಅಂತರಿಕ್ಷಕ್ಕೆ ಹಾರಿದನು.

ಮತ್ವಾ ತಂ ರಾಕ್ಷಸಂ ರಾಮೋ ಮುಷ್ಟಿನಾ ತಸ್ಯ ಮೂರ್ಧನಿ ।
ತಾಡಯಾಮಾಸ ರೋಷೇಣ ವಿಹ್ವಲಾಂಗಸ್ತತೋಽಭವತ್ ॥ ೧೪೨ ॥

ರಾಕ್ಷಸೇನೈವ ರೂಪೇಣ ನಿನರ್ದ ಭೈರವಂ ಸ್ವನಂ ।
ಭಿನ್ನಶೀರ್ಷತನುಸ್ತತ್ರ ಮಮಾರ ರುಧಿರೋಕ್ಷಿತಃ ॥ ೧೪೩ ॥

ತತಃ ಪ್ರದೋಷಸಮಯೇ ಗೋವ್ರಜೇ ನಂದನಂದನಃ ।
ಉವಾಸ ಗೋಪಕನ್ಯಾಭಿಃ ಕ್ರೀಡನ್ ಕೌಮಾರವೀಕ್ಷಿತೇ ॥ ೧೪೪ ॥

ಅರಿಷ್ಟೋ ನಾಮ ದೈತ್ಯೋಽತ್ರ ಗತ್ವಾ ತು ವೃಷಭಾಕೃತಿಃ ।
ಕೃಷ್ಣಂ ಹಂತುಂ ಸಮಾಗತ್ಯ ಜಗರ್ಜ ಚ ಮಹಾಸ್ವನಂ ॥ ೧೪೫ ॥

ತಂ ದೃಷ್ಟ್ವಾ ವಿದ್ರುತಾಸ್ಸರ್ವೇ ಗೋಪಾಲಾ ಭಯಪೀಡಿತಾಃ ।
ಕೃಷ್ಣೋಽಪಿ ದೃಷ್ಟ್ವಾ ತಂ ರೌದ್ರಮಾಗತಂ ದನುಜಾಧಿಪಂ ॥ ೧೪೬ ॥

---

೧೪೨. ರಾಮನು ತನ್ನನ್ನು ಹೊತ್ತುಕೊಂಡು ಹೋಗುತ್ತಿರುವವನು ರಾಕ್ಷಸನೆಂದು ತಿಳಿದುಕೊಂಡು ಮುಷ್ಟಿಯಿಂದ ಅವನ ತಲೆಯ ಮೇಲೆ ಕೋಪದಿಂದ ಹೊಡೆದನು. ಅದರಿಂದ ಆ ರಾಕ್ಷಸನ ತಲೆಯು ಒಡೆಯಿತು.

೧೪೩. ಆ ಪ್ರಲಂಬನು ಗಟ್ಟಿಯಾಗಿ ಶಬ್ದಮಾಡುತ್ತ ರಾಕ್ಷಸ ರೂಪದ ಆಕಾರವನ್ನು ಹೊಂದಿ ತಲೆಯೊಡೆದು ಮೈ ನಜ್ಜುಗುಜ್ಜಾಗಿ ರಕ್ತದಿಂದ ನೆನೆದು ಸತ್ತನು.

೧೪೪ ಅನಂತರ ಪ್ರದೋಷ ಸಮಯದಲ್ಲಿ ಆ ಗೋಪರ ಹಟ್ಟಿಯಲ್ಲಿ ನಂದನಂದನನಾದ ಕೃಷ್ಣನು ಗೋಪಕನ್ಯೆಯರೊಡನೆ ಆಡುತ್ತಲಿದ್ದನು. ಆಗ ಕೌಮಾರ ವಯಸ್ಸು ಬಂದಿದ್ದಿತು.

೧೪೫. ಆಗ ಅರಿಷ್ಟನೆಂಬ ದೈತ್ಯನು ಅಲ್ಲಿಗೆ ಎತ್ತಿನ ಆಕಾರವನ್ನು ಹೊಂದಿ ಕೃಷ್ಣನನ್ನು ಕೊಲ್ಲಲು ಬಂದು ದೊಡ್ಡದಾದ ಧ್ವನಿಯನ್ನೇ ಮಾಡಿದನು.

೧೪೬–೧೫೦. ಆ ಎತ್ತನ್ನು ನೋಡಿ ಗೋಪಾಲರು ಭಯಗೊಂಡು ಓಡಿದರು. ಕೃಷ್ಣನೂ ಕೂಡ ರೌದ್ರಾಕಾರವಾಗಿ ಬಂದ ಆ ರಾಕ್ಷಸನನ್ನು ನೋಡಿ

ತಾಲವೃಕ್ಷಂ ಸಮುತ್ಪಾಟ್ಯ ಶೃಂಗಮಧ್ಯೇ ವ್ಯತಾಡಯತ್ ।
ಸ ತು ಭಗ್ನಶಿರಶ್ಶೃಂಗೋ ವಮನ್ವೈ ರುಧಿರಂ ಬಹು ॥ ೧೪೭ ॥

ಪಪಾತ ಭೀಮವೇಗೇನ ನಿನದಂಸ್ತ್ಯಕ್ತಜೀವಿತಃ ।
ಇತ್ಥಂ ಹತ್ವಾ ಮಹಾಕಾಯಮರಿಷ್ಟಂ ದನುಜಾಧಿಪಂ ॥ ೧೪೮ ॥

ಆಹೂಯ ಗೋಪಬಾಲಾಂಶ್ಚ ತತ್ರೈವೋವಾಸ ಗೋವ್ರಜೇ ।
ತತಃ ಕತಿಪಯಾಹಸ್ಸು ಕೇಶೀ ನಾಮ ಮಹಾಸುರಃ ॥ ೧೪೯ ॥

ಹಯಕಾಯೇನ ಗೋವಿಂದಂ ಹಂತುಂ ವ್ರಜಮುಪಾಯಯೌ ।
ಸ ಗತ್ವಾ ಗೋವ್ರಜಂ ರಮ್ಯಮುಚ್ಚೈರ್ಹೇಷಾಮಥಾಕರೋತ್ ॥ ೧೫೦ ॥

ತೇನ ಶಬ್ದೇನ ಮಹತಾ ಪೂರಿತಂ ಭುವನತ್ರಯಂ ।
ಭೀತಾಸ್ಸರ್ವೇ ಸುರಗಣಾಃ ಶಂಕಮಾನಾ ಯುಗಕ್ಷಯಂ ॥ ೧೫೧ ॥

---

ತಾಳೆಯ ಮರವೊಂದನ್ನು ಕಿತ್ತುಕೊಂಡು ಆ ಎತ್ತಿನ ಕೊಂಬಿನ ಮಧ್ಯದಲ್ಲಿ ಹೊಡೆದನು. ಆ ರಾಕ್ಷಸನ ತಲೆಯೂ ಕೊಂಬೂ ಮುರಿದುಹೋಗಲು ಬಹು ವಾಗಿ ರಕ್ತವನ್ನು ಕಾರುತ್ತ ಗಟ್ಟಿಯಾಗಿ ಕೂಗಿಕೊಳ್ಳುತ್ತಾ ಬಿದ್ದು ಸತ್ತನು. ಈ ರೀತಿಯಾಗಿ ದೊಡ್ಡ ದೇಹವುಳ್ಳ ಆ ಅರಿಷ್ಟನೆಂಬ ರಾಕ್ಷಸನನ್ನು ಕೊಂದು ಗೋಪ ಬಾಲರೆಲ್ಲರನ್ನೂ ಕರೆದುಕೊಂಡು ಆಡುತ್ತ ಆ ಗೊಲ್ಲರ ದೊಡ್ಡಿಯಲ್ಲಿಯೇ ಇದ್ದನು. ಅನಂತರ ಕೆಲವು ದಿನಗಳಾದ ಮೇಲೆ ಕೇಶಿಯೆಂಬ ದೊಡ್ಡ ರಾಕ್ಷಸನು ಕುದುರೆಯ ಆಕಾರವನ್ನು ಹೊಂದಿ ಗೋವಿಂದನನ್ನು ಕೊಲ್ಲಲು ಬಂದನು. ಆ ಗೊಲ್ಲರ ದೊಡ್ಡಿಗೆ ಬಂದು ಗಟ್ಟಿಯಾಗಿ ಕೆನೆದನು

೧೫೧–೧೫೨. ಆ ಕುದುರೆಯ ಹೇಷಾರವದಿಂದ ಮೂರು ಲೋಕವೂ ತುಂಬಿತು. ಆಗ ದೇವತೆಗಳೆಲ್ಲರೂ ಹೆದರಿ ಯುಗದ ಕೊನೆಯಲ್ಲಿ ಪ್ರಳಯ

ತತ್ರಸ್ತಾ ಮೋಹಿತಾಸ್ಸರ್ವೇ ಗೋಪಾ ಗೋಪ್ಯಶ್ಚ ವಿಹ್ವಲಾಃ ।
ಲಬ್ಧಸಂಜ್ಞಾಸ್ತು ತೇ ಸರ್ವೇ ವಿದ್ರುತಾಶ್ಚ ಸಮಂತತಃ ॥ ೧೫೨ ॥

ಗೋಪ್ಯಸ್ತು ಶರಣಂ ಜಗ್ಮುಃ ಕೃಷ್ಣಂ ತ್ರಾಹೀತಿ ಚಾಬ್ರುವನ್ ।
ನ ಭೇತವ್ಯಂ ನ ಭೇತವ್ಯಮಿತ್ಯಾಹ ಭಕ್ತವತ್ಸಲಃ ॥ ೧೫೩ ॥

ಸಮಾಶ್ವಾಸ್ಯ ತತಸ್ತೂರ್ಣಂ ಮುಷ್ಟಿನಾ ವಾಸವಾನುಜಃ ।
ತಾಡಯಾಮಾಸ ಶಿರಸಿ ತಸ್ಯ ದೈತ್ಯಸ್ಯ ಲೀಲಯಾ ॥ ೧೫೪ ॥

ವಿಭಿನ್ನದಂತನೇತ್ರೋಽಸೌ ವಿನನಾದ ಮಹಾಸ್ವನಂ ।
ಮಹಾಶಿಲಾಂ ಸಮುತ್ಕ್ಷಿಪ್ಯ ತಸ್ಯಾಂಗೇ ವೈ ನ್ಯಪಾತಯತ್ ॥ ೧೫೫ ॥

ಸ ತು ಚೂರ್ಣಿತಸರ್ವಾಂಗೋ ನಿನದನ್ ಭೈರವಂ ಸ್ವನಂ ।
ಪಪಾತ ಸಹಸಾ ಭೂಮೌ ಮಮಾರ ಚ ಮಹಾಸುರಃ ॥ ೧೫೬ ॥

---

ವಾಗುತ್ತದೆಯೋ ಎಂದು ಶಂಕಿಸಿದರು. ಆ ಗೊಲ್ಲ ದೊಡ್ಡಿಯಲ್ಲಿದ್ದ ಗೋಪ ಗೋಪಿಯರೆಲ್ಲರೂ ಜ್ಞಾನತಪ್ಪಿ ಬಿದ್ದರು. ಅನಂತರ ಪ್ರಜ್ಞೆ ಬರಲು ಎಲ್ಲರೂ ಓಡಿಹೋದರು.

೧೫೩. ಅಲ್ಲಿ ಗೋಪಿಯರೆಲ್ಲಾ ಕೃಷ್ಣನನ್ನು ತ್ರಾಹಿ ತ್ರಾಹಿ ಎಂದು ಮರೆ ಹೊಕ್ಕರು. ಅವನು ಅವರಿಗೆ ಹೆದರಬೇಡಿರಿ ಎಂದು ಅಭಯವನ್ನು ಕೊಟ್ಟನು.

೧೫೪. ಆಗ ಅವರೆಲ್ಲರನ್ನೂ ಸಮಾಧಾನಪಡಿಸಿ ಆ ಕೃಷ್ಣನು ಮುಷ್ಟಿ ಯಿಂದ ಆ ರಾಕ್ಷಸನ ತಲೆಯ ಮೇಲೆ ಸರಾಗವಾಗಿ ಒಂದು ಏಟನ್ನು ಕೊಟ್ಟನು.

೧೫೫. ಒಡನೆಯೇ ಆ ದೈತ್ಯನ ಹಲ್ಲುಗಳೂ ಕಣ್ಣುಗಳೂ ಬಿದ್ದು ಹೋದುವು. ಅದರಿಂದ ಬಹು ಗಟ್ಟಿಯಾಗಿ ಕೂಗಿಕೊಂಡನು. ಅಷ್ಟರೊಳಗೆ ಈ ಕೃಷ್ಣನು ಅಲ್ಲಿ ಬಿದ್ದಿದ್ದ ಒಂದು ದೊಡ್ಡ ಬಂಡೆಯನ್ನು ತೆಗೆದು ಆ ರಾಕ್ಷಸನ ಮೇಲೆ ಎಸೆದನು.

೧೫೬. ಆಗ ಆ ರಾಕ್ಷಸನಿಗೆ ಮೈಕೈಗಳೆಲ್ಲವೂ ಜಜ್ಜಿಹೋಯಿತು. ಗಟ್ಟಿ ಯಾಗಿ ಕೂಗುತ್ತ ನೆಲದ ಮೇಲೆ ಬಿದ್ದು ಸತ್ತುಹೋದನು.

ಕೇಶಿನಂ ನಿಹತಂ ದೃಷ್ಟ್ವಾ ದಿವಿ ದೇವಗಣಾ ಭೃಶಂ ।
ಮುಮುಚುಃ ಪುಷ್ಪವರ್ಷಾಣಿ ಸಾಧು ಸಾಧ್ವಿತಿ ಚಾಬ್ರುವನ್ ॥ ೧೫೭ ॥

ಇತ್ಥಂ ಶಿಶುತ್ವೇ ವೈ ದೈತ್ಯಾನ್ ಹರಿರ್ಹತ್ವಾ ಬಲೋತ್ಕಟಾನ್ ।
ಸ ಮುಮೋದ ಸುಖೇನೈವ ಬಲರಾಮಸಮನ್ವಿತಃ ॥ ೧೫೮ ॥

ಇಂದೀವರದಳಶ್ಯಾಮಃ ಪದ್ಮಪತ್ರನಿಭೇಕ್ಷಣಃ ।
ಪೀತಾಂಬರಧರಃ ಸ್ರಗ್ವೀ ವನಮಾಲಾವಿಭೂಷಿತಃ ॥ ೧೫೯ ॥

ಕೌಸ್ತುಭೋದ್ಭಾಸಿತೋರಸ್ಕಶ್ಚಿತ್ರಮಾಲ್ಯಾನುಲೇಪನಃ ।
ವಿಚಿತ್ರಾಭರಣೈರ್ಯುಕ್ತಃ ಕುಂಡಲಾಭ್ಯಾಂ ವಿರಾಜಿತಃ ॥ ೧೬೦ ॥

ಆಮುಕ್ತತುಲಸೀಮಾಲಃ ಕಸ್ತೂರೀತಿಲಕಾಂಚಿತಃ ।
ಸುಸ್ನಿಗ್ಧನೀಲಕುಟಿಲಕಬರೀಕೃತಕೇಶವಾನ್ ॥ ೧೬೧ ॥

---

೧೫೭. ಈ ಕೇಶಿಯು ಸತ್ತುದನ್ನು ನೋಡಿ ಅಂತರಿಕ್ಷದಲ್ಲಿ ದೇವತೆಗಳು ಸಾಧು ಸಾಧು ಎಂಬುದಾಗಿ ಹೇಳುತ್ತ ಈ ಕೃಷ್ಣನ ಮೇಲೆ ಹೂ ಮಳೆಯನ್ನು ಸುರಿಸಿದರು.

೧೫೮. ಹರಿಯು ಬಾಲ್ಯದಲ್ಲಿಯೇ ಹೀಗೆ ಅಸುರರನ್ನು ಕೊಂದು ಬಲ ರಾಮನೊಡನೆ ಸುಖದಿಂದ ವಿಹರಿಸುತ್ತಿದ್ದನು.

೧೫೯–೧೬೦. ಇಂದೀವರದದಳದಂತೆ ನೀಲಬಣ್ಣವುಳ್ಳವನಾಗಿದ್ದನು. ಪದ್ಮದ ಎಸಳಿನಂತೆ ಕಣ್ಣುಗಳಿದ್ದುವು. ಹೊಂಬಣ್ಣದ ಬಟ್ಟೆಗಳನ್ನು ಧರಿಸಿದ್ದನು. ವನಮಾಲೆಯೆಂಬ ಮಾಲೆಯನ್ನು ಧರಿಸಿದ್ದನು. ಕೌಸ್ತುಭವೆಂಬ ಮಣಿಯು ಎದೆಯಲ್ಲಿ ಶೋಭಿಸುತ್ತಿದ್ದಿತು. ಬಗೆಬಗೆಯಾದ ಹೂಗಳನ್ನು ಮುಡಿದಿದ್ದನ್ನು ಗಂಧವನ್ನು ಪೂಸಿಕೊಂಡಿದ್ದನು. ಬಗೆಬಗೆಯಾದ ಒಡವೆಗಳನ್ನು ಹಾಕಿಕೊಂಡಿದ್ದನು. ಕಿವಿಗೆ ಕುಂಡಲಗಳನ್ನು ಹಾಕಿಕೊಂಡಿದ್ದನು.

೧೬೧–೧೬೨. ತುಲಸಿಯ ಮಾಲೆಯನ್ನು ಧರಿಸಿದ್ದನು ಕಸ್ತೂರಿಯ ತಿಲಕವನ್ನು ಇಟ್ಟುಕೊಂಡಿದ್ದನು. ನುಣುಪಾಗಿಯೂ ಗುಂಗುರುಗುಂಗುರಾಗಿಯೂ ಇರುವ ಕೂದಲನ್ನು ತುರುಬನ್ನು ಕಟ್ಟಿಕೊಂಡಿದ್ದನು. ಆ ತುರುಬಿಗೆ

ಬದ್ಧೈರ್ನಾನಾವಿಧೈಃ ಪುಷ್ಪೈಃ ಬರ್ಹಿಬರ್ಹಾವತಂಸಕಃ |
ರಕ್ತಾರವಿಂದಸದೃಶಹಸ್ತಪಾದತಲಾಧರಃ ॥ ೧೬೨ ॥

ಪಕ್ಷಮಧ್ಯಗಶೀತಾಂಶುಕಲಂಕಭ್ರೂಲತಾನನಃ |
ಹಾರನೂಪುರಕೇಯೂರೈಃ ಕಟಕಾಭ್ಯಾಂ ವಿರಾಜಿತಃ ॥ ೧೬೩ ॥

ವೃಂದಾವನೇ ಮಹಾರಣ್ಯೇ ಫಲಪುಷ್ಪವಿರಾಜಿತೇ |
ರಮ್ಯಂ ವಿನಾದಯನ್ ವೇಣುಂ ತತ್ರಾಸ್ತೇ ಯದುನಂದನಃ | ॥ ೧೬೪ ॥

ಅವಧೀರಿತಕಂದರ್ಪಕೋಟಿಲಾವಣ್ಯಮಚ್ಯುತಂ |
ಸರ್ವಾ ಗೋಪಸ್ತ್ರೀಯೋ ದೃಷ್ಟ್ವಾ ಮನ್ಮಥಾಸ್ತ್ರೇಣ ಪೀಡಿತಾಃ ॥ ೧೬೫ ॥

ಪುರಾ ಮಹರ್ಷಯಸ್ಸರ್ವೇ ದಂಡಕಾರಣ್ಯವಾಸಿನಃ |
ದೃಷ್ಟ್ವಾ ರಾಮಂ ಹರಿಂ ತತ್ರ ಭೋಕ್ತುಮೈಚ್ಛನ್ ಸುವಿಗ್ರಹಂ ॥ ೧೬೬ ॥

---

ಬಗೆಬಗೆಯಾದ ಹೂವುಗಳನ್ನು ಮುಡಿದುಕೊಂಡಿದ್ದನು. ಮತ್ತು ತಲೆಗೆ ನವಿಲು ಗರಿಗಳನ್ನು ಸಿಕ್ಕಿಸಿಕೊಂಡಿದ್ದನು. ಅವನ ಹಸ್ತಗಳೂ ಕಾಲುಗಳೂ ಕೆಂಪು, ಕಮಲದಂತಿದ್ದುವು.

೧೬೩. ಶುಕ್ಲಪಕ್ಷದ ಅಷ್ಟಮಿಯ ಚಂದ್ರನಂತೆ ವಕ್ರವಾಗಿರುವ ಹುಬ್ಬುಗಳನ್ನು ಹಣೆಯಲ್ಲಿ ಹೊಂದಿದ್ದನು. ಹಾರ, ನೂಪುರ, ಕೇಯೂರ, ಕಡಗ ಕಾಲುಬಳೆಗಳನ್ನು ಹಾಕಿಕೊಂಡಿದ್ದನು.

೧೬೪. ಹಣ್ಣುಗಳಿಂದ ತುಂಬಿರುವ ಆ ವೃಂದಾವನವೆಂಬ ಮಹಾರಣ್ಯದಲ್ಲಿ ಕೊಳಲನ್ನು ಊದುತ್ತ ಆ ಯದುನಂದನನಾದ ಕೃಷ್ಣನು ಇರುತ್ತಿದ್ದನು.

೧೬೫. ಕೋಟಿ ಜನ ಮನ್ಮಥರುಗಳನ್ನು ತಿರಸ್ಕರಿಸಿದ ಲಾವಣ್ಯವನ್ನು ಹೊಂದಿದ್ದ ಆ ಅಚ್ಯುತನನ್ನು ನೋಡಿ ಅಲ್ಲಿದ್ದ ಎಲ್ಲಾ ಗೋಪಿಯರೂ ಮನ್ಮಥ ಬಾಧೆಗೊಳಗಾದರು.

೧೬೬. ಪೂರ್ವದಲ್ಲಿ ದಂಡಕಾರಣ್ಯದಲ್ಲಿ ವಾಸಿಸುತ್ತಿದ್ದ ಮಹರ್ಷಿಗಳೆಲ್ಲರೂ ವಿಷ್ಣುವಿನ ಅವತಾರವಾದ ಶ್ರೀರಾಮನನ್ನು ನೋಡಿ ಅವನನ್ನು ಅನುಭವಿಸಲು ಅಲ್ಲಿ ಅಪೇಕ್ಷಿಸಿದರು.

ತೇ ಸರ್ವೇ ಸ್ತ್ರೀತ್ವಮಾಪನ್ನಾಃ ಸಮುದ್ಭೂತಾಸ್ತು ಗೋಕುಲೇ ।
ಹರಿಂ ಸಂಪ್ರಾಪ್ಯ ಕಾಮೇನ ತತೋ ಮುಕ್ತಾ ಭವಾರ್ಣವಾತ್ ॥ ೧೬೭ ॥

ಕ್ರೋಧೇನೈವ ತಥಾ ದೈತ್ಯಾಃ ಸಮೇತ್ಯ ಮಧುಸೂದನಂ ।
ಅಗಚ್ಛನ್ನಿಧನಂ ತೇನ ಹತಾ ಮುಕ್ತಿಮವಾಪ್ನುಯುಃ ॥ ೧೬೮ ॥

ಕಾಮಕ್ರೋಧೌ ನೃಣಾಂ ಲೋಕೇ ನಿರಯಸ್ಯೈವ ಕಾರಣಂ ।
ಹರಿಂ ಸಮೇತ್ಯ ತಾವೇವ ಮುಕ್ತ್ಯೈ ಗೋಪೀಸುರದ್ವಿಷಾಂ ॥ ೧೬೯ ॥

ಕಾಮಾದ್ಭಯಾದ್ವಾ ದ್ವೇಷಾದ್ವಾ ಯೇ ಭಜಂತಿ ಜನಾರ್ದನಂ ।
ತೇ ಪ್ರಾಪ್ನುವಂತಿ ವೈಕುಂಠಂ ಕಿಂಪುನರ್ಭಕ್ತಿಯೋಗತಃ ॥ ೧೭೦ ॥

ತಸ್ಯ ವೇಣುಧ್ವನಿಂ ಶ್ರುತ್ವಾ ರಜನ್ಯಾಂ ವಲ್ಲವಾಂಗನಾಃ ।
ಶಯನಾದುತ್ಥಿತಾಸ್ಸರ್ವಾ ವಿಕೀರ್ಣಾಂಬರಮೂರ್ಧಜಾಃ ॥ ೧೭೧ ॥

---

೧೬೭. ಆ ಋಷಿಗಳೆಲ್ಲರೂ ಕೂಡ ಈಗ ಹೆಂಗಸರಾಗಿ ಗೋಕುಲದಲ್ಲಿ ಹುಟ್ಟಿದರು. ಹರಿಯನ್ನು ಕಾಮದೃಷ್ಟಿಯಿಂದ ಅನುಭವಿಸಿ ಈ ಸಂಸಾರ ಸಾಗರದಿಂದ ಮುಕ್ತಿಯನ್ನು ಹೊಂದುತ್ತಾರೆ.

೧೬೮. ಅಂತೆಯೇ ದೈತ್ಯರೂ ಕೂಡ ಕ್ರೋಧದಿಂದ ಅವನಮೇಲೆ ಬಿದ್ದು ಅವನಿಂದ ಸಾವನ್ನು ಹೊಂದಿದವರಾಗಿ ಮುಕ್ತಿಯನ್ನು ಪಡೆದರು.

೧೬೯. ಲೋಕದಲ್ಲಿ ಮನುಷ್ಯರಲ್ಲಿ ಹುಟ್ಟುವ ಕಾಮಕ್ರೋಧಗಳು ಅವರಿಗೆ ನರಕವನ್ನೇ ಒದಗಿಸುತ್ತವೆ. ಆದರೆ ಹರಿಯಲ್ಲಿ ಆ ರೀತಿಯಾಗಿ ತೋರಿಸಿದ ಕಾಮಕ್ರೋಧಗಳು ಗೋಪಿಯರಿಗೂ ದೈತ್ಯರಿಗೂ ಮುಕ್ತಿಯನ್ನೇ ಕೊಟ್ಟವು.

೧೭೦. ಕಾಮದಿಂಲಾಗಲಿ ಭಯದಿಂದಲಾಗಲಿ ದ್ವೇಷದಿಂದಲಾಗಲಿ ಯಾರು ಜನಾರ್ದನನನ್ನು ಸೇವಿಸುವರೋ ಅವರು ವೈಕುಂಠವನ್ನು ಹೊಂದುತ್ತಿರುವಾಗ ಭಕ್ತಿಯೋಗದಿಂದ ಆ ಸ್ವಾಮಿಯನ್ನು ಭಜಿಸಿದರೆ ಮುಕ್ತಿಯು ಸಿಕ್ಕುವುದರಲ್ಲಿ ಸಂದೇಹವೇನಿರುವುದು ?

೧೭೧–೧೭೨ ರಾತ್ರಿಯಲ್ಲಿ ಆ ಕೃಷ್ಣನ ಕೊಳಲಿನ ಧ್ವನಿಯನ್ನು ಕೇಳಿ ಗೋಪಸ್ತ್ರೀಯರು ಹಾಸಿಗೆಯಿಂದೆದ್ದು ಬಟ್ಟೆಗಳನ್ನೂ ಕೂದಲುಗಳನ್ನೂ

ತ್ಯಕ್ತ್ವಾ ಪತಿಂ ಸುತಾನ್ ಬಂಧೂನ್ ತ್ಯಕ್ತ್ವಾ ಲಜ್ಜಾಂ ಸ್ವಕಂ ಕುಲಂ ।
ಜಗತ್ಪತಿಂ ಸಮಾಜಗ್ಮುಃ ಕಂದರ್ಪಶರಪೀಡಿತಾಃ ॥ ೧೭೨ ॥

ಸಮೇತ್ಯ ಗೋಪ್ಯಃ ಸರ್ವಾಸ್ತು ಭುಜೈರಾಲಿಂಗ್ಯ ಕೇಶವಂ ।
ಬುಭುಜುಶ್ಚಾಧರಂ ದೇವ್ಯಃ ಸುಧಾಮೃತಮಿವಾಮರಾಃ ॥ ೧೭೩ ॥

ತಾಭಿಶ್ಚ ಸ್ತ್ರೀಭಿರಾತ್ಮೇಶಃ ಕ್ರೀಡಯಾಮಾಸ ಗೋವ್ರಜೇ ।
ತೇನಾಪಿ ತಾಃ ಸ್ತ್ರಿಯಸ್ಸರ್ವಾ ರೇಮಿರೇ ನಿರ್ಭಯಾ ವ್ರಜೇ ॥ ೧೭೪ ॥

ಇತ್ಯೇವಂ ರಮಯಾಮಾಸುರಹನ್ಯಹನಿ ಕೇಶವಂ ।
ವೃಂದಾವನೇ ಮನೋರಮ್ಯೇ ಕಾಲಿಂದೀಪುಲಿನೇ ತಥಾ ॥ ೧೭೫ ॥

---

ಕೆದರಿಕೊಂಡು ಗಂಡ, ಮಕ್ಕಳು, ಬಂಧುಗಳು ಇವರನ್ನು ಬಿಟ್ಟು ಲಜ್ಜೆಯನ್ನು ಹೊಂದದೆ ಕುಲವನ್ನು ತಿರಸ್ಕರಿಸಿ ಮನ್ಮಥನ ಬಾಧೆಗೊಳಗಾಗಿ ಆ ಜಗತ್ಪತಿಯಾದ ಕೃಷ್ಣನ ಬಳಿಗೆ ಓಡಿದರು.

೧೭೩. ಆ ಗೋಪಿಯರೆಲ್ಲರೂ ಹೀಗೆ ಬಂದು ಕೂಡಿಕೊಂಡು ಭುಜಗಳಿಂದ ಆ ಕೇಶವನನ್ನು ಆಲಂಗಿಸಿಕೊಂಡು ದೇವತೆಗಳು ಅಮೃತವನ್ನು ಕುಡಿಯುವಂತೆ ಅವನ ಅಧರಾಮೃತವನ್ನು ಪಾನಮಾಡಿದರು.

೧೭೪. ಆತ್ಮೇಶನಾದ ಆ ಕೃಷ್ಣನು ಆ ಹೆಂಗಸರೊಡನೆ ಆ ಗೊಲ್ಲದೊಡ್ಡಿಯಲ್ಲಿ ಕ್ರೀಡಿಸಿದನು. ಅವನೊಡನೆ ಆ ಗೊಲ್ಲತಿಯರೂ ಕೂಡ ಭಯವನ್ನು ಬಿಟ್ಟು ಸುಖಿಸಿದರು.

೧೭೫. ಈ ರೀತಿಯಾಗಿ ಆ ಗೋಪಿಯರು ರಮ್ಯವಾದ ವೃಂದಾವನದಲ್ಲಿಯೂ ಯಮುನಾನದಿಯ ಮರಳಿನ ಮೇಲೂ ಪ್ರತಿನಿತ್ಯವೂ ಕೇಶವನೊಡನೆ ರಮಿಸಿದರು.

॥ ಪಾರ್ವತ್ಯುವಾಚ ॥

ಧರ್ಮಸಂರಕ್ಷಣಾರ್ಥಾಯ ಜಗತ್ಯಾಮವತೀರ್ಯ ಸಃ ।
ಪರದಾರಾಽಭಿಗಮನಂ ಕಥಂ ಕುರ್ಯಾಜ್ಜನಾರ್ದನಃ ॥ ೧೭೬ ॥

॥ ರುದ್ರ ಉವಾಚ ॥

ಸ್ವಶರೀರೇ ಪರೇಷ್ವಂಗಭೇದೋ ನಾಸ್ತಿ ಶುಭಾನನೇ ।
ಸರ್ವಂ ಜಗಚ್ಚ ತಸ್ಯಾಂಗಂ ಪೃಥಗತ್ರ ನ ವಿದ್ಯತೇ ॥ ೧೭೭ ॥

ದೋಷೋತ್ರ ನಾಸ್ತಿ ಸುಭಗೇ ದೇವಸ್ಯ ಪರಮಾತ್ಮನಃ ।
ನೈಸರ್ಗಿಕಸ್ಯ ಭರ್ತೃತ್ವಾದಾತ್ಮೇಶತ್ವಾಜ್ಜಗತ್ಪತೇಃ ॥ ೧೭೮ ॥

ತಥಾಪಹೃತಪಾಪ್ಮನಃ ಸಾಮರ್ಥ್ಯಾದ್ವ್ಯಾಪಿನಃ ಪ್ರಭೋಃ ।
ಸ್ತ್ರೀಪುಂಭೇದೋ ನ ಸುಭಗೇ ಪುರುಷಸ್ಯ ಮಹಾತ್ಮನಃ ॥ ೧೭೯ ॥

---

೧೭೬. ಪಾರ್ವತಿಯು ಹೇಳಿದಳು–ಎಲೈ ಮಹಾದೇವನೆ ! ಆ ಸ್ವಾಮಿಯು ಧರ್ಮದ ರಕ್ಷಣೆಗೋಸ್ಕರವಾಗಿಯೇ ಜಗತ್ತಿನಲ್ಲಿ ಅವತಾರಮಾಡಿ ಧರ್ಮವಿರುದ್ಧವಾಗಿ ಪರರ ಹೆಂಡಿರಲ್ಲಿ ರಮಿಸುವ ಕೆಲಸವನ್ನು ಮಾಡಬಹುದೆ ?

೧೭೭. ರುದ್ರನು ಹೇಳಿದನು–ಎಲೈ ಪಾರ್ವತಿಯೆ ! ತನ್ನ ಶರೀರದೊಡನೆ ಪರರ ಅಂಗದ ಸೇರುವಿಕೆಯ ಭೇದವು ಆ ಸ್ವಾಮಿಗಿರುವುದಿಲ್ಲ. ಎಲ್ಲಾ ಜಗತ್ತೂ ಕೂಡ ಅವನ ಅಂಗವೇ ಆಗಿರುವುದು. ಜಗತ್ತಿಗೂ ಅವನಿಗೂ ಬೇರೆ ಯೆಂಬ ಭಾವವೇ ಇಲ್ಲ. ಆದ್ದರಿಂದ ಧರ್ಮವಿರುದ್ಧವಲ್ಲ.

೧೭೮. ಎಲೈ ಪಾರ್ವತಿಯೆ ! ಈ ವಿಷಯದಲ್ಲಿ ಪರಮಾತ್ಮನಾದ ಆ ಸ್ವಾಮಿಗೆ ದೋಷವೇನೂ ಇರುವುದಿಲ್ಲ. ಆ ಸ್ವಾಮಿಯು ಪ್ರಪಂಚಕ್ಕೆ ಸ್ವಭಾವ ವಾಗಿಯೇ ಪತಿಯು. ಮತ್ತು ಆತ್ಮನಿಗೆ ಒಡೆಯನು.

೧೭೯. ಅಲ್ಲದೆ ಆ ಸ್ವಾಮಿಯು ಪಾಪವಿಲ್ಲದವನು. ಸರ್ವವ್ಯಾಪಿಯಾದ ಪ್ರಭುವು. ಆ ಸ್ವಾಮಿಗೆ ಗಂಡೆಂದಾಗಲಿ ಹೆಣ್ಣೆಂದಾಗಲಿ ಲಿಂಗಭೇದವಿರುವುದಿಲ್ಲ. ಮಹಾತ್ಮನಾದವನು.

॥ ವಸಿಷ್ಠ ಉವಾಚ ॥

ಏವಮುಕ್ತ್ವಾ ತು ಗಿರಿಜಾಂ ರುದ್ರಃ ಶ್ರೀತ್ರಿಪುರಾನ್ತಕಃ ।
ಕೃಷ್ಣಸ್ಯ ಶೇಷಂ ಚರಿತಮಾಖ್ಯಾತುಂ ಸಂಪ್ರಚಕ್ರಮೇ ॥ ೧೮೦ ॥

॥ ಶ್ರೀ ರುದ್ರ ಉವಾಚ॥

ಶರತ್ಕಾಲೇ ತು ಸಂಪ್ರಾಪ್ತೇ ನಂದಗೋಪಪುರೋಗಮಾಃ ।
ಗೋಪಾ ಮಹೋತ್ಸವಂ ಕರ್ತುಮಾರಬ್ಧಾಸ್ತ್ರಿದಶಾಂ ಪತೇಃ ॥ ೧೮೧ ॥

ತದುತ್ಸವಂ ತು ಗೋವಿಂದೋ ನಿವಾರ್ಯಾಥ ಶತಕ್ರತೋಃ ।
ಗೋವರ್ಧನಾದ್ರಿರಾಜಸ್ಯ ಕಾರಯಾಮಾಸ ವೀರ್ಯವಾನ್ ॥ ೧೮೨ ॥

ತತಃ ಕ್ರುದ್ಧಸ್ಸಹಸ್ರಾಕ್ಷೋ ನಂದಗೋಪಸ್ಯ ಗೋವ್ರಜೇ ।
ವವರ್ಷ ಚ ಮಹಾವೃಷ್ಟಿಂ ಸಪ್ತರಾತ್ರಂ ನಿರಂತರಂ ॥ ೧೮೩ ॥

---

೧೮೦. ವಸಿಷ್ಠನು ಹೇಳಿದನು–ತ್ರಿಪುರಾಂತಕನಾದ ರುದ್ರನು ಗಿರಿಜೆಗೆ ಇಷ್ಟನ್ನು ಹೇಳಿ ಆ ಕೃಷ್ಣನ ಚರಿತ್ರೆಯನ್ನು ಮುಂದಕ್ಕೆ ಹೇಳುವುದಕ್ಕೆ ಮೊದಲು ಮಾಡಿದನು.

೧೮೧. ಶ್ರೀರುದ್ರನು ಹೇಳಿದನು–ಶರತ್ಕಾಲವು ಬಂದ ಮೇಲೆ ಆ ಗೋಪರೆಲ್ಲರೂ ಸೇರಿ ಇಂದ್ರನಿಗೆ ಮಹೋತ್ಸವವನ್ನು ಮಾಡಲು ಮೊದಲು ಮಾಡಿದರು.

೧೮೨. ಗೋವಿಂದನು ಆ ಇಂದ್ರ ಮಹೋತ್ಸವವನ್ನು ತಡೆದು ಪರ್ವತ ರಾಜನಾದ ಗೋವರ್ಧನನಿಗೆ ಉತ್ಸವವನ್ನು ಮಾಡಿಸಿದನು.

೧೮೩. ಆಗ ಕೋಪಗೊಂಡ ಇಂದ್ರನು ಆ ನಂದಗೋಪನ ಹಳ್ಳಿಯ ಮೇಲೆ ಏಳು ರಾತ್ರಿಗಳವರೆಗೂ ಬಿಡದೆ ಮಳೆಯನ್ನು ಸುರಿಸಿದನು.

ಗೋವರ್ಧನಂ ಸಮುತ್ಪಾಟ್ಯ ಮಹಾಶೈಲಂ ಜನಾರ್ದನಃ |
ತೇಷಾಂ ಸಂರಕ್ಷಣಾರ್ಥಾಯ ಧಾರಯಾಮಾಸ ಲೀಲಯಾ || ೧೮೪ ||

ತಚ್ಛಾಯಾಯಾಂ ಗಿರೇಃ ಪ್ರಾಪ್ಯ ಗೋಪಾ ಗೋಪ್ಯಶ್ಚ ಸುವ್ರತೇ |
ಅವಸಂಶ್ಚ ಸುಖೇನೈವ ಹರ್ಮ್ಯಾಂತರಗತಾ ಇವ || ೧೮೫ ||

ತತಃ ಸ ತು ಸಹಸ್ರಾಕ್ಷೋ ಭೀತಃ ಸಂಭ್ರಾಂತಚೇತಸಾ |
ವಾರಯಾಮಾಸ ತದ್ವರ್ಷಂ ಯಯೌ ನಂದಸ್ಯ ತದ್ವ್ರಜಂ || ೧೮೬ ||

ಕೃಷ್ಣೋಽಪಿ ತಂ ಮಹಾಶೈಲಂ ಯಥಾಪೂರ್ವಂ ನ್ಯವೇಶಯತ್ |
ಗೋಪವೃದ್ಧಾಸ್ತು ತೇ ಸರ್ವೇ ನಂದಗೋಪಪುರೋಗಮಾಃ || ೧೮೭ ||

ಪರಿಪೂಜ್ಯ ಚ ಗೋವಿಂದಂ ಪರಂ ವಿಸ್ಮಯಮಾಯಯುಃ |
ತತಃ ಶತಕ್ರತುರ್ದೇವಂ ಸಮೇತ್ಯ ಮಧುಸೂದನಂ !
ತುಷ್ಟಾವ ಪ್ರಾಂಜಲಿರ್ಭೂತ್ವಾ ಹರ್ಷಗದ್ಗದಯಾ ಗಿರಾ || ೧೮೮ ||

---

೧೮೪. ಆಗ ಕೃಷ್ಣನು ಅವರೆಲ್ಲರನ್ನೂ ಕಾಪಾಡಲು ಆ ಗೋವರ್ಧನ ಪರ್ವತವನ್ನೇ ಕಿತ್ತು ಸುಖವಾಗಿ ಎತ್ತಿಹಿಡಿದು ಮಳೆಯಿಂದ ಅವರನ್ನೆಲ್ಲಾ ಕಾಪಾಡಿದನು.

೧೮೫. ಆ ಪರ್ವತದ ಮರೆಯನ್ನು ಹೊಂದಿ ಗೋಪರೂ ಗೋಪಿಯರೂ ಬೇರೆಯ ಮನೆಗೆ ಹೋಗಿ ವಾಸಿಸುವವರಂತೆ ಸುಖವಾಗಿದ್ದರು.

೧೮೬. ಆಗ ಸಹಸ್ರಾಕ್ಷನಾದ ಇಂದ್ರನು ಹೆದರಿದವನಾಗಿ ಮಳೆಯನ್ನು ನಿಲ್ಲಿಸಿ ಆ ಗೋಪರ ದೊಡ್ಡಿಗೆ ಹೋದನು.

೧೮೭–೧೮೮. ಆಗ ಆ ಕೃಷ್ಣನು ಆ ಬೆಟ್ಟವನ್ನು ಮೊದಲಿನಂತೆ ಇಟ್ಟು ಬಿಟ್ಟನು. ಅನಂತರ ಗೋಪವೃದ್ಧರು ಆ ಕೃಷ್ಣನನ್ನು ಗೌರವಿಸಿ ಆಲಿಂಗಿಸಿ ಕೊಂಡು ಬಹು ಆಶ್ಚರ್ಯಪಟ್ಟರು. ಶತಕ್ರತುವಾದ ಇಂದ್ರನು ಸ್ವಾಮಿಯಾದ ಕೃಷ್ಣನ ಬಳಿಗೆ ಬಂದು ಕೈಮುಗಿದುಕೊಂಡು ಹರ್ಷದಿಂದ ಧ್ವನಿಕುಗ್ಗಿದವನಾಗಿ ಇಂತೆಂದು ಸ್ತುತಿಸಿದನು.

|| ಇಂದ್ರ ಉವಾಚ ||

ನಮಸ್ತೇ ಪುಂಡರೀಕಾಕ್ಷ ಸರ್ವಜ್ಞಾಮಿತವಿಕ್ರಮ |
ತ್ರಿಗುಣಾತೀತ ಸರ್ವೇಶ ವಿಶ್ವಾತ್ಮಂಸ್ತು ನಮೋಸ್ತು ತೇ || ೧೮೯ ||

ತ್ವಂ ಯಜ್ಞಸ್ತ್ವಂ ವಷಟ್ಕಾರಃ ತ್ವಮೋಂಕಾರಃ ಕ್ರತುರ್ಹವಿಃ |
ತ್ವಮೇವ ಸರ್ವದೇವಾನಾಂ ಪಿತಾ ಮಾತಾ ಚ ಕೇಶವ || ೧೯೦ ||

ಅಗ್ರೇ ಹಿರಣ್ಯಗರ್ಭಸ್ತ್ವಂ ಭೂತಸ್ಯ ಸಮವರ್ತತ |
ತ್ವಮೇವೈಕಃ ಪತಿರಸಿ ಪುರುಷಸ್ತ್ವಂ ಹಿರಣ್ಮಯಃ || ೧೯೧ ||

ಪೃಥಿವೀಂ ದ್ಯಾಮಿಮಾಂ ದೇವ ತ್ವಮೇವ ಧೃತವಾನಸಿ |
ಆತ್ಮದಃ ಫಲದೋ ಯಶ್ಚ ವಿಶ್ವಸ್ಯ ಜಗದೀಶ್ವರಃ || ೧೯೨ ||

---

೧೮೯. ಇಂದ್ರನು ಹೇಳಿದನು–ಪುಂಡರೀಕದಂತೆ ಕಣ್ಣುಳ್ಳವನೇ ! ನಿನಗೆ ನಮಸ್ಕಾರವು. ಸರ್ವಜ್ಞನೇ ! ನಿನಗೆ ನಮಸ್ಕಾರವು ಬಹು ಪರಾಕ್ರಮವುಳ್ಳವನೇ ! ನಿನಗೆ ನಮಸ್ಕಾರವು ಸತ್ವರಜಸ್ತಮೋಗುಣಗಳಿಗಿಂತಲೂ ದೂರನಾದವನೇ ! ನಿನಗೆ ನಮಸ್ಕಾರವು. ವಿಶ್ವಾತ್ಮನೇ ! ನಿನಗೆ ನಮಸ್ಕಾರವು.

೧೯೦. ನೀನೇ ಯಜ್ಞವು. ನೀನೇ ವಷಟ್ಕಾರವು. ನೀನೇ ಓಂಕಾರವು. ನೀನೇ ಕ್ರತುವು. ನೀನೇ ಹವಿಸ್ಸು. ನೀನೇ ಎಲ್ಲಾ ದೇವತೆಗಳಿಗೂ ತಾಯಿ ತಂದೆಯು.

೧೯೧. ಎಲ್ಲ ಭೂತಗಳಿಗೂ ಮೊದಲು ನೀನೇ ಬ್ರಹ್ಮನಾದೆ. ನೀನು ಒಬ್ಬನೇ ಎಲ್ಲಕ್ಕೂ ಒಡೆಯನು. ಹಿರಣ್ಮಯನಾದ ಪುರುಷನು.

೧೯೨. ಎಲೈ ದೇವನೆ ! ಈ ಭೂಮ್ಯಾಕಾಶಗಳನ್ನು ನೀನೇ ಧರಿಸಿದ್ದೀಯೆ. ಎಲ್ಲಕ್ಕೂ ನೀನೇ ಆತ್ಮವನ್ನು ಕೊಡುವವನು. ಫಲವನ್ನು ಕೊಡುವವನು. ಜಗತ್ತಿಗೆಲ್ಲಾ ಕೇಳಿದುದನ್ನು ಕೊಡುತ್ತೀಯೆ.

ಅವಾಪ್ತಂ ತತ್ರ ತ್ರಿದಶೈಃ ಪ್ರಕಾಶಂ ಜಗತಾಂ ಪತೇ ।
ಅಮೃತಂ ಚೈವ ಮೃತ್ಯುಶ್ಚ ಚ್ಛಾಯಯಾ ತವ ಜಗತ್ಪತೇ || ೧೯೩ ||

ತಸ್ಮೈ ದೇವಾಯ ಭವತೇ ವಿಧೇಮ ಹವಿಷಾ ವಯಂ ।
ಹೇಮವಂತ ಇಮೇ ಯಸ್ಯ ತೇ ಮಹಿತ್ವಾ ಹಿರಣ್ಮಯಾಃ || ೧೯೪ ||

ಸಮುದ್ರಾ ರಸಯಾ ಯಸ್ಯ ಪ್ರವಾಹಸ್ತಸ್ಯ ಕೇಶವ ।
ಇಮಾ ದಿಶಃ ಪ್ರತಿದಿಶೋ ಬಾಹುರ್ಯಸ್ಯ ತವಾವ್ಯಯ || ೧೯೫ ||

ತಸ್ಮೈ ದೇವಾಯ ಭವತೇ ವಿಧೇಯ ಹವಿಷಾ ವಯಂ ।
ಯೇನ ತ್ವಯಾ ಸಮಾರುದ್ಧಾ ಪೃಥಿವೀ ವರ್ಧಿತಾ ಪುನಃ || ೧೯೬ ||

---

೧೯೩. ಎಲೈ ಜಗತ್ಪತಿಯೆ ! ದೇವತೆಗಳೆಲ್ಲರೂ ನಿನ್ನಿಂದಲೇ ಪ್ರಕಾಶಿಸುತ್ತಿದ್ದಾರೆ. ಸಾಯದಿರುವಿಕೆಯಾಗಲಿ ಸಾಯುವಿಕೆಯಾಗಲಿ ಅವೆಲ್ಲವೂ ನಿನ್ನ ಛಾಯೆಯು (ನಿನ್ನ ಇಷ್ಟವು).

೧೯೪. ಸರ್ವೇಶ್ವರನಾದ ನಿನಗೆ ಯಾಗದಲ್ಲಿ ಹವಿಸ್ಸನ್ನು ಕೊಟ್ಟು ಪೂಜಿಸುತ್ತೇವೆ. ಚಿನ್ನದಿಂದ ಕೂಡಿರುವ ನಿನ್ನ ದೇಹವಾವುದಿದೆಯೋ ಅದೇ ಈ ಸುವರ್ಣದಿಂದ ಕೂಡಿದ ಭೂಮಿಯಾಗಿದೆ. ಹಿರಣ್ಮಯವಾಗಿರುವ ಈ ಹಿಮವತ್ಪರ್ವತವೇ ನಿನ್ನ ಮಹಿಮೆಗೆ ಗುರುತಾಗಿದೆ.

೧೯೫. ಸಮುದ್ರದಿಂದ ಕೂಡಿದ ಈ ಭೂಮಿಯನ್ನು ನೀನೆ ಸೃಷ್ಟಿಸಿದೆ. ಅದು ನಿನ್ನ ಪ್ರವಾಹವು. ಈ ದಿಕ್ಕುಗಳು, ವಿದಿಕ್ಕುಗಳು ನಿನ್ನ ತೋಳಿನ ರೂಪವಾಗಿವೆ.

೧೯೬. ಅಂತಹ ಸ್ವಾಮಿಯಾದ ನಿನಗೆ ಹವಿಸ್ಸನ್ನು ಕೊಟ್ಟು ಪೂಜೆಮಾಡುತ್ತೇವೆ. ಎಲೈ ದೇವನೆ ! ಭೂಮಿಯೆಲ್ಲವನ್ನೂ ನೀನು ಆವರಿಸಿಕೊಂಡಿದ್ದು ಅನಂತರ ಹೆಚ್ಚುವಂತೆ ಮಾಡಿದೆ. ಮತ್ತು ಹೆಚ್ಚಿಸಿದೆ. ದುಷ್ಟರಿಂದ ಆವೃತವಾಗಿ ಈ ಭೂಮಿಯು ನಾಶವಾಗಿರಲು ನೀನು ಮತ್ತೆ ಎತ್ತಿ ಹೆಚ್ಚುವಂತೆ ಮಾಡಿದೆ.

ಸ್ವರ್ಲೋಕಸ್ತಂಭಿತೋ ಯೇನ ತ್ವಯಾ ಬ್ರಹ್ಮನ್ಮಹೇಶ್ವರ |
ತ್ವಮಂತರಿಕ್ಷೇ ರಜಸೋ ವಿಮಾನಃ ಸರ್ವಗೋಽವ್ಯಯಃ ॥ ೧೯೭ ॥

ತಸ್ಮೈ ದೇವಾಯ ಭವತೇ ವಿಧೇಮ ಹವಿಷಾ ವಯಂ |
ಯಂ ಕ್ರಂದಸೀ ರಾಜಮಾನೇ ತಸ್ತಭಾನೇ ಗುಣಾನ್ವಿತೇ ॥ ೧೯೮ ॥

ಅಭ್ಯೈಕ್ಷೇತಾಂ ಚ ಮನಸಾ ಅವಶ್ಯಂ ಶ್ರೀಶ್ಚ ಸರ್ವದಾ |
ಯತ್ರಾಸ್ತಿ ಸೂರ ಉದಿತೋ ವಿಭಾತಿ ಪರಮೇ ಪದೇ ॥ ೧೯೯ ॥

ತಸ್ಮೈ ದೇವಾಯ ಭವತೇ ವಿಧೇಮ ಹವಿಷಾ ವಯಂ |
ಯದಾಪೋ ಬೃಹತೀರ್ಬ್ರಹ್ಮ ವಿಶ್ವಮಾಯರ್ನ ಜನಾರ್ದನಃ ॥ ೨೦೦ ॥

ಗರ್ಭಂ ದಧಾನಾಃ ಸರ್ಗೇತ್ರ ಜನಯನ್ತೀರಪೌಘಕೃತ್ |
ಸಮವರ್ತತ ದೇವಾನಾಮಸುರೇಕೋಽವ್ಯಯೋ ವಿಭುಃ ॥ ೨೦೧ ॥

---

೧೯೭–೧೯೮. ಯಾವ ನಿನ್ನಿಂದ ಸ್ವರ್ಗಲೋಕವು ಮೇಲೆಯೇ ಹಿಡಿಯಲ್ಪಟ್ಟಿದೆಯೋ, ಯಾವ ನೀನೇ ಅಂತರಿಕ್ಷದಲ್ಲಿದ್ದುಕೊಂಡು ರಜೋರೂಪವಾದ ವಿಮಾನವಾಗಿದ್ದುಕೊಂಡು ಕಾಣಿಸಿಕೊಳ್ಳುತ್ತಿಯೋ, ಅಂತಹ ನಿನ್ನನ್ನು ಹವಿಸ್ಸನ್ನು ಕೊಟ್ಟು ಪೂಜಿಸುತ್ತೇನೆ.

೧೯೯–೨೦೭. ಅನೇಕ ಗುಣಗಳಿಂದ ಕೂಡಿರುವ ಆ ವಿಷ್ಣುವು ಪ್ರಕಾಶಿಸುತ್ತಿರುವಾಗ ಯಾತಕ್ಕೆ ವ್ಯಥೆಪಡುತ್ತೀಯೆ ? ಅವನನ್ನು ಮನಸ್ಸಿನಿಂದ ನಿಶ್ಚಲವಾಗಿ ಸ್ಮರಿಸು. ಆಗ ಖಂಡಿತವಾಗಿಯೂ ನಿನಗೆ ಲಕ್ಷ್ಮಿಯು ಸ್ಥಿರವಾಗಿ ಸಿಕ್ಕುತ್ತದೆ. ಉದಯಿಸಿ ಪ್ರಕಾಶಿಸುತ್ತಿರುವ ಸೂರ್ಯನು ಯಾವನ ಸ್ಥಾನದಲ್ಲಿದ್ದುಕೊಂಡು ಪ್ರಕಾಶಿಸುತ್ತಾನೆಯೋ ಅಂತಹ ದೇವನಾದ ವಿಷ್ಣುವನ್ನು ಹವಿಸ್ಸನ್ನು ಹೋಮಮಾಡಿ ಪೂಜಿಸುತ್ತೇನೆ. ಯಾವ ಜನಾರ್ದನನು ಪ್ರಪಂಚವೆಲ್ಲವನ್ನೂ ನೀರಿನ ಮಯವಾಗಿರುವಂತೆ ಬ್ರಹ್ಮಮಯವಾದುದನ್ನಾಗಿ ಮಾಡಿರುವನೋ ಮತ್ತು ಈ ಸೃಷ್ಟಿಯಲ್ಲಿ ತಾನು ಸೇರಿಕೊಂಡು ಸೃಷ್ಟಿಯನ್ನು ಹೊಂದುತ್ತ

ತಸ್ಮೈ ದೇವಾಯ ಭವತೇ ವಿಧೇಮ ಹವಿಷಾ ವಯಂ ।
ಯ ಆಪೋ ಮಹಿನಾ ದಕ್ಷಂ ಪರ್ಯಪಶ್ಯತ್ ಪ್ರಜಾಪತಿಂ ॥ ೨೦೨ ॥

ಯಜ್ಞಂ ದಧಾನಾಸ್ತತ್ರಾದೌ ಜನಯಂತೀರ್ಹವಿಃ ಪುರ್ವಾ ।
ಯೋ ದೇವೇಷ್ವೇಕ ಏವಾಸೀದಧಿದೇವಃ ಪರಾತ್ಪರಃ ॥ ೨೦೩ ॥

ತಸ್ಮೈ ದೇವಾಯ ಭವತೇ ವಿಧೇಮ ಹವಿಷಾ ವಯಂ ।
ಮಾ ನೋ ಹಿಂಸೀಜ್ಜನಿತಾ ಯಃ ಪೃಥಿವ್ಯಾ ಅವ್ಯಯಃ ಪುರ್ವಾ ॥ ೨೦೪ ॥

ಯೋ ವಾ ದಿವಂ ಸತ್ಯಧರ್ವಾ ಜಜಾನಾವ್ಯಯ ಈಶ್ವರಃ ।
ಯಶ್ಚಂದ್ರಾ ಬೃಹತೀರಪೋ ಜಜಾನ ಸಕಲಂ ಜಗತ್ ॥ ೨೦೫ ॥

ತಸ್ಮೈ ದೇವಾಯ ಭವತೇ ವಿಧೇಮ ಹವಿಷಾ ವಯಂ ।
ಏತಾನಿ ವಿಶ್ವಜಾತಾನಿ ಬಭೂವ ಪರಿ ತಾ ಪ್ರಭೋ ॥ ೨೦೬ ॥

---

ಆ ಪ್ರಾಣಿಗಳ ಪಾಪವನ್ನು ನಾಶಮಾಡುವನೋ ಯಾವನು ದೇವತೆಗಳಿಗೆಲ್ಲಾ ನಾಶರಹಿತವಾದ ಜೀವದಂತಿರುವನೋ ಅಂತಹ ಸ್ವಾಮಿಗೆ ಹವಿಸ್ಸನ್ನು ಕೊಟ್ಟು ಪೂಜಿಸುತ್ತೇನೆ. ಯಾವ ಸ್ವಾಮಿಯು ನೀರನ್ನೂ ಭೂಮಿಯನ್ನೂ ಸೃಷ್ಟಿಸಿ ಶಕ್ತ ನಾದ ಪ್ರಜಾಪತಿಯನ್ನು ಸೃಷ್ಟಿಸಿದನೋ ಅವನಿಗೆ ನಮಸ್ಕಾರವು. ಮತ್ತು ಯಜ್ಞ ವನ್ನು ಮಾಡುತ್ತ ಮೊದಲು ಹವಿಸ್ಸನ್ನು ಸೃಷ್ಟಿಸಿದನೋ ಅಂತಹ ಸ್ವಾಮಿಗೆ ನಮ ಸ್ಕಾರವು. ಯಾವನು ದೇವತೆಗಳಿಗೆಲ್ಲಾ ಮೊದಲನೆಯವನಾಗಿ ಪರಾತ್ಪರನಾಗಿರು ವನೋ ಅಂತಹ ಸ್ವಾಮಿಯನ್ನು ಹವಿಸ್ಸಿನಿಂದ ತೃಪ್ತಿಪಡಿಸಿ ಪೂಜಿಸುತ್ತೇನೆ. ಭೂಮಿಯನ್ನು ಸೃಷ್ಟಿಸಿದ ಅವ್ಯಯನಾದ ಪುರುಷನೇ! ನಮ್ಮನ್ನು ಹಿಂಸಿಸಬೇಡ. ಯಾವನು ಸತ್ಯವನ್ನೇ ಮುಂದಿಟ್ಟುಕೊಂಡು ಸ್ವರ್ಗವನ್ನೂ ಸೃಷ್ಟಿಸಿದನೋ ಯಾವನು ಚಂದ್ರನನ್ನೂ ಬಹುವಾದ ನೀರನ್ನೂ ಸೃಷ್ಟಿಸಿದನೋ ಮತ್ತು ಸಮಸ್ತ ಲೋಕಗಳನ್ನೂ ಸೃಷ್ಟಿಸಿದನೋ ಅಂತಹ ಸ್ವಾಮಿಗೆ ಹವಿಸ್ಸನ್ನು ಕೊಟ್ಟು ಪೂಜಿ ಸುತ್ತೇನೆ. ಎಲೈ ಸ್ವಾಮಿಯೇ! ನಿನ್ನಿಂದಲೇ ಈ ಎಲ್ಲಾ ಭೂತಗಳೂ ಕೂಡ

ತ್ವದನ್ಯೋ ನ ಪ್ರಜಾಧ್ಯಕ್ಷ ಭವಿಷ್ಯದ್ಭೂತಭಾವನ ।
ಯಜಾಮಸ್ತ್ವಾಂ ಚ ಯತ್ಕಾಮಾಃ ತನ್ನೋ ಅಸ್ತು ಸಮಾಸತಃ ॥ ೨೦೭ ॥

ರಯೀಣಾಂ ಪತಯಃ ಸ್ಯಾಮ ತವ ಕಾರುಣ್ಯವೀಕ್ಷಣಾತ್ ।
ಹಿರಣ್ಮಯಾಖ್ಯಃ ಪುರುಷೋ ಹಿರಣ್ಯಶ್ಮಶ್ರುಕೇಶಿವಾನ್ ॥ ೨೦೮ ॥

ಆಪ್ರಣಖಾತ್ಸರ್ವಂ ಹಿರಣ್ಯಂ ಸವಿತಾ ಚ ಹಿರಣ್ಯಭಾಕ್ ।
ಅಸೌ ಸರ್ವಗತೋ ಬ್ರಹ್ಮಾ ಯಸ್ತ್ವಾದಿತ್ಯೇ ವ್ಯವಸ್ಥಿತಃ ॥ ೨೦೯ ॥

ತದ್ವೈ ದೇವಸ್ಯ ಸವಿತುಃ ವರೇಣ್ಯಂ ಭರ್ಗ ಉತ್ತಮಃ ।
ಸದಾ ಧೀಮಹಿ ತೇ ರೂಪಂ ಧಿಯೋ ಯೋ ನಃ ಪ್ರಭಾತಿ ಹಿ ॥ ೨೧೦ ॥

---

ಎಲ್ಲಾ ಕಡೆಯೂ ಇರುವಂತೆ ಸೃಷ್ಟಿಸಲ್ಪಟ್ಟವು. ಭೂತ ಭವಿಷ್ಯದ್ವರ್ತಮಾನ ಗಳಲ್ಲಿ ಇರುವ ಎಲೈ ಸ್ವಾಮಿಯೇ! ನೀನೇ ಪ್ರಜೆಗಳಿಗೆ ಒಡೆಯನು. ನಿನ್ನನ್ನು ಬಿಟ್ಟರೆ ಬೇರೊಬ್ಬನಿಲ್ಲ. ಯಾವ ಯಾವ ಅಪೇಕ್ಷೆಗಳನ್ನು ಹೊಂದಿ ನಿನ್ನನ್ನು ಪೂಜಿಸುತ್ತೇವೆಯೋ ಅವೆಲ್ಲವೂ ನಮಗೆ ಯಾವಾಗಲೂ ಉಂಟಾಗಲಿ

೨೦೮. ಎಲೈ ಸ್ವಾಮಿಯೆ! ನಿನ್ನ ಕೃಪೆಯಿಂದ ನಾವು ಹಣಕ್ಕೆಲ್ಲಾ ಒಡೆಯರಾಗಿ ಸಂಪತ್ತನ್ನು ಹೊಂದುತ್ತೇವೆ. ನೀನೇ ಚಿನ್ನದ ರೂಪನಾದ ಮನುಷ್ಯನು. ಚಿನ್ನದ ಕೂದಲಿನ ಗಡ್ಡಗಳೂ ತಲೆಗೂದಲುಗಳೂ ಇವೆ.

೨೦೯. ನಿನ್ನ ಉಗುರು ಮೊದಲುಗೊಂಡು ಎಲ್ಲವೂ ಚಿನ್ನವೇನೇ. ನಿನ್ನಿಂದ ಉತ್ಪನ್ನವಾಗಿ ಕಾಣುತ್ತಿರುವ ಈ ಸೂರ್ಯನು ಸುವರ್ಣವನ್ನೇ ಹೊಂದಿರುವನು. ನಿನ್ನ ರೂಪವಾದ ಆ ಬ್ರಹ್ಮವೂ ಎಲ್ಲ ಕಡೆಯಲ್ಲಿ ಇರುವುದು. ಆ ಬ್ರಹ್ಮನೇನೇ ಆದಿತ್ಯನಲ್ಲಿಯೂ ಇರುವನು.

೨೧೦. ಆ ಬ್ರಹ್ಮನೇ ಸ್ವಾಮಿಯಾದ ಸೂರ್ಯನಲ್ಲಿರುವ ಉತ್ತಮವಾದ ತೇಜಸ್ಸು. ಆ ಸೂರ್ಯನಲ್ಲಿರುವ ಆ ನಿನ್ನ ತೇಜಸ್ಸು ನಮ್ಮ ಬುದ್ಧಿಯನ್ನು ಪ್ರಕಾಶ ಪಡಿಸುತ್ತದೆ. ಅಂತಹ ನಿನ್ನ ರೂಪವನ್ನು ಯಾವಾಗಲೂ ಧ್ಯಾನಿಸುತ್ತೇನೆ.

ನಮಸ್ತೇ ಪುಂಡರೀಕಾಕ್ಷ ಶ್ರೀಶ ಸರ್ವೇಶ ಕೇಶವ |
ವೇದಾಂತವೇದ್ಯ ಯಜ್ಞೇಶ ಯಜ್ಞರೂಪ ನಮೋಸ್ತು ತೇ ॥ ೨೧೧ ॥

ನಮಸ್ತೇ ವಾಸುದೇವಾಯ ಗೋಪವೇಷಾಯ ತೇ ನಮಃ |
ತ್ವತ್ಸರ್ವಧ್ವಂಸನಾದೇವ ಅಪರಾಧಂ ಮಯಾ ಕೃತಂ ॥ ೨೧೨ ॥

ತತ್ ಕ್ಷಮ್ಯತಾಂ ಜಗನ್ನಾಥ ಘೃಣಾಬ್ಧೇ ಪುರುಷೋತ್ತಮ ।
ಅಲ್ಪೇನೈವ ಹಿ ಕಾಲೇನ ಜಹಿ ಕಂಸಂ ದುರಾಸದಂ
ದೇವಾನಾಂ ಚ ಹಿತಂ ಕೃತ್ವಾ ಸುಖೇ ಸ್ಥಾಪಯ ಮೇದಿನೀಂ ॥ ೨೧೩ ॥

॥ ಮಹಾದೇವ ಉವಾಚ ॥

ಇತಿ ಸಂಸ್ತುತ್ಯ ಗೋವಿಂದಂ ಸರ್ವದೇವೇಶ್ವರೋ ಹರಿಃ |
ಸುಧಾಮೃತೇನಾಭಿಷಿಚ್ಯ ದಿವ್ಯಾಂಬರ ವಿಭೂಷಣೈಃ | ॥ ೨೧೪ ॥

---

೨೧೧. ಎಲೈ ಪುಂಡರೀಕಾಕ್ಷನೆ! ನಿನಗೆ ನಮಸ್ಕಾರವು. ಲಕ್ಷ್ಮೀಪತಿಯೇ! ನಿನಗೆ ನಮಸ್ಕಾರವು. ಸರ್ವಕ್ಕೂ ಒಡೆಯನೆ! ನಿನಗೆ ನಮಸ್ಕಾರವು. ಎಲೈ ಕೇಶವನೆ! ನಿನಗೆ ನಮಸ್ಕಾರವು. ವೇದಾಂತದಿಂದ ತಿಳಿಯಲು ಸಾಧ್ಯನಾದವನೇ! ನಿನಗೆ ನಮಸ್ಕಾರವು. ಯಜ್ಞಕ್ಕೆ ಒಡೆಯನೆ! ನಿನಗೆ ನಮಸ್ಕಾರವು. ಯಜ್ಞರೂಪನೇ! ನಿನಗೆ ನಮಸ್ಕಾರವು.

೨೧೨. ಗೋಪರ ವೇಷವನ್ನು ಧರಿಸಿರುವ ವಾಸುದೇವನೆ! ನಿನಗೆ ನಮಸ್ಕಾರವು. ಎಲೈ ಸ್ವಾಮಿಯೆ! ನಿನ್ನ ಸಂಬಂಧವಾದುವುಗಳನ್ನು ನಾಶಮಾಡಿದುದರಿಂದ ನಿನಗೆ ನಾನು ಅಪರಾಧವನ್ನು ಮಾಡಿದೆನು.

೨೧೩. ಕರುಣಾಸಾಗರನಾದ ಸ್ವಾಮಿಯೇ! ಅದನ್ನು ಕ್ಷಮಿಸು. ಜಗನ್ನಾಥನೇ! ಪುರುಷೋತ್ತಮನೇ! ಸ್ವಲ್ಪದಿವಸದಲ್ಲಿಯೇ ದುಷ್ಟನಾದ ಕಂಸನನ್ನು ಕೊಂದುಹಾಕು. ದೇವತೆಗಳಿಗೂ ಸುಖವನ್ನುಂಟುಮಾಡಿ ಭೂಮಿಯನ್ನೂ ಸುಖವಾಗಿರುವಂತೆ ಮಾಡು.

೨೧೪–೨೨೩. ಮಹಾದೇವನು ಹೇಳಿದನು–ಎಲ್ಲಾ ದೇವತೆಗಳಿಗೂ ಒಡೆಯನಾದ ಇಂದ್ರನು ಹೀಗೆ ಕೃಷ್ಣನನ್ನು ಸ್ತುತಿಸಿ ಅಮೃತದಿಂದ ಅಭಿಷೇಕಮಾಡಿ

ಅರ್ಚಯಿತ್ವಾ ತು ದೇವೇಶಂ ಜಗಾಮ ತ್ರಿದಿವಂ ಪುನಃ ।
ಗೋಪವೃದ್ಧಾಶ್ಚ ಗೋಪ್ಯಶ್ಚ ದೃಷ್ಟ್ವಾ ತತ್ರ ಶತಕ್ರತುಂ ॥ ೨೧೫ ॥

ತೇನ ಸಂಪೂಜಿತಾಶ್ಚೈವ ಪ್ರಹರ್ಷಮತುಲಂ ಯಯುಃ ।
ರಾಮಕೃಷ್ಣೌ ಮಹಾವೀರ್ಯೌ ದಿವ್ಯಾಂಬರವಿಭೂಷಿತೌ ॥ ೨೧೬ ॥

ನಂದಸ್ಯ ಗೋವ್ರಜೇ ರಮ್ಯೇ ಗೋವತ್ಸಾನ್ ಸಂರರಕ್ಷತುಃ ।
ಏತಸ್ಮಿನ್ನಂತರೇ ದೇವಿ ನಾರದೋ ಮುನಿಸತ್ತಮಃ ॥ ೨೧೭ ॥

ಸಹಸಾ ಮಥುರಾಂ ಗತ್ವಾ ಕಂಸಸ್ಯಾಂತಿಕಮಾವಿಶತ್ ।
ರಾಜ್ಞಾ ಸಂಪೂಜಿತಸ್ತತ್ರ ಸಮಾಸೀನಃ ಶುಭಾಸನೇ ॥ ೨೧೮ ॥

ಸರ್ವಂ ವಿಜ್ಞಾಪಯಾಮಾಸ ಚೇಷ್ಟಿತಂ ಶಾಂರ್ಗಿಣಸ್ತದಾ ।
ದೇವತಾನಾಂ ಸಮುದ್ಯೋಗಂ ಜನ್ಮ ವೈ ಕೇಶವಸ್ಯ ಚ ॥ ೨೧೯ ॥

ತಥಾ ಚ ವಸುದೇವೇನ ಪುತ್ರನಿಕ್ಷೇಪಣಂ ವ್ರಜೇ ।
ನಿಧನಂ ರಾಕ್ಷಸಾನಾಂ ಚ ಸರ್ಪರಾಜವಿವಾಸನಂ ॥ ೨೨೦ ॥

---

ದಿವ್ಯವಾದ ಬಟ್ಟೆ ಒಡವೆಗಳನ್ನು ಕೊಟ್ಟು ಗೌರವಿಸಿ ಮತ್ತೆ ಸ್ವರ್ಗಕ್ಕೆ ಹೊರಟು ಹೋದನು. ಗೋಪವೃದ್ಧರೂ ಗೋಪಿಯರೂ ಅಲ್ಲಿ ಆ ಇಂದ್ರನನ್ನು ನೋಡಿ ಅವನಿಂದ ಗೌರವಿಸಲ್ಪಟ್ಟವರಾಗಿ ಬಹುವಾದ ಸಂತೋಷವನ್ನು ಹೊಂದಿದರು. ಆ ಮಹಾಬಲಿಷ್ಠರಾದ ರಾಮಕೃಷ್ಣರು ಒಳ್ಳೆಯ ಬಟ್ಟೆಗಳನ್ನುಟ್ಟು ಒಡವೆಗಳನ್ನೂ ತೊಟ್ಟುಕೊಂಡು ಆ ನಂದನ ಗೋವಿನ ದೊಡ್ಡಿಯಲ್ಲಿ ದನಗಳ ಕರುಗಳನ್ನು ಕಾಯುತ್ತಿದ್ದರು. ಎಲೈ ದೇವಿಯೆ ! ಇಷ್ಟರಲ್ಲಿ ನಾರದನು ಅಕಸ್ಮಾತ್ತಾಗಿ ಮಥುರೆಗೆ ಬಂದು ಕಂಸನ ಬಳಿಗೆ ಹೋದನು. ಆ ಕಂಸನು ನಾರದನನ್ನು ಗೌರವಿಸಿ ಪೀಠದಲ್ಲಿ ಕೂರಿಸಲು ಅನಂತರ ಆ ನಾರದನು ಆ ಕೃಷ್ಣನ ಅವತಾರವಾದ ವಿಷ್ಣುವಿನ ಚರಿತ್ರೆಯನ್ನೆಲ್ಲಾ ತಿಳಿಸಿದನು. ಆ ನಾರದನು ದೇವತೆಗಳ ಉದ್ಯೋಗವನ್ನೂ, ಕೇಶವನು ಹುಟ್ಟಿರುವುದನ್ನೂ, ವಸುದೇವನು ಹುಟ್ಟಿದ ಮಗುವನ್ನು ಗೋಪನ ದೊಡ್ಡಿಯಲ್ಲಿಟ್ಟುದನ್ನೂ, ಕಾಳಿಯ ಸರ್ಪವನ್ನು ಮಡುವನ್ನು ಬಿಟ್ಟು ಹೊರಡಿಸಿದುದನ್ನೂ, ಗೋವರ್ಧನಗಿರಿಯನ್ನು

ಧಾರಣಂ ಗಿರಿವರ್ಯಸ್ಯ ಶತಕ್ರತುಸಮಾಗಮಂ ।
ನ್ಯವೇದಯಚ್ಚ ಕಂಸಸ್ಯ ತತ್ಸರ್ವಂ ಸವಿಶೇಷತಃ　　|| ೨೨೧ ||

ಪ್ರಯಯೌ ಬ್ರಹ್ಮ ಭವನಂ ಪೂಜಿತಸ್ತೇನ ರಕ್ಷಸಾ ।
ಕಂಸಃ ಸಮುದ್ವಿಗ್ನಮನಾ ಮಂತ್ರಿಭಿಃ ಪರಿವೇಷ್ಟಿತಃ　　|| ೨೨೨ ||

ಮಂತ್ರಯಾಮಾಸ ತೈಸ್ಸಾಕಮಾತ್ಮನೋ ನಿಧನಂ ಪ್ರತಿ ।
ತತ್ರ ಬುದ್ಧಿಮತಾಂ ಶ್ರೇಷ್ಠಮಕ್ರೂರಂ ಧರ್ಮವತ್ಸಲಂ ||
ಉವಾಚಾತ್ಮಹಿತಂ ಕಾರ್ಯಂ ದಾನವೇಂದ್ರೋ ಮಹಾಬಲಃ　　|| ೨೨೩ ||

|| ಕಂಸ ಉವಾಚ ||

ಮದ್ಭಯಾತ್ತ್ರಿದಶಾಸ್ಸರ್ವೇ ಶತಕ್ರತುಪುರೋಗಮಾಃ ।
ವಿಷ್ಣೋಸ್ಸಮೀಪಮಾಗತ್ಯ ಭಯಾರ್ತಾಶ್ಶರಣಂ ಗತಾಃ　　|| ೨೨೪ ||

---

ಕೃಷ್ಣನು ಎತ್ತಿ ಹಿಡಿದುದನ್ನೂ, ಅನಂತರ ಇಂದ್ರನು ಕೃಷ್ಣನಿಗೆ ಸಮಾಧಾನ ಹೇಳಿದುದನ್ನೂ, ಕಂಸನಿಗೆ ಸ್ವಲ್ಪವನ್ನೂ ಬಿಡದೆ ಹೇಳಿದನು. ಅನಂತರ ಆ ಕಂಸನಿಂದ ಪೂಜಿತನಾಗಿ ನಾರದನು ಬ್ರಹ್ಮಲೋಕಕ್ಕೆ ಹೊರಟುಹೋದನು. ಅನಂತರ ಕಂಸನು ಹೆದರಿಕೊಂಡವನಾಗಿ ಮಂತ್ರಿಗಳನ್ನು ಕರೆಸಿ ಅವರೊಡನೆ ತನ್ನ ಮರಣದ ವಿಷಯವನ್ನು ಕುರಿತು ಮಂತ್ರಾಲೋಚನೆ ಮಾಡಿದನು. ಮಹಾ ಬಲಿಷ್ಠನಾದ ಕಂಸನು ಆಗ ಬುದ್ಧಿವಂತರಲ್ಲಿ ಶ್ರೇಷ್ಠನಾದ ಅಕ್ರೂರನನ್ನು ಕುರಿತು ತನಗೆ ಹಿತವಾದ ಈ ಮಾತನ್ನು ಹೇಳಿದನು.

೨೨೪. ಕಂಸನು ಹೇಳಿದನು–ನನ್ನ ಹೆದರಿಕೆಯಿಂದ ಇಂದ್ರನೇ ಮುಂತಾದ ದೇವತೆಗಳೆಲ್ಲರೂ ವಿಷ್ಣುವಿನ ಬಳಿಗೆ ಹೋಗಿ ಭಯದಿಂದ ರಕ್ಷಣೆ ಯನ್ನು ಕೇಳಿ ಮರೆಹೊಕ್ಕರು.

ಸ ತೇಷಾಮಭಯಂ ದತ್ವಾ ಭಗವಾನ್ ಭೂತಭಾವನಃ ।
ಉತ್ಪನ್ನೋ ದೇವಕೀಗರ್ಭೇ ಮಾಂ ಹಂತುಂ ಮಧುಸೂದನಃ ॥ ೨೨೫ ॥

ವಸುದೇವೋಪಿ ದುಷ್ಟಾತ್ಮಾ ವಂಚಯಿತ್ವಾ ತು ಮಾಂ ನಿಶಿ ।
ಪುತ್ರಂ ನಿಕ್ಷಿಪ್ತವಾನ್ ಗೇಹೇ ನಂದಸ್ಯ ಸುದುರಾತ್ಮನಃ ॥ ೨೨೬ ॥

ಬಾಲ್ಯೇನ್ಯೈವ ದುರಾಧರ್ಷೋ ನಿಜಘಾನ ಮಹಾಸುರಾನ್ ।
ಮಾಂ ಹಂತುಮಪಿ ಸನ್ನದ್ಧೋ ಭವೇದೇವಂ ನ ಸಂಶಯಃ ॥ ೨೨೭ ॥

ಸೋತ್ರ ಹಂತುಂ ನ ಶಕ್ಯೋ ಹಿ ಸೇಂದ್ರೈರಪಿ ಸುರಾಸುರೈಃ ।
ಉಪಾಯೇನ್ಯೈವ ಹಂತವ್ಯಃ ಸಮಾನೀಯ ಮಯಾ ತದಾ ॥ ೨೨೮ ॥

ಮದೋತ್ಕಟೈಸ್ತು ಮಾತಂಗೈರ್ಮಲ್ಲೈಶ್ಚ ವರವಾಜಿಭಿಃ ।
ಯೇನ ಕೇನಾಪ್ಯುಪಾಯೇನ ಹಂತುಂ ಶಕ್ಯಮಿಹೈವ ಹಿ ॥ ೨೨೯ ॥

---

೨೨೫. ಆ ದೇಶ ಕಾಲಗಳನ್ನು ಬಲ್ಲ ಭಗವಂತನಾದ ವಿಷ್ಣುವು ಅವರಿಗೆ ಅಭಯವನ್ನು ಕೊಟ್ಟು ನನ್ನನ್ನು ಕೊಲ್ಲಲು ದೇವಕಿಯ ಹೊಟ್ಟೆಯಲ್ಲಿ ಹುಟ್ಟಿದ್ದಾನೆ.

೨೨೬. ಆ ದುಷ್ಟನಾದ ವಸುದೇವನು ನಮ್ಮನ್ನು ಮೋಸಪಡಿಸಿ ರಾತ್ರಿಯಲ್ಲಿ ಆ ಮಗುವನ್ನು ದುಷ್ಟನಾದ ನಂದನ ಮನೆಯಲ್ಲಿಟ್ಟನು.

೨೨೭. ಆತನು ಬಹು ದುಷ್ಟನಾಗಿ ಬಾಲ್ಯದಿಂದಲೇ ಬಲಿಷ್ಠರಾದ ಅಸುರರನ್ನು ಕೊಲ್ಲುತ್ತ ಬಂದನು. ಅಲ್ಲದೆ ನನ್ನನ್ನೂ ಕೊಲ್ಲಲು ಕೂಡ ಸಿದ್ಧನಾಗಿದ್ದಾನೆ. ಸಂಶಯವಿಲ್ಲ.

೨೨೮. ಅವನನ್ನು ಕೊಲ್ಲಲು ದೇವದಾನವರೂ ಕೂಡ ಶಕ್ತರಾಗಿಲ್ಲ ಆದ್ದರಿಂದ ಅವನನ್ನು ಉಪಾಯದಿಂದ ಇಲ್ಲಿಗೆ ಬರಮಾಡಿಕೊಂಡು ಆಗ ಅವನನ್ನು ಕೊಂದುಹಾಕಬೇಕು.

೨೨೯. ಮದ್ದಾನೆಗಳಿಂದಲಾಗಲಿ ಜಟ್ಟಿಗಳಿಂದಲಾಗಲಿ ಕುದುರೆಗಳಿಂದಲಾಗಲಿ ಯಾವುದರಿಂದಲೇ ಆಗಲಿ ಹೇಗಾದರೂ ಮಾಡಿ ಯಾವುದಾದರೂ ಉಪಾಯದಿಂದ ಇಲ್ಲಿಯೇ ಕೊಂದುಹಾಕಬೇಕು.

ತಸ್ಮಾತ್ತ್ವಂ ಗೋವ್ರಜಂ ಗತ್ವಾ ಕೃಷ್ಣಂ ರಾಮಂ ಚ ಯಾದವ ।
ಸರ್ವಾನ್ ಗೋಪಾಲವೃದ್ಧಾಂಶ್ಚ ನಂದಗೋಪಪುರೋಗಮಾನ್ ॥
ಉಪಭೋಕ್ತುಂ ಧನುರ್ಯಾಗಮಿಹಾನಯ ಯದೂತ್ತಮ ॥ ೨೩೦ ॥

॥ ಮಹಾದೇವ ಉವಾಚ ॥

ತಥೇತ್ಯುಕ್ತ್ವಾ ಯದುಶ್ರೇಷ್ಠೋ ರಥಮಾರುಹ್ಯ ವೀರ್ಯವಾನ್ ।
ಪ್ರಯಯೌ ಗೋಕುಲೇ ರಮ್ಯೇ ಕೃಷ್ಣಸಂದರ್ಶನೋತ್ಸುಕಃ ॥ ೨೩೧ ॥

ಮಹಾಭಾಗವತಶ್ರೇಷ್ಠೋ ಗವಾಂ ಮಧ್ಯೇ ವ್ಯವಸ್ಥಿತಂ ।
ದದರ್ಶ ಕೃಷ್ಣಮಕ್ಲಿಷ್ಟಮಕ್ರೂರೋ ವಿನಯಾನ್ವಿತಃ ॥ ೨೩೨ ॥

ನೀಲನೀರದಸಂಕಾಶಂ ಪೂರ್ಣೇಂದುಸದೃಶಾನನಂ ।
ಪದ್ಮಪತ್ರವಿಶಾಲಾಕ್ಷಂ ದೀರ್ಘಬಾಹುಮನಾಮಯಂ ॥ ೨೩೩ ॥

---

೨೩೦. ಆದ್ದರಿಂದ ನೀನು ಗೋಪರಹಳ್ಳಿಗೆ ಹೋಗಿ ಕೃಷ್ಣನನ್ನೂ ರಾಮನನ್ನೂ ಮತ್ತು ಗೋಪವೃದ್ಧರನ್ನೂ ನಂದಗೋಪನೇ ಮುಂತಾದವರನ್ನೂ ಇಲ್ಲಿ ನಡೆಯುವ ಧನುರ್ಯಾಗ (ಬಿಲ್ಲುಬಗ್ಗಿಸುವಿಕೆ) ವನ್ನು ಅನುಭವಿಸಲು ಕರೆದು ಕೊಂಡು ಬಾ.

೨೩೧. ಮಹಾದೇವನು ಹೇಳಿದನು–ಆ ಯದುಶ್ರೇಷ್ಠನಾದ ಅಕ್ರೂರನು ಹಾಗೇ ಆಗಲೆಂದು ಹೇಳಿ ರಥವನ್ನು ಹತ್ತಿಕೊಂಡು ಕೃಷ್ಣನನ್ನು ನೋಡಲು ಗೋಕುಲಕ್ಕೆ ಹೋದನು.

೨೩೨. ಭಾಗವತರಲ್ಲಿ ಬಹುಶ್ರೇಷ್ಠನಾದ ಆ ಅಕ್ರೂರನು ಗೋವುಗಳ ಮಧ್ಯದಲ್ಲಿ ವಾಸಮಾಡುತ್ತಿರುವ ಶ್ರೀಕೃಷ್ಣನನ್ನು ವಿನಯದಿಂದ ನೋಡಿದನು.

೨೩೩–೨೩೫. ಆ ಕೃಷ್ಣಸ್ವಾಮಿಯು ನೀಲವಾದ ಮೇಘದಂತೆ ಬಣ್ಣವುಳ್ಳ ವನಾಗಿದ್ದನು. ಪೂರ್ಣಚಂದ್ರನಂತೆ ಮುಖವಿದ್ದಿತು. ಪದ್ಮದದಳದಂತೆ ಕಣ್ಣು ಗಳು ವಿಶಾಲವಾಗಿದ್ದುವು. ತೋಳುಗಳು ದೊಡ್ಡವಾಗಿದ್ದುವು. ರೋಗವಿಲ್ಲದ

ಪೀತವಸ್ತ್ರೇಣ ಸಂವೀತಂ ಸರ್ವಾಭರಣಭೂಷಿತಂ ।
ಕೌಸ್ತುಭೋದ್ಭಾಸಿತೋರಸ್ಕಂ ರತ್ನಕುಂಡಲಶೋಭಿತಂ ॥ ೨೩೪ ॥

ತುಲಸೀವನಮಾಲಾಢ್ಯಂ ವನ್ಯಪುಷ್ಪಾವತಂಸಕಂ ।
ಗೋಪಕನ್ಯಾಪರಿವೃತಂ ದೃಷ್ಟ್ವಾ ತತ್ರ ಜನಾರ್ದನಂ ॥ ೨೩೫ ॥

ಪುಲಕಾಂಕಿತಸರ್ವಾಂಗೋ ಹರ್ಷಾಶ್ರುಪ್ಲುತಲೋಚನಃ ।
ಅವರುಹ್ಯ ರಥಾತ್ತಸ್ಮಾತ್ಪ್ರಣನಾಮ ಯದೂದ್ವಹಃ ॥ ೨೩೬ ॥

ಹರ್ಷಾತ್ಸಮೇತ್ಯ ಗೋಪಾಲಂ ಪರಿಣೀಯ ಪ್ರಣಮ್ಯ ಚ ।
ರತ್ನಾರವಿಂದಸದೃಶೇ ವಜ್ರಚಕ್ರಾಂಕಚಿಹ್ನಿತೇ ॥ ೨೩೭ ॥

ಸ ಮೂರ್ಧ್ನಿ ಧೃತ್ವಾ ಪಾದಾಬ್ಜೇ ಪ್ರಣನಾಮ ಪುನಃ ಪುನಃ ।
ಕೈಲಾಸಶಿಖರಾಭಾಸಂ ನೀಲಾಂಬರಧರಂ ಪ್ರಭುಂ ॥ ೨೩೮ ॥

---

ಆರೋಗ್ಯವಾಗಿದ್ದನು. ಹೊಂಬಣ್ಣದ ವಸ್ತ್ರವನ್ನು ಹೊದ್ದಿದ್ದನು. ಕೌಸ್ತುಭವನು ಎದೆಗೆ ಅಳವಡಿಸಿಕೊಂಡಿದ್ದನು. ರತ್ನಕುಂಡಲಗಳನ್ನು ಕಿವಿಗೆ ಹಾಕಿಕೊಂಡಿದ್ದನು. ತುಳಸಿಯ ದೊಡ್ಡ ಮಾಲೆಯನ್ನು ಕತ್ತಿಗೆ ಹಾಕಿಕೊಂಡಿದ್ದನು. ಕಾಡಿನ ಹೂಗಳನ್ನು ತಲೆಗೆ ಮುಡಿದುಕೊಂಡಿದ್ದನು. ಗೋಪಕನ್ಯೆಯರಿಂದ ಕೂಡಿಕೊಂಡಿದ್ದನು. ಇಂತಹ ಜನಾರ್ದನನ್ನು ಆ ಅಕ್ರೂರನು ನೋಡಿದನು.

೨೩೬. ಆ ಯದುಶ್ರೇಷ್ಠನಾದ ಅಕ್ರೂರನು ಮೈನಿಮಿರಿದವನಾಗಿ ಸಂತೋಷದಿಂದ ಕಣ್ಣಿನಲ್ಲಿ ನೀರು ತುಂಬಿಕೊಂಡು ಇರಲು ರಥದಿಂದ ಒಡನೆಯೇ ಇಳಿದು ಶ್ರೀಕೃಷ್ಣನಿಗೆ ನಮಸ್ಕರಿಸಿದನು.

೨೩೭–೨೩೯. ಹರ್ಷದಿಂದ ಆ ಶ್ರೀಕೃಷ್ಣನ ಬಳಿಗೆ ಹೋಗಿ ಮುಟ್ಟಿ ನಮಸ್ಕರಿಸಿ ರತ್ನಾರವಿಂದದಂತಿರುವ ವಜ್ರಚಕ್ರಗಳ ಗುರುತುಳ್ಳ ಪಾದಗಳನ್ನು ತಲೆಯಲ್ಲಿ ಇಟ್ಟುಕೊಂಡು ಪದೆ ಪದೆ ನಮಸ್ಕರಿಸಿದನು. ಕೈಲಾಸದ ಶಿಖರದಂತಿರುವ ನೀಲವಾದ ಬಟ್ಟೆಯನ್ನು ಧರಿಸಿರುವ, ಶರತ್ಕಾಲದ ಚಂದ್ರನಂತೆ ಮುಖವುಳ್ಳ,

ಶರತ್ಪೂರ್ಣೇಂದುಸದೃಶಂ ಮುಕ್ತಾದಾಮ ವಿಭೂಷಿತಂ ।
ಬಲರಾಮಂ ತತೋ ದೃಷ್ಟ್ವಾ ಪ್ರಣನಾಮ ಸ ಯಾದವಃ ॥ ೨೩೯ ॥

ಹರ್ಷೇಣೋತ್ಥಾಯ ತೌ ವೀರೌ ಪರಿಪೂಜ್ಯ ಯದೂತ್ತಮಂ ।
ಗೃಹಮಾಜಗ್ಮತುರ್ವೀರೌ ತೇನಾಕ್ರೂರೇಣ ವೃಷ್ಣಿನಾ ॥ ೨೪೦ ॥

ನಂದಗೋಪಸ್ತು ತಂ ದೃಷ್ಟ್ವಾ ಯದುಶ್ರೇಷ್ಠಂ ಸಮಾಗತಂ ।
ಅಭಿಗಮ್ಯ ಮಹಾತೇಜಾ ನಿವೇಶ್ಯ ಪರಮಾಸನೇ ॥ ೨೪೧ ॥

ಅರ್ಚಯಾಮಾಸ ವಿಧಿವದರ್ಘ್ಯಪಾದ್ಯಾದಿಭಿರ್ಮುದಾ ।
ವಸ್ತ್ರೈರಾಭರಣೈರ್ದಿವ್ಯೈರರ್ಚಯಾಮಾಸ ಭಕ್ತಿತಃ ॥ ೨೪೨ ॥

ಅಕ್ರೂರೋ ರಾಮಕೃಷ್ಣಾಭ್ಯಾಂ ವಸ್ತ್ರಾಣ್ಯಾಭರಣಾನಿ ಚ ।
ಪ್ರದದೌ ನಂದಗೋಪಾಯ ಯಶೋದಾಯೈವ ಯಾದವಃ ॥ ೨೪೩ ॥

---

ಮುತ್ತಿನ ಸರವನ್ನು ಹಾಕಿಕೊಂಡಿರುವ, ಬಲರಾಮನನ್ನೂ ನೋಡಿ ಆ ಅಕ್ರೂರನು ನಮಸ್ಕರಿಸಿದನು.

೨೪೦. ಆ ವೀರನ ಆ ಅಕ್ರೂರನನ್ನು ಹರ್ಷದಿಂದ ಮೇಲಕ್ಕೆಬ್ಬಿಸಿ ಆಲಿಂಗಿಸಿಕೊಂಡು ಆ ಅಕ್ರೂರನನ್ನೂ ಜೊತೆಯಲ್ಲಿ ಕರೆದುಕೊಂಡು ಅವರ ಮನೆಗೆ ಬಂದರು.

೨೪೧–೨೪೨. ನಂದಗೋಪನು ಆ ಅಕ್ರೂರನು ಬಂದುದನ್ನು ನೋಡಿ ಅವನನ್ನು ಎದುರುಗೊಂಡು ಉತ್ತಮವಾದ ಆಸನದಲ್ಲಿ ಕುಳ್ಳಿರಿಸಿ ಅರ್ಘ್ಯಪಾದ್ಯಾದಿಗಳನ್ನು ಕೊಟ್ಟು ಪೂಜಿಸಿದನು. ಮತ್ತು ವಸ್ತ್ರಗಳಿಂದಲೂ ಆಭರಣಗಳಿಂದಲೂ ಭಕ್ತಿಯಿಂದ ಗೌರವಿಸಿದನು.

೨೪೩. ಅಕ್ರೂರನು ರಾಮಕೃಷ್ಣರಿಗೂ ನಂದಗೋಪಯಶೋದೆಯರಿಗೂ ಆಭರಣಗಳನ್ನೂ ವಸ್ತ್ರಗಳನ್ನೂ ಕೊಟ್ಟನು.

ಪೃಷ್ಟ್ವಾ ಕುಶಲಮವ್ಯಗ್ರಮಾಸೀನಸ್ತು ಕುಶಾಸನೇ ।
ರಾಜಕಾರ್ಯಾಣಿ ಸರ್ವಾಣಿ ಪೃಷ್ಟ ಉವಾಚ ಬುದ್ಧಿಮಾನ್ ॥ ೨೪೪ ॥

॥ ಅಕ್ರೂರ ಉವಾಚ ॥

ಏಷ ಕೃಷ್ಣೋ ಮಹಾತೇಜಾಃ ಸಾಕ್ಷಾನ್ನಾರಾಯಣೋಽವ್ಯಯಃ ।
ದೇವತಾನಾಂ ಹಿತಾರ್ಥಾಯ ಸಾಧೂನಾಂ ರಕ್ಷಣಾಯ ಚ ॥ ೨೪೫ ॥

ಭೂಭಾರಕವಿನಾಶಾಯ ಧರ್ಮಸಂಸ್ಥಾಪನಾಯ ಚ ।
ಕಂಸಾದೀನಾಂ ತು ದೈತ್ಯಾನಾಂ ಸರ್ವೇಷಾಂ ನಿಧನಾಯ ಚ ॥ ೨೪೬ ॥

ಸಂಪ್ರಾರ್ಥಿತಃ ಸುರಗಣೈರ್ಮುನಿಭಿಶ್ಚ ಮಹಾತ್ಮಭಿಃ ।
ದೇವಕೀಜಠರೇ ಜಾತಃ ಪ್ರಾವೃಟ್ಕಾಲೇ ಮಹಾನಿಶಿ ॥ ೨೪೭ ॥

ಭಯಾತ್ಕಂಸಸ್ಯ ದೇವೇಶಮಾನೀಯಾನಕದುಂದುಭಿಃ ।
ತವ ಗೇಹೇ ತದಾ ರಾತ್ರೌ ಪುತ್ರಂ ನಿಕ್ಷಿಪ್ತವಾನ್ ಹರಿಂ ॥ ೨೪೮ ॥

---

೨೪೪. ಅವನು ಕುಶಾನದಲ್ಲಿ ಕುಳಿತುಕೊಂಡು ನಿದಾನವಾಗಿ ಕುಶಲವನ್ನು ಕೇಳಿದನು. ಆಗ ರಾಜಕಾರ್ಯವೆಲ್ಲವನ್ನೂ ಬುದ್ಧಿವಂತಿಕೆಯಿಂದ ಹೇಳಿದನು.

೨೪೫ ಅಕ್ರೂರನು ಹೇಳಿದನು — ಈ ಕೃಷ್ಣನು ಮಹಾತೇಜಸ್ವಿಯು. ಸಾಕ್ಷಾನ್ನಾರಾಯಣನು. ಅವ್ಯಯನು. ದೇವತೆಗಳ ಹಿತಕ್ಕೂ ಸಾಧುಗಳ ರಕ್ಷಣೆಗೂ ಹುಟ್ಟಿರುವನು.

೨೪೬—೨೪೮. ಭೂಭಾರವನ್ನು ನಾಶಮಾಡುವುದಕ್ಕೂ ಧರ್ಮವನ್ನು ಸ್ಥಾಪಿಸುವುದಕ್ಕೂ, ಕಂಸನೇ ಮುಂತಾದ ದೈತ್ಯರೆಲ್ಲರನ್ನೂ ಕೊಲ್ಲುವುದಕ್ಕೂ, ದೇಪತೆಗಳಿಂದಲೂ, ಮಹಾತ್ಮರಿಂದಲೂ, ಪ್ರಾರ್ಥಿಸಲ್ಪಟ್ಟು ಆ ವಿಷ್ಣುವು ದೇವಕಿಯ ಹೊಟ್ಟೆಯಲ್ಲಿ ಮಳೆಗಾಲದ ಮಹಾರಾತ್ರಿಯಲ್ಲಿ ಹುಟ್ಟಿದನು. ಆಗ ವಸುದೇವನು ಕಂಸನ ಭಯದಿಂದ ಆ ಮಗುವನ್ನು ತಂದು ಆ ರಾತ್ರಿಯಲ್ಲಿಯೇ ನಿನ್ನ ಮನೆಯಲ್ಲಿಟ್ಟನು.

ತಸ್ಮಿನ್ನೇವ ತು ಕಾಲೇಽಪಿ ಯಶೋದಾ ತು ಯಶಸ್ವಿನೀ ।
ಕನ್ಯಾಂ ಮಾಯಾಂಶಸಂಭೂತಾಂ ಪ್ರಸೂತಾಶು ಶುಭಾನನಾಂ ॥ ೨೪೯ ॥

ತಯಾ ಸಂಮೋಹಿತಂ ಸರ್ವಮಿದಂ ವ್ರಜಕುಲಂ ಭೃಶಂ ।
ಮೂರ್ಛಿತಾಯಾ ಯಶೋದಾಯಾಃ ಶಯನೇ ಯದುಪುಂಗವಂ॥ ೨೫೦ ॥

ಕೃಷ್ಣಂ ನಿಕ್ಷಿಪ್ಯ ತಾಂ ಕನ್ಯಾಮಾದಾಯ ಸ್ವಗೃಹಂ ಯಯೌ ।
ತಾಂ ತು ನಿಕ್ಷಿಪ್ಯ ದೇವಕ್ಯಾಃ ಶಯನೇ ಬಹಿರಾಗಮತ್ ॥ ೨೫೧ ॥

ಸಾ ರುರೋದ ತತಃ ಕ್ಷಿಪ್ರಂ ದೇವಕೀಶಯನೇ ಸ್ಥಿತಾ ।
ತಚ್ಛ್ರುತ್ವಾ ಸಹಸಾ ಕಂಸಃ ಕನ್ಯಾಮಾದಾಯ ದಾನವಃ ॥ ೨೫೨ ॥

ಭ್ರಾಮಯಿತ್ವಾ ಶಿಲಾಪೃಷ್ಠೇ ಚಿಕ್ಷೇಪೋತ್ಪತ್ಯ ವೀರ್ಯವಾನ್ ।
ಸಮುತ್ಥಾಯ ಚ ಸಾ ಕನ್ಯಾ ಸಾಯುಧಾಷ್ಟಭುಜಾನ್ವಿತಾ ॥
ಗಗನಸ್ಥಾ ರುಷಾ ಕಂಸಂ ಪ್ರಾಹ ಗಂಭೀರಯಾ ಗಿರಾ ॥ ೨೫೩ ॥

---

೨೪೯. ಆಗಲೇನೇ ಈ ಯಶೋದೆಯೂ ಕೂಡ ಮಾಯಾಂಶದಿಂದ ಉಂಟಾದ ಒಂದು ಹೆಣ್ಣು ಮಗುವನ್ನು ಹೆತ್ತಿದ್ದಳು.

೨೫೦–೨೫೧. ಆಗ ಆ ಮಾಯೆಯಿಂದ ಈ ಗೋಕುಲವೆಲ್ಲವೂ ಮೋಹಗೊಂಡು ಇದ್ದಿತು. ಯಶೋದೆಯು ಮೂರ್ಛೆಹೋಗಿದ್ದಳು. ಆಗ ಯಶೋದೆಯ ಹಾಸಿಗೆಯಲ್ಲಿ ಯದುಪುಂಗವನಾದ ಕೃಷ್ಣನನ್ನು ಇಟ್ಟು ಇಲ್ಲಿದ್ದ ಆ ಕನ್ಯೆಯನ್ನು ತೆಗೆದುಕೊಂಡು ವಸುದೇವನು ತನ್ನ ಮನೆಗೆ ಹೋದನು. ಅಲ್ಲಿ ಆ ಹೆಣ್ಣು ಮಗುವನ್ನು ದೇವಕಿಯ ಹಾಸಿಗೆಯಲ್ಲಿರಿಸಿ ಹೊರಕ್ಕೆ ಬಂದನು.

೨೫೨–೨೫೩ ಆ ದೇವಕಿಯ ಹಾಸಿಗೆಯಲ್ಲಿ ಈ ಮಗುವು ಮಲಗಿದೊಡನೆಯೇ ಅತ್ತಿತು ಅದನ್ನು ಕೇಳಿ ಕಂಸನು ಆ ಮಗುವನ್ನು ತಂದು ಗರ್ರನೆ ತಿರುಗಿಸಿ ಕಲ್ಲಿನಮೇಲೆ ಬಡಿದನು. ಒಡನೆಯೇ ಆ ಹೆಣ್ಣುಮಗುವು ಮೇಲಕ್ಕೆ ಹಾರಿ ಎಂಟುಭುಜಗಳನ್ನೂ ಅದರಲ್ಲಿ ಆಯುಧಗಳನ್ನೂ ಹೊಂದಿ ಆಕಾಶದಲ್ಲಿ ಕಂಗೊಳಿಸಿತು. ಆಗ ಅಂತರಿಕ್ಷದಲ್ಲಿಯೇ ನಿಂತುಕೊಂಡು ಕೋಪದಿಂದ ಕಂಸನನ್ನು ಕುರಿತು ಇಂತೆಂದಿತು.

|| ಕನ್ಯೋವಾಚ ||

ಯೋನಂತಸ್ಸರ್ವದೇವಾನಾಮೀಶ್ವರಃ ಪುರುಷೋತ್ತಮಃ |
ಜಾತಸ್ತವ ವಧಾರ್ಥಾಯ ಗೋವ್ರಜೇ ದಾನವಾಧಮ || ೨೫೪ ||

|| ಅಕ್ರೂರ ಉವಾಚ ||

ಇತ್ಯುಕ್ತ್ವಾ ಸಾ ಮಹಾಮಾಯಾ ಹಿಮವಂತಂ ಸಮಾಯಯೌ |
ತದಾಪ್ರಭೃತಿ ದುಷ್ಟಾತ್ಮಾ ಭಯಾದುದ್ವಿಗ್ನಮಾನಸಃ | || ೨೫೫ ||

ದಾನವಾನ್ ಪ್ರೇರಯಾಮಾಸ ನಿಧನಾಯ ಮಹಾತ್ಮನಃ |
ಬಾಲೇನೈವ ಹತಾಸ್ಸರ್ವೇ ಲೀಲಯಾನೇನ ಧೀಮತಾ || ೨೫೬ ||

ಅತ್ಯದ್ಭುತಾನಿ ಕಾರ್ಯಾಣಿ ಕೃತವಾನ್ ಪರಮೇಶ್ವರಃ |
ಗೋವರ್ಧನಾದ್ರಿಧರಣಂ ನಾಗರಾಜವಿವಾಸನಂ || ೨೫೭ ||

---

೨೫೭. ಕನ್ಯೆಯು ಹೇಳಿದಳು–ಎಲೈ ದಾನವಾಧಮನೇ ? ಎಲ್ಲಾ ದೇವರಿಗೂ ಒಡೆಯನಾದ ಅನಂತನಾದ ವಿಷ್ಣುವನ್ನು ದೇವತೆಗಳು ಪ್ರಾರ್ಥಿಸಲು ಅದರಂತೆ ಅವನು ನಿನ್ನನ್ನು ಕೊಲ್ಲಲು ಗೊಲ್ಲರದೊಡ್ಡಿಯಲ್ಲಿ ಹುಟ್ಟಿದ್ದಾನೆ.

೨೫೫-೨೫೬. ಅಕ್ರೂರನು ಹೇಳಿದನು–ಆ ಮಾಯೆಯು ಹೀಗೆಂದು ಹೇಳಿ ಹಿಮವತ್ಪರ್ವತಕ್ಕೆ ಹೊರಟು ಹೋದಳ. ಆಗಿನಿಂದ ಮೊದಲುಮಾಡಿಕೊಂಡು ಈ ದುಷ್ಟನಾದ ಕಂಸನು ಭಯದಿಂದ ಕಳವಳಪಡುತ್ತ ಆ ಕೃಷ್ಣನನ್ನು ಕೊಲ್ಲಲು ದಾನವರನ್ನು ಕಳುಹಿಸಿದನು. ಆ ದಾನವರೆಲ್ಲರೂ ಈತನಿಂದ ಲೀಲೆಯಿಂದಲೇ ಕೊಲ್ಲಲ್ಪಟ್ಟರು.

೨೫೭-೨೫೮. ಈ ರೀತಿಯಾಗಿ ಕೃಷ್ಣನು ಬಹು ಅದ್ಭುತವಾದ ಕೆಲಸಗಳನ್ನು ಮಾಡಿದ್ದಾನೆ. ಈ ಶ್ರೀಕೃಷ್ಣನು ಗೋವರ್ಧನ ಪರ್ವತವನ್ನು ಎತ್ತಿ ಹಿಡಿದನು. ಕಾಳಿಯಸರ್ಪವನ್ನು ಬೇರೆಯ ಕಡೆಗೆ ಓಡಿಸಿದನು. ಇಂದ್ರನು ಬಂದು

**ಸಮಾಗಮಂ ಮಹೇಂದ್ರಸ್ಯ ನಿಧನಂ ಸರ್ವರಕ್ಷಸಾಂ ।**
**ಶ್ರುತ್ವಾ ದೇವರ್ಷಿಣಾಖ್ಯಾತಮತೀವ ಭಯಪೀಡಿತಃ　　॥ ೨೫೮ ॥**

**ಇತೋ ನೀತ್ವಾ ಮಹಾಬಾಹೂ ರಾಮಕೃಷ್ಣೌ ದುರಾಸದೌ ।**
**ಮದೋತ್ಕಟೈರ್ಮಹಾನಾಗೈರ್ಮಲ್ಲೈರ್ವಾ ಹಂತುಮುದ್ಯತಃ　　॥ ೨೫೯ ॥**

**ಕೃಷ್ಣಸ್ಯ ನಯನಾರ್ಥಾಯ ಪ್ರೇರಯಾಮಾಸ ಮಾಮಿಹ ।**
**ವಸುದೇವಸ್ಯ ದುಷ್ಟಾತ್ಮಾ ನಿಗ್ರಹಂ ಕೃತವಾನಸೌ　　॥ ೨೬೦ ॥**

**ಏತತ್ಸರ್ವಂ ಸಮಾಖ್ಯಾತಂ ಚೇಷ್ಟಿತಂ ಸುದುರಾತ್ಮನಃ ।**
**ಉಪಭೋಕ್ತುಂ ಧನುರ್ಯಾಗಂ ಯೂಯಂ ಸರ್ವೇ ವ್ರಜೌಕಸಃ　　॥ ೨೬೧ ॥**

**ದಧ್ಯಾಜ್ಯಾದಿ ಗೃಹೀತ್ವಾ ವೈ ಶ್ವೋಭೂತೇ ಗಂತುಮರ್ಹಥ ।**
**ಸಹಿತಾ ರಾಮಕೃಷ್ಣಾಭ್ಯಾಂ ಗೋಪಾಸ್ಸರ್ವೇ ತದಂತಿಕಂ　　॥ ೨೬೨ ॥**

---

ಇವನೊಡನೆ ಮಾತನಾಡಿದನು. ಅನೇಕಜನ ಶೂರರಾದ ದಾನವರನ್ನು ಕೊಂದನು. ಎಂಬುದಾಗಿ ಇದೆಲ್ಲವನ್ನೂ ನಾರದ ಮಹರ್ಷಿಯು ಕಂಸನಿಗೆ ಹೇಳಿದನು. ಇದನ್ನು ಕೇಳಿದಮೇಲೆ ಈ ಕಂಸನು ಬಹುವಾಗಿ ಭಯಪಟ್ಟಿರುವನು.

೨೫೯. ಮಹಾಬಾಹುಗಳಾದ ಶೂರರಾದ ಈ ರಾಮಕೃಷ್ಣರನ್ನು ಇಲ್ಲಿಂದ ಕರೆದುಕೊಂಡು ಹೋಗಿ ಮದ್ದಾನೆಗಳಿಂದಾಗಲಿ ಜಟ್ಟಿಗಳಿಂದಾಗಲಿ ಕೊಲ್ಲಿಸಬೇಕೆಂದು ಪ್ರಯತ್ನಿಸಿರುವನು.

೨೬೦. ಈ ಕೃಷ್ಣನನ್ನು ಕರೆದುಕೊಂಡು ಬರಲು ಆ ಕಂಸನು ನನ್ನನ್ನು ಕಳುಹಿಸಿರುವನು ಆಗಲೇ ಆ ವಸುದೇವನನ್ನು ಬಂಧಿಸಿ ಬಂಧನಾಗಾರದಲ್ಲಿ ಟ್ಟಿರುವನು.

೨೬೧—೨೬೨ ಆ ದುಷ್ಟನಾದ ಕಂಸನ ಉದ್ದೇಶವೆಲ್ಲವನ್ನೂ ಹೇಳಿದ್ದೇನೆ. ಗೋಪರಾದ ನೀವೆಲ್ಲರೂ ಕೂಡ ಈ ಧನುರ್ಯಾಗವನ್ನು ನೋಡಲು ಬರಬೇಕು. ಬರುವಾಗ ರಾಮಕೃಷ್ಣರನ್ನೂ ಕರದುಕೊಂಡು ಹಾಲು ಮೊಸರು ಬೆಣ್ಣೆ ಮುಂತಾದುವನ್ನು ತೆಗೆದುಕೊಂಡು ನಾಳೆಯೇ ಬರಬೇಕು.

ಕೃಷ್ಣೇನ ನಿಹಿತಃ ಕಂಸೋ ಭವಿಷ್ಯತಿ ನ ಸಂಶಯಃ ।
ಪರಿತ್ಯಜ್ಯ ಭಯಂ ತಸ್ಮಾದ್ಗಮಿಷ್ಯಧ್ವಂ ನೃಪಾಜ್ಞಯಾ ॥ ೨೬೩ ॥

॥ ಈಶ್ವರ ಉವಾಚ ॥

ಇತ್ಯುಕ್ತ್ವಾ ಸ ತದಾಕ್ರೂರಸ್ತೂಷ್ಣೀಮಾಸೀತ್ಸುಬುದ್ಧಿಮಾನ್ ।
ತಸ್ಯ ತದ್ವಚನಂ ಶ್ರುತ್ವಾ ದಾರುಣಂ ರೋಮಹರ್ಷಣಂ ॥ ೨೬೪ ॥

ನಂದಗೋಪಮುಖಾಸ್ಸರ್ವೇ ಗೋಪವೃದ್ಧಾ ಭಯಾತುರಾಃ ।
ಆಜಗ್ಮಿರೇ ಮಹಾದುಃಖಸಾಗರೇ ಶೋಕಮೋಹಿತಾಃ ॥ ೨೬೫ ॥

ತಾನಾಶ್ವಾಸ್ಯ ಹರಿಸ್ತತ್ರ ದೃಷ್ಟ್ವಾ ಕಮಲಲೋಚನಃ ।
ನ ಭೀಃ ಕಾರ್ಯೇತಿ ಸಂಪ್ರಾಹ ರಾಕ್ಷಸಂ ಪ್ರತಿ ವೀರ್ಯವಾನ್ ॥ ೨೬೬ ॥

ವಿನಾಶಾಯ ಪ್ರಯಾಸ್ಯಾಮಿ ಕಂಸಸ್ಯಾಸ್ಯ ದುರಾತ್ಮನಃ ।
ಮಧುರಾಂ ಸಹ ರಾಮೇಣ ಭವದ್ಭಿಃ ಸಹ ಸಂಗತಃ ॥ ೨೬೭ ॥

---

೨೬೩. ಕೃಷ್ಣನು ಆ ಕಂಸನನ್ನು ಕೊಂದುಹಾಕುವನು. ಸಂಶಯವಿಲ್ಲ. ಆದ್ದರಿಂದ ನೀವೆಲ್ಲರೂ ಭಯವನ್ನು ಬಿಟ್ಟು ಹೊರಡಿರಿ. ಅಲ್ಲದೆ ಅಲ್ಲಿಗೆ ಬರಬೇಕೆಂದು ರಾಜಾಜ್ಞೆಯೂ ಆಗಿರುವುದು.

೨೬೪–೨೬೫. ಈಶ್ವರನು ಹೇಳಿದನು :—ಇಷ್ಟನ್ನು ಹೇಳಿ ಆ ಅಕ್ರೂರನು ಸುಮ್ಮನಾದನು. ಈ ಮಾತು ಕ್ರೂರವಾಗಿ ರೋಮಾಂಚವನ್ನುಂಟುಮಾಡುವುದಾಗಿದ್ದಿತು. ನಂದಗೋಪನೇ ಮುಂತಾದ ಗೋಪರೆಲ್ಲರೂ ಇದನ್ನು ಕೇಳಿ ದುಃಖಸಾಗರದಲ್ಲಿ ಮುಳುಗಿ ಮೋಹಗೊಂಡವರಾಗಿ ಆ ಕಂಸನ ಅಪ್ಪಣೆಯಂತೆ ಸಿದ್ಧರಾದರು.

೨೬೬. ಕಮಲಲೋಚನನಾದ ಹರಿಯು ಅವರೆಲ್ಲರನ್ನೂ ಸಮಾಧಾನಪಡಿಸುತ್ತ ಆ ರಾಕ್ಷಸನಾದ ಕಂಸನನ್ನು ನೋಡಿ ನೀವು ಭಯಪಡಬೇಡಿರಿ. ಎಂದು ಹೇಳಿದನು.

೨೬೭ ಆ ದುಷ್ಟನಾದ ಕಂಸನನ್ನು ಕೊಲ್ಲಲು ರಾಮನೊಡನೆಯೂ ನಿಮ್ಮೊಡನೆಯೂ ಮಧುರೆಗೆ ಹೋಗುತ್ತೇನೆ.

ತತ್ರ ಹತ್ವಾ ದುರಾತ್ಮಾನಂ ಕಂಸಂ ದಾನವಪುಂಗವಂ |
ಸರ್ವಾಂಶ್ಚ ರಾಕ್ಷಸಾನ್ ಹತ್ವಾ ಪಾಲಯಿಷ್ಯಾಮಿ ಮೇದಿನೀಂ || ೨೬೮ ||

ತಸ್ಮಾಚ್ಛೋಕಂ ಪರಿತ್ಯಜ್ಯ ಗಚ್ಛಧ್ವಂ ಮಥುರಾಂ ಪುರೀಂ ।
ಏವಮುಕ್ತಾಸ್ತು ಹರಿಣಾ ಗೋಪನಂದಪುರೋಗಮಾಃ || ೨೬೯ ||

ಮುಹುರ್ಮುಹುಃ ಪರಿಷ್ವಜ್ಯ ಮೂರ್ಧ್ನ್ಯಾಘ್ರಾಣಂ ಪ್ರಚಕ್ರಿರೇ
ಅಪ್ರಮೇಯಾನಿ ಕರ್ಮಾಣಿ ವಿಚಾರ್ಯ ಸುಮಹಾತ್ಮನಃ || ೨೭೦ ||

ಅಕ್ರೂರವಚನಾಚ್ಚೈವ ಗೋಪಾಃ ಸರ್ವೇ ಗತವ್ಯಥಾಃ |
ದುಗ್ಧದಧ್ಯಾಜ್ಯಯುಕ್ತಾನಿ ಶುಚೀನಿ ವಿವಿಧಾನಿ ಚ || ೨೭೧ ||

ಪಕ್ವಾನ್ನಾನಿ ಸುಹೃದ್ಯಾನಿ ಸ್ವಾದೂನಿ ಮಧುರಾಣಿ ಚ |
ಅಕ್ರೂರಾಯ ದದೌ ಸೌಮ್ಯಂ ಯಶೋದಾ ಭೋಜನಂ ಬಹು || ೨೭೨ ||

ಸಹಿತೋ ರಾಮಕೃಷ್ಣಾಭ್ಯಾಂ ನಂದಾದ್ಯೈರ್ಗೋಪಸತ್ತಮೈಃ |
ಸುಹೃದ್ಭಿರ್ಬಾಲವೃದ್ಧೈಶ್ಚ ಭುವನೇ ಸಮಲಂಕೃತೇ || ೨೭೩ ||

---

೨೬೮. ದಾನವ ಶ್ರೇಷ್ಠನಾದ ಆ ಕಂಸನನ್ನು ಮಧುರೆಯಲ್ಲಿ ಕೊಂದು ಉಳಿದ ರಾಕ್ಷಸರನ್ನೂ ಕೊಂದು ಅನಂತರ ಭೂಮಿಯನ್ನೂ ನಾನೇ ಆಳುತ್ತೇನೆ.

೨೬೯–೨೭೨. ಆದ್ದರಿಂದ ನೀವು ದುಃಖವನ್ನು ಬಿಟ್ಟು ಮಧುರೆಗೆ ಹೋಗಿರಿ. ಎಂದನು. ಹರಿಯು ಹೀಗೆಂದು ಹೇಳಲು ನಂದಗೋಪನೇ ಮುಂತಾದವರು ಆ ಕೃಷ್ಣನನ್ನು ಪದೇಪದೇ ಆಲಂಗಿಸಿಕೊಳ್ಳುತ್ತ ಪ್ರೀತಿಯಿಂದ ತಲೆಯನ್ನು ಮೂಸಿ ನೋಡಿದರು. ಅವರೆಲ್ಲರೂ ಆ ಮಹಾತ್ಮನ ವಚನವನ್ನು ಅಗಾಧವೂ ಅಮೂಲ್ಯವೂ ಆದುದೆಂದು ವಿಮರ್ಶಿಸಿ ತಿಳಿದರು. ಮತ್ತು ಈ ಅಕ್ರೂರನ ಮಾತಿನಂತೆಯೂ ಅವರೆಲ್ಲರೂ ಕೆಟ್ಟ ಯೋಚನೆಯನ್ನು ಬಿಟ್ಟು ಸಂತೋಷದಿಂದಿದ್ದರು. ಯಶೋದೆಯು ಹಾಲು ಮೊಸರು ತುಪ್ಪಗಳಿಂದ ಚೆನ್ನಾಗಿರುವ ರುಚಿರುಚಿಯಾದ ಬಗೆಬಗೆಯಾದ ಅನ್ನಗಳನ್ನು ಅಕ್ರೂರನಿಗೆ ಬಡಿಸಿದಳು.

೨೭೩-೨೭೪. ಆಗ ರಾಮಕೃಷ್ಣರು ದೊಡ್ಡವರಾದ ಗೋಪರೊಡನೆಯೂ ಬಾಲಕರಾದ ಗೋಪಸ್ನೇಹಿತರೊಡನೆಯೂ ಅಲಂಕರಿಸಿದ ಆ ಮನೆಯಲ್ಲಿ

ದತ್ತಂ ಯಶೋದಯಾ ಸೌಮ್ಯಂ ಭೋಜನಂ ಕಲುಷಾಪಹಂ ।
ಬುಭುಜೇ ಯಾದವಶ್ರೇಷ್ಠೋ ಹ್ಯನುರಾಗಾವಹಂ ಶುಭಂ ॥ ೨೭೪ ॥

ಭೋಜಯಿತ್ವಾ ಯಥಾನ್ಯಾಯ್ಯಂ ದತ್ವಾಚಮನಮಂಭಸಾ ।
ಸಕರ್ಪೂರಂ ಸುತಾಂಬೂಲಂ ದದೌ ತಸ್ಮೈ ದೃಢವ್ರತಾ ॥ ೨೭೫ ॥

ಅಸ್ತಂ ಯಾತೇ ದಿನಕರೇ ಸಂಧ್ಯಾಮುಪಾಸ್ಯ ಯಾದವಃ ।
ಸಹಿತೋ ರಾಮಕೃಷ್ಣಾಭ್ಯಾಂ ಭುಕ್ತ್ವಾ ಕ್ಷೀರಾನ್ನಮುತ್ತಮಂ ॥ ೨೭೬ ॥

ತಾಭ್ಯಾಮೇವ ತದಾಕ್ರೂರಃ ಶಯನಂ ಸಮುಪಾವಿಶತ್ ।
ತಸ್ಮಿಂಸ್ತು ಭವನೇ ಶ್ರೇಷ್ಠೇ ರಮ್ಯೇ ದೀಪವಿರಾಜಿತೇ ॥ ೨೭೭ ॥

ಶ್ಲಕ್ಷ್ಣೇ ವಿಚಿತ್ರಪರ್ಯಂಕೇ ನಾನಾಪುಷ್ಪವಿರಾಜಿತೇ ।
ತಸ್ಮಿನ್ ಶೇತೇ ಹರಿಃ ಕೃಷ್ಣಃ ಶೇಷೇ ನಾರಾಯಣೋ ಯಥಾ ॥ ೨೭೮ ॥

---

ಯಶೋದೆಯು ಬಡಿಸಿದ ನಿರ್ಮಲವಾದ ಉತ್ತಮವಾದ ಅನ್ನವನ್ನು ಸಂತೋಷ ದಿಂದ ಊಟಮಾಡಿದರು.

೨೭೫. ನ್ಯಾಯವಾದ ರೀತಿಯಲ್ಲಿ ಊಟಮಾಡಿಸಿ ಅನಂತರ ಶುದ್ಧಾ ಚಮನವನ್ನು ಮಾಡಿಸಿ ಯಶೋದೆಯು ಪಚ್ಚಕರ್ಪೂರದೊಡನೆ ಕೂಡಿದ ಒಳ್ಳೆಯ ತಾಂಬೂಲವನ್ನು ಆ ಅಕ್ರೂರನಿಗೆ ಕೊಟ್ಟಳು.

೨೭೬-೨೭೮. ಅನಂತರ ಸೂರ್ಯನು ಮುಳುಗಲು ಆ ಅಕ್ರೂರನು ಸಂಧ್ಯಾ ವಂದನೆಯನ್ನು ಮಾಡಿ ರಾಮಕೃಷ್ಣರೊಡನೆ ಉತ್ತಮವಾದ ಹಾಲನ್ನವನ್ನು ಊಟಮಾಡಿ ಅವರೊಡನೆಯೇ ಮಲಗಿಕೊಂಡನು. ಶ್ರೀ ಕೃಷ್ಣನು ದೀಪದಿಂದ ಪ್ರಕಾಶಮಾನವಾದ ಆ ಉತ್ತಮವಾದ ಮನೆಯಲ್ಲಿ ಮೆತ್ತಗೂ ನುಣ್ಣಗೂ ಇರುವ ಹಾಸಿಗೆಯಿರುವ ಮಂಚದ ಮೇಲೆ ನಾರಾಯಣನು ಆದಿಶೇಷನ ಮೇಲೆ ಮಲಗು ವಂತೆ ಮಲಗಿದನು.

ತಂ ದೃಷ್ಟ್ವಾ ಸಹಸಾಕ್ರೂರೋ ಹರ್ಷಾಶ್ರುಪುಲಕಾಂಕಿತಃ ।
ವಿಹಾಯ ತಾಮಸೀಂ ನಿದ್ರಾಂ ಸುಶ್ರೇಯಃ ಸಮುದೀಕ್ಷ್ಯ ವೈ ॥ ೨೭೯ ॥

ಪಾದಸಂವಾಹನಂ ವಿಷ್ಣೋಶ್ಚಕ್ರೇ ಭಾಗವತೋತ್ತಮಃ ।
ಏತಾವತಾ ಮೇ ಸಾಫಲ್ಯಂ ಜೀವಿತಂ ಚ ಸುಜೀವಿತಂ ॥ ೨೮೦ ॥

ಇದಂ ತ್ರೈಲೋಕ್ಯಮೈಶ್ವರ್ಯಮಿದಂ ವೈ ಸುಖಮುತ್ತಮಂ ।
ಇದಂ ರಾಜ್ಯಮಿದಂ ಧರ್ಮಮಿದಂ ಮೋಕ್ಷಸುಖಂ ಪರಂ ॥ ೨೮೧ ॥

ನ ಶಕ್ಯಂ ಮನಸಾ ಸ್ಮರ್ತುಂ ಶಿವಬ್ರಹ್ಮಾದಿದೈವತೈಃ ।
ಸನಕಾದ್ಯೈರ್ಮುನೀಂದ್ರೈಶ್ಚ ವಸಿಷ್ಠಾದ್ಯೈರ್ಮಹರ್ಷಿಭಿಃ ॥ ೨೮೨ ॥

ತಚ್ಛ್ರೀಶಸ್ಯ ಪದದ್ವಂದ್ವಂ ಶರದಂಬುರುಹೋಜ್ಜ್ವಲಂ ।
ಸಂಸ್ಪೃಷ್ಟಮಿಂದಿರಾಶ್ಲಕ್ಷ್ಣಕರಾಭ್ಯಾಂ ಸುಸುಖಂ ಪರಂ ॥ ೨೮೩ ॥

---

೨೭೯-೨೮೦. ಆ ಕೃಷ್ಣನು ಮಲಗಿದುದನ್ನು ನೋಡಿ ಅಕ್ರೂರನು ಸಂತೋಷದಿಂದ ತನಗೆ ಶ್ರೇಯಸ್ಸಾಧಕವಾದ ಪದಾರ್ಥವು ಸಿಕ್ಕಿತೆಂದು ತಿಳಿದು ತಾಮಸವಾದ ನಿದ್ದೆಯನ್ನು ಬಿಟ್ಟು ಆ ವಿಷ್ಣುವಿನ ಪಾದಸೇವೆಯನ್ನು ಮಾಡುತ್ತಲಿದ್ದನು ಇಷ್ಟರಿಂದಲೇ ನನ್ನ ಜನ್ಮವು ಸಾಫಲ್ಯವಾಯಿತು. ಜೀವಿತವು ಸುಜೀವಿತವಾಯಿತು ಎಂದು ತಿಳಿದನು.

೨೮೧. ಇದೇ ಮೂರು ಲೋಕದ ಐಶ್ವರ್ಯವು. ಇದೇ ಉತ್ತಮವಾದ ಸುಖವು. ಇದೇ ರಾಜ್ಯವು. ಇದೇ ಧರ್ಮವು. ಇದೇ ಉತ್ತಮವಾದ ಮೋಕ್ಷ ಸುಖವು. ಎಂದುಕೊಂಡನು.

೨೮೨–೨೮೩. ಈ ಸೇವೆಯು ಶಿವ ಬ್ರಹ್ಮಾದಿ ದೇವತೆಗಳೂ ಸನಕಾದಿ ಮುನೀಂದ್ರರೂ ವಸಿಷ್ಠಾದಿ ಮುನೀಂದ್ರರೂ ಯಾರೇ ಆಗಲಿ ಅವರು ಮನಸ್ಸಿನಿಂದಲೂ ಕೂಡ ಸ್ಮರಿಸಲೂ ಆಗದಿರುವುದು. ಅಂತಹ ಶರತ್ಕಾಲದ ಪದ್ಮದಂತೆ ಮನೋಹರವಾದ ಲಕ್ಷ್ಮೀಪತಿಯ ಪಾದ ಪದ್ಮವನ್ನು ನಾನು ನನ್ನ ಕೈಯ್ಯಿಂದಲೇ ಮುಟ್ಟಿ ಸೇವಿಸುತ್ತಿದ್ದೇನೆ. ಇದೇ ಉತ್ತಮೋತ್ತಮವಾದ ಸುಖಕರವಾದ ಸೇವೆಯು.

ದಿಷ್ಟ್ಯಾ ಲಬ್ಧಂ ಮಯಾ ವಿಷ್ಣೋಃ ಶ್ರೀಪದಾಬ್ಜಯುಗಂ ಶುಭಂ ।
ವ್ಯತೀತಾ ಸಾ ಕ್ಷಣಾದ್ರಾತ್ರಿಸ್ತದ್ಬ್ರಹ್ಮಾನಂದಗೌರವಾತ್ ॥ ೨೮೪ ॥

ತತಃ ಪ್ರಭಾತೇ ವಿಮಲೇ ದಿವಿ ದೇವಗಣೋತ್ತಮೈಃ ।
ಸಂಸ್ತೂಯಮಾನೋ ಬುಬುಧೇ ತಸ್ಮಾತ್ತು ಶಯನಾದ್ಧರಿಃ ॥ ೨೮೫ ॥

ಉಪಸ್ಪೃಶ್ಯ ಯಥಾನ್ಯಾಯಂ ಸಹ ರಾಮೇಣ ಧೀಮತಾ ।
ಪಪಾತ ಪಾದಯೋರ್ಮಾತುಃ ಪ್ರಯಾಣಂ ಚಾಭ್ಯರೋಚಯತ್॥ ೨೮೬ ॥

ಸಮುತ್ಥಾಪ್ಯ ಯಶೋದಾ ತು ದುಃಖಹರ್ಷಸಮನ್ವಿತಾ ।
ಅಶ್ರುಪೂರ್ಣಮುಖೀ ಪುತ್ರೌ ಪ್ರೇಮ್ಣಾ ಸಂಪರಿಷಸ್ವಜೇ ॥ ೨೮೭ ॥

---

೨೮೪. ನನಗೆ ನನ್ನ ಅದೃಷ್ಟದ ದೆಸೆಯಿಂದಲೇ ಈ ವಿಷ್ಣುವಿನ ಪಾದ ಕಮಲಗಳ ಸೇವೆ ಸಿಕ್ಕಿದೆ ಎಂದುಕೊಳ್ಳುತ್ತಿದ್ದನು. ಹೀಗೆ ಅವನು ಸೇವೆಮಾಡುತ್ತಿರಲು ಆ ಪರಬ್ರಹ್ಮನಲ್ಲಿನ ಆನಂದದ ಗೌರವದಿಂದ ಆ ರಾತ್ರಿಯು ಒಂದು ಕ್ಷಣವಾಗಿ ಕಳೆದುಹೋಯಿತು.

೨೮೫. ಅನಂತರ ಬೆಳಗಾಗಲು ದೇವತೆಗಳು ಸ್ತುತಿಸುತ್ತಿರಲು ಅವರು ಸುಪ್ರಭಾತವನ್ನು ಹೇಳುತ್ತಿರುವಂತೆಯೇ ಹರಿಯು ಹಾಸಿಗೆಯಿಂದ ಮೇಲಕ್ಕೆದ್ದನು.

೨೮೬. ಅನಂತರ ಸ್ನಾನಾಹ್ನಿಕಗಳನ್ನು ಮಾಡಿಕೊಂಡು ತಾಯಿಯ ಪಾದಗಳಿಗೆ ನಮಸ್ಕರಿಸಿ ರಾಮನೊಡನೆ ಪ್ರಯಾಣಕ್ಕೆ ಸಿದ್ಧನಾದನು.

೨೮೭. ಆ ಯಶೋದೆಯು ಅವರಿಬ್ಬರೂ ನಮಸ್ಕರಿಸುತ್ತಿರಲು ಹಿಡಿದು ಮೇಲಕ್ಕೆತ್ತಿ ಕಣ್ಣಿನಲ್ಲಿ ನೀರನ್ನು ತುಂಬಿಕೊಂಡು ಪ್ರೀತಿಯಿಂದ ಆಲಂಗಿಸಿಕೊಂಡಳು. ಮತ್ತು ದುಷ್ಟರ ಮನೆಗೆ ಹೋಗುವನಲ್ಲ. ಎಂಬ ದುಃಖವೂ ಅವರನ್ನು ಸಂಹರಿಸಬಲ್ಲನೆಂಬ ಸಂತೋಷವೂ ಇದ್ದುವು.

ಆಶಿಷಂ ಪ್ರದದೌ ದೇವೀ ತನಯಾಭ್ಯಾಂ ದೃಢವ್ರತಾ ।
ವಿಸಸರ್ಜ ಮಹಾವೀರೌ ಸಮಾಲಿಂಗ್ಯ ಮುಹುರ್ಮುಹುಃ ॥
ಅಕ್ರೂರೋಽಪಿ ಯಶೋದಾಯೈ ಪ್ರಣಮ್ಯ ಪ್ರಾಹ ಪ್ರಾಂಜಲಿಃ ॥ ೨೮೮ ॥

॥ ಅಕ್ರೂರ ಉವಾಚ ॥

ಪ್ರಯಾಸ್ಯಾಮಿ ಮಹಾಭಾಗೇ ಪ್ರಸಾದಂ ಕುರು ಮೇಽನಘೇ ।
ಏಷ ಕೃಷ್ಣೋ ಮಹಾಬಾಹುಃ ಕಂಸಂ ಹತ್ವಾ ಮಹಾಬಲಂ ॥ ೨೮೯ ॥

ಸರ್ವಸ್ಯ ಜಗತೋ ರಾಜಾ ಭವಿಷ್ಯತಿ ನ ಸಂಶಯಃ ।
ತಸ್ಮಾಚ್ಛೋಕಂ ಪರಿತ್ಯಜ್ಯ ಸುಖೀಭವ ವರಾನನೇ ॥ ೨೯೦ ॥

॥ ಈಶ್ವರ ಉವಾಚ ॥

ಇತ್ಯುಕ್ತ್ವಾ ಸ ತಯಾಕ್ರೂರೋ ವಿಸೃಷ್ಟೋ ಯದುಸತ್ತಮಃ ।
ಸಹಿತೋ ರಾಮಕೃಷ್ಣಾಭ್ಯಾಮಾರುರೋಹ ರಥೋತ್ತಮಂ ॥ ೨೯೧ ॥

---

೨೮೮. ಆ ಯಶೋದೆಯು ಅವರಿಬ್ಬರಿಗೂ ಆಶೀರ್ವಾದವನ್ನು ಮಾಡಿದಳು. ಅನಂತರ ಮತ್ತೆ ಮತ್ತೆ ಆಲಂಗಿಸಿಕೊಳ್ಳುತ್ತ ಕಳುಹಿಸಿಕೊಟ್ಟಳು. ಅಕ್ರೂರನೂ ಕೂಡ ಯಶೋದೆಗೆ ಪ್ರೀತಿಯಿಂದ ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದನು.

೭೮೯–೨೯೦. ಅಕ್ರೂರನು ಹೇಳಿದನು—ಎಲೈ ಪುಣ್ಯಾತ್ಮಳಾದ ಯಶೋದೆಯೆ! ನಾನು ಹೊರಡುತ್ತೇನೆ. ಅನುಗ್ರಹಿಸಿ ಅಪ್ಪಣೆಯನ್ನು ಕೊಡು. ಈ ಮಹಾಬಾಹುವಾದ ಕೃಷ್ಣನು ಮಹಾಬಲಿಷ್ಠನಾದ ಕಂಸನನ್ನು ಕೊಂದು ಎಲ್ಲಾ ರಾಜ್ಯಕ್ಕೂ ದೊರೆಯಾಗುವನು. ಆದ್ದರಿಂದ ಶೋಕವನ್ನು ಬಿಟ್ಟು ಸುಖದಿಂದಿರು

೨೯೧. ಈಶ್ವರನು ಹೇಳಿದನು—ಹೀಗೆ ಹೇಳಿ ಅಕ್ರೂರನು ಅವಳ ಅಪ್ಪಣೆಯನ್ನು ತೆಗೆದುಕೊಂಡು ರಾಮಕೃಷ್ಣರೊಡನೆ ರಥವನ್ನು ಹತ್ತಿದನು.

ಪ್ರಯಯೌ ಮಥುರಾಂ ಶೀಘ್ರಂ ಸ್ತೂಯಮಾನೋಽಪ್ಸರೋಗಣೈಃ ।
ನಂದಗೋಪಮುಖಾಸ್ಸರ್ವೇ ಗೋಪವೃದ್ಧಾಸ್ತಮನ್ವಯುಃ ॥ ೨೯೨ ॥

ಗೃಹೀತ್ವಾ ಬಹುದಧ್ಯಾಜ್ಯಂ ಫಲಾನಿ ವಿವಿಧಾನಿ ಚ ।
ತಂ ಪ್ರಯಾಂತಂ ಹರಿಂ ದೃಷ್ಟ್ವಾ ಗೋಕುಲಾದ್ಗೋಪಯೋಷಿತಃ॥೨೯೩॥

ಅನುಜಗ್ಮುರ್ವಿನಿಷ್ಕ್ರಾಂತಂ ರಥಸ್ಥಂ ಮಧುಸೂದನಂ ।
ನಿವರ್ತಯಾಮಾಸ ಹರಿಸ್ತಾಃ ಸರ್ವಾ ಗೋಪಯೋಷಿತಃ ॥ ೨೯೪ ॥

ಶೋಕಸಂತಪ್ತಹೃದಯಾ ವಿಲೇಪುಃ ಕಮಲೇಕ್ಷಣಾಃ ।
ಹಾ ಕೃಷ್ಣ ಕೃಷ್ಣ ಕೃಷ್ಣೇತಿ ಗೋವಿಂದೇತ್ಯರುದನ್ ಮುಹುಃ ॥ ೨೯೫ ॥

ಅಶ್ರುಪೂರ್ಣೇಕ್ಷಣಾ ದೀನಾ ರುದತ್ಯಸ್ತತ್ರ ಸಂಸ್ಥಿತಾಃ ।
ಅಥಾಕ್ರೂರೋ ರಥಂ ದಿವ್ಯಂ ಚೋದಯಾಮಾಸ ಗೋವ್ರಜಾತ್ ॥೨೯೬॥

---

೨೯೨. ಅಪ್ಸರ ಸ್ತ್ರೀಯರು ಹೊಗಳುತ್ತಿರಲು ರಾಮಕೃಷ್ಣರು ಮಥುರೆಗೆ ಹೊರಟರು. ಹೊರಟ ಆ ಶ್ರೀ ಕೃಷ್ಣನನ್ನು ನಂದಗೋಪನೇ ಮುಂತಾದ ದೊಡ್ಡ ದೊಡ್ಡ ಗೋಪರು ಅನುಸರಿಸಿ ಹೊರಟರು.

೨೯೩-೨೯೪. ಆಗ ಗೋಪರೆಲ್ಲರೂ ಬಹುವಾಗಿ ಹಾಲು ಮೊಸರನ್ನೂ ಬಗೆಬಗೆಯಾದ ಹಣ್ಣುಗಳನ್ನೂ ಜೊತೆಯಲ್ಲಿ ತೆಗೆದುಕೊಂಡು ಹೊರಟರು. ಹರಿಯು ಪ್ರಯಾಣಮಾಡುತ್ತಿರುವುದನ್ನು ನೋಡಿ ಗೋಕುಲದ ಗೋಪಿಯರು ಅವನನ್ನು ಅನುಸರಿಸಿ ಹೊರಟರು. ಆಗ ಕೃಷ್ಣನು ಅವರನ್ನೆಲ್ಲಾ ಹಿಂದಕ್ಕೆ ಕಳುಹಿಸಿದನು.

೨೯೫. ಆಗ ಆ ಹೆಂಗಸರೆಲ್ಲರೂ ಶೋಕಗೊಂಡು ಹಾ ಕೃಷ್ಣ ! ಹಾ ಕೃಷ್ಣ! ಹಾ ಕೃಷ್ಣ! ಹಾ ಗೋವಿಂದ! ಎಂದೆನ್ನುತ್ತಾ ದುಃಖಿಸಿದರು.

೨೯೬. ಅವರೆಲ್ಲರೂ ಕಣ್ಣೀರು ಸುರಿಸುತ್ತ ಅಳುತ್ತ ಅಲ್ಲಿಯೇ ನಿಂತಿದ್ದರು. ಅನಂತರ ಅಕ್ರೂರನು ಆ ಹಳ್ಳಿಯಿಂದ ರಥವನ್ನು ಮುಂದಕ್ಕೆ ಬಿಡಿಸಿದನು.

**ಸಹಿತೋ ರಾಮಕೃಷ್ಣಾಭ್ಯಾಂ ಮಧುರಾಂ ಪ್ರತಿ ಯಾದವಃ |**
**ಉತ್ತೀರ್ಯ ಯಮುನಾಂ ಶೀಘ್ರಂ ಕೂಲೇ ಸ್ಥಾಪ್ಯ ರಥೋತ್ತಮಂ|| ೨೯೭ ||**

**ಅವರುಹ್ಯ ರಥಾತ್ತಸ್ಮಾತ್ ಸ್ನಾತುಂ ತತ್ರೋಪಚಕ್ರಮೇ |**
**ತಥಾ ಚಾವಶ್ಯಕಂ ಕರ್ತುಂ ನಿಮಜ್ಜ್ಯಾಥ ಜಲೇ ಶುಭೇ || ೨೯೮ ||**

**ತತ್ರಾಘಮರ್ಷಣಂ ಸಮ್ಯಕ್ ಜಪನ್ ಭಾಗವತೋತ್ತಮಃ |**
**ದದರ್ಶ ತೌ ಜಲೇ ತತ್ರ ರಾಮಕೃಷ್ಣೌ ಶುಭಾನ್ವಿತೌ || ೨೯೯ ||**

**ಶರತ್ಕೋಟೀಂದುಸಂಕಾಶಂ ನೀಲಾಂಬರಧರಂ ಪ್ರಭುಂ |**
**ದಿವ್ಯಚಂದನದಿಗ್ಧಾಂಗಂ ಮೌಕ್ತಿಕಾಭರಣಚ್ಛವಿಂ || ೩೦೦ ||**

**ರಕ್ತಾರವಿಂದನಯನಂ ಪುಂಡರೀಕಾವತಂಸಕಂ |**
**ರಾಮಂ ದದರ್ಶ ಕೃಷ್ಣಂ ಚ ನೀಲನೀರದಸನ್ನಿಭಂ || ೩೦೧ ||**

---

೨೯೭–೨೯೮. ಆ ಅಕ್ರೂರನು ರಾಮಕೃಷ್ಣರನ್ನು ಜೊತೆಯಲ್ಲಿ ಕರೆದುಕೊಂಡು ಹೊರಟನು. ಯಮುನಾ ನದಿಯ ಬಳಿಗೆ ಬಂದು ಯಮುನಾ ನದಿಯನ್ನು ದಾಟಿ ಆಚೆಯ ದಡದಲ್ಲಿ ರಥವನ್ನು ನಿಲ್ಲಿಸಿ ರಥದಿಂದ ಕೆಳಕ್ಕೆ ಇಳಿದು ಸ್ನಾನಮಾಡಲು ಮೊದಲುಮಾಡಿದನು. ಅನಂತರ ಮೊದಲು ಒಂದು ಸ್ನಾನವನ್ನು ಮಾಡಿ ಅವಶ್ಯಕವಾದ ನಿಯಮಗಳನ್ನು ಆಚರಿಸಲು ಉಪಕ್ರಮಿಸಿದನು.

೨೯೯-೩೦೧. ಆ ನೀರಿನಲ್ಲಿ ಅಘಮರ್ಷಣ ಸೂಕ್ತವನ್ನು ಜಪಿಸುತ್ತ ಆ ಅಕ್ರೂರನು ನೀರಿನಲ್ಲಿ ರಾಮಕೃಷ್ಣರನ್ನು ನೋಡಿದನು. ಅದರಲ್ಲಿ ಬಲರಾಮನು ಶರತ್ಕಾಲದ ಕೋಟಿಜನ ಚಂದ್ರರಂತೆ ಪ್ರಕಾಶವುಳ್ಳವನಾಗಿದ್ದನು. ನೀಲವಾದ ಬಟ್ಟೆಯನ್ನು ಧರಿಸಿದ್ದನು. ದಿವ್ಯವಾದ ಚಂದನವನ್ನು ಪೂಸಿಕೊಂಡಿದ್ದನು. ಮುತ್ತಿನ ಆಭರಣಗಳನ್ನು ಧರಿಸಿದ್ದನು. ಕೆಂಪು ತಾವರೆಯಂತೆ ಕಣ್ಣುಗಳಿದ್ದುವು. ಪುಂಡರೀಕವನ್ನು ತಲೆಗೆ ಮುಡಿದುಕೊಂಡಿದ್ದನು. ಅನಂತರ ಕೃಷ್ಣನನ್ನು ನೋಡಲು ಅವನು ಕಾಲಮೇಘದ ವರ್ಣವನ್ನು ಹೊಂದಿದ್ದನು.

ದಿವ್ಯಪೀತಾಂಬರಧರಂ ಪುಂಡರೀಕಾಯತೇಕ್ಷಣಂ ।
ಹರಿಚಂದನಲಿಪ್ತಾಂಗಂ ನಾನಾರತ್ನವಿಭೂಷಿತಂ ॥ ೩೦೨ ॥

ದೃಷ್ಟ್ವಾ ತತ್ರ ಯದುಶ್ರೇಷ್ಠೋ ವಿಸ್ಮಯಂ ಪರಮಂ ಗತಃ ।
ಉತ್ಥಾಯ ಸ್ಯಂದನೇ ತತ್ರ ತೌ ದದರ್ಶ ಮಹಾಬಲೌ ॥ ೩೦೩ ॥

ಪುನರಪ್ಯತ್ರ ನಿರ್ಮಜ್ಜ್ಯ ಜಪನ್ ಮಂತ್ರದ್ವಯಂ ಹರಿಃ ।
ಸುಧಾಬ್ಧೌ ಶೇಷಪರ್ಯಂಕೇ ರಮಯಾ ಸಹಿತಂ ಹರಿಂ ॥ ೩೦೪ ॥

ಸನಕಾದ್ಯೈಸ್ಸ್ತೂಯಮಾನಂ ಸರ್ವದೇವೈರುಪಾಸಿತಂ ।
ದೃಷ್ಟ್ವಾ ತಸ್ಮಿನ್ ಜಲೇ ದೇವಂ ವಿಸ್ಮಯಂ ಪರಮಂ ಯಯೌ
ತುಷ್ಟಾವಾಥ ಯದುಶ್ರೇಷ್ಠೋ ಹರಿಂ ಸರ್ವಗಮೀಶ್ವರಂ ॥ ೩೦೫ ॥

---

೩೦೨. ಆ ಸ್ವಾಮಿಯಾದ ಕೃಷ್ಣನು ಪೀತಾಂಬರವನ್ನು ಧರಿಸಿದ್ದನು. ಪುಂಡರೀಕದಂತೆ ಕಣ್ಣುಗಳಿದ್ದುವು. ಹರಿಚಂದನವನ್ನು ಮೈಗೆಲ್ಲಾ ಬಳಿದು ಕೊಂಡಿದ್ದನು. ಅನೇಕ ಬಗೆಯಾದ ರತ್ನಗಳನ್ನು ಧರಿಸಿದ್ದನು.

೩೦೩. ಆ ರಾಮಕೃಷ್ಣರಿಬ್ಬರನ್ನೂ ನೀರಿನಲ್ಲಿ ನೋಡಿ ಬಹುವಾಗಿ ಆಶ್ಚರ್ಯ ಗೊಂಡನು. ಅನಂತರ ಅವರೆಲ್ಲಿದ್ದಾರೆಂದು ಎದ್ದು ನೋಡಲು ಅವರು ರಥದ ಲ್ಲಿಯೇ ಕುಳಿತಿದ್ದರು. ಅದನ್ನೂ ನೋಡಿದನು.

೩೦೪–೩೦೫. ಮತ್ತೆ ನೀರಿಗೆ ಹೋಗಿ ಸ್ನಾನಮಾಡಿ ಎರಡು ಮಂತ್ರ ಗಳನ್ನು ಜಪಿಸಿದನು. ಆಗ ಕ್ಷೀರಸಮುದ್ರದಲ್ಲಿ ಶೇಷನ ಹಾಸಿಗೆಯಲ್ಲಿ ರಮಾ ದೇವಿಯೊಡನೆ ಮಲಗಿರುವ, ಸನಕಾದಿಗಳಿಂದ ಸ್ತುತಿಸಲ್ಪಡುತ್ತಿರುವ, ಎಲ್ಲಾ ದೇವರೂ ಸೇವಿಸುತ್ತಿರುವಂತಿರುವ ಆ ಸ್ವಾಮಿಯನ್ನು ನೋಡಿದನು. ಆ ಸ್ವಾಮಿಯನ್ನು ನೀರಿನೊಳಗೆ ನೋಡಿ ಬಹುವಾಗಿ ಆಶ್ಚರ್ಯಗೊಂಡನು. ಆಗ ಬಹು ಸಂತೋಷದಿಂದ ಅಕ್ರೂರನು ಸ್ವಾಮಿಯನ್ನು ಸ್ತುತಿಸಿದನು.

॥ ಅಕ್ರೂರ ಉವಾಚ ॥

ಕಾಲಾತ್ಮನೇ ನಮಸ್ತುಭ್ಯಮನಾದಿನಿಧನಾಯ ಚ ।
ಅವ್ಯಕ್ತಾಯ ನಮಸ್ತುಭ್ಯಮವಿಕಾರಾಯ ತೇ ನಮಃ ॥ ೩೦೬ ॥

ಭೂತಭರ್ತ್ರೇ ನಮಸ್ತುಭ್ಯಂ ಭೂತವ್ಯಾಪ್ತ್ರೇ ನಮೋ ನಮಃ ।
ನಮಸ್ತೇ ಸರ್ವಭೂತಾನಾಂ ನಿಯಂತ್ರೇ ಪರಮಾತ್ಮನೇ ॥ ೩೦೭ ॥

ವಿಕಾರಾಯಾವಿಕಾರಾಯ ಪ್ರತ್ಯಕ್ಷಪುರುಷಾಯ ಚ ।
ಗುಣಭರ್ತ್ರೇ ನಮಸ್ತುಭ್ಯಂ ನಿಯಮಾಯ ನಮೋ ನಮಃ ॥ ೩೦೮ ॥

ದೇಶಕಾಲಾದಿನಿರ್ಭೇದರಹಿತಾಯ ಪರಾತ್ಮನೇ ।
ಅನನ್ತಾಯ ನಮಸ್ತುಭ್ಯಂ ಅಚ್ಯುತಾಯ ನಮೋ ನಮಃ ॥ ೩೦೯ ॥

---

೩೦೬. ಅಕ್ರೂರನು ಹೇಳಿದನು—ಕಾಲಸ್ವರೂಪನಾದ ನಿನಗೆ ನಮಸ್ಕಾರವು. ಆದಿ ಅಂತಗಳು ಇಲ್ಲದಿರುವ ನಿನಗೆ ನಮಸ್ಕಾರವು. ವ್ಯಕ್ತನಾಗಿ ಕಾಣದಿರುವ ನಿನಗೆ ನಮಸ್ಕಾರವು. ವಿಕಾರವನ್ನು ಹೊಂದಿರುವ ನಿನಗೆ ನಮಸ್ಕಾರವು.

೩೦೭–೩೦೮. ಪಂಚಭೂತಗಳಿಗೆ ಒಡೆಯನಾದ ನಿನಗೆ ನಮಸ್ಕಾರವು. ಭೂತಶ್ರೇಷ್ಠನಾದ ನಿನಗೆ ನಮಸ್ಕಾರವು. ಎಲ್ಲಾ ಪ್ರಾಣಿಗಳನ್ನೂ ನಿಯಮಿಸುವ ನಿನಗೆ ನಮಸ್ಕಾರವು. ಪರಮಾತ್ಮನಾದ ನಿನಗೆ ನಮಸ್ಕಾರವು. ವಿಕಾರ ರೂಪಿಯಾದ ನಿನಗೆ ನಮಸ್ಕಾರವು. ವಿಕಾರವನ್ನು ಹೊಂದದ ನಿನಗೆ ನಮಸ್ಕಾರವು. ಪ್ರತ್ಯಕ್ಷ ಪುರುಷನಾದ ನಿನಗೆ ನಮಸ್ಕಾರವು. ಗುಣಗಳಿಗೆ ಒಡೆಯನಾದ ನಿನಗೆ ನಮಸ್ಕಾರವು. ನಿಯಮ ಸ್ವರೂಪನಾದ ನಿನಗೆ ನಮಸ್ಕಾರವು.

೩೦೯–೩೧೦. ದೇಶ ಕಾಲಗಳ ವ್ಯತ್ಯಾಸವಿಲ್ಲದಿರುವ ನಿನಗೆ ನಮಸ್ಕಾರವು. ಪರಸ್ವರೂಪನಾದ ನಿನಗೆ ನಮಸ್ಕಾರವು. ಅನಂತ ಸ್ವರೂಪನಾದ ನಿನಗೆ ನಮಸ್ಕಾರವು. ವೇದಸ್ವರೂಪನಾದ ನಿನಗೆ ನಮಸ್ಕಾರವು. ನಾರಾಯಣನಾದ

ಗೋವಿಂದಾಯ ನಮಸ್ತುಭ್ಯಂ ತ್ರಯೀರೂಪಾಯ ಶಾಂರ್ಗಿಣೇ ।
ನಾರಾಯಣಾಯ ವಿಶ್ವಾಯ ವಾಸುದೇವಾಯ ತೇ ನಮಃ ॥ ೩೧೦ ॥

ವಿಷ್ಣವೇ ಪುರುಷಾಯಾಥ ಶಾಶ್ವತಾಯ ನಮೋ ನಮಃ ।
ಪದ್ಮನೇತ್ರಾಯ ನಿತ್ಯಾಯ ಶಂಖಚಕ್ರಧರಾಯ ಚ ॥ ೩೧೧ ॥

ಉದ್ಯತ್ಕೋಟಿರವಿಪ್ರಖ್ಯಭೂಷಣಾನ್ವಿತವರ್ಚಸೇ ।
ಹರಯೇ ಸರ್ವಲೋಕಾನಾಮೀಶ್ವರಾಯ ನಮೋ ನಮಃ ॥ ೩೧೨ ॥

ಸವಿತ್ರೇ ಸರ್ವಜಗತಾಂ ಬೀಜಾಯ ಪರಮಾತ್ಮನೇ ।
ಸಂಕರ್ಷಣಾಯ ಕೃಷ್ಣಾಯ ಪ್ರದ್ಯುಮ್ನಾಯ ನಮೋ ನಮಃ ॥ ೩೧೩ ॥

ಅನಿರುದ್ಧಾಯ ಧಾಮ್ನೇ ಚ ವಿಧಾತ್ರೇ ವಿಶ್ವಯೋನಯೇ ।
ಸಹಸ್ರಮೂರ್ತಯೇ ತುಭ್ಯಂ ಬಹುಮೂರ್ಧಾಂಘ್ರಿಬಾಹವೇ ॥ ೩೧೪ ॥

---

ನಿನಗೆ ನಮಸ್ಕಾರವು. ವಿಶ್ವಸ್ವರೂಪನಾದ ನಿನಗೆ ನಮಸ್ಕಾರವು. ವಾಸುದೇವನಾದ ನಿನಗೆ ನಮಸ್ಕಾರವು.

೩೧೧–೩೧೨. ವಿಷ್ಣುವಾದ ನಿನಗೆ ನಮಸ್ಕಾರವು. ಪುರಷಸ್ವರೂಪನಾದ ನಿನಗೆ ನಮಸ್ಕಾರವು. ಶಾಶ್ವತನಾದ ನಿನಗೆ ನಮಸ್ಕಾರವು. ಪದ್ಮದಂತೆ ಕಣ್ಣುಳ್ಳ ನಿನಗೆ ನಮಸ್ಕಾರವು. ನಿತ್ಯಸ್ವರೂಪನಾದ ನಿನಗೆ ನಮಸ್ಕಾರವು. ಶಂಖ ಚಕ್ರಗಳನ್ನು ಧರಿಸಿರುವ ನಿನಗೆ ನಮಸ್ಕಾರವು. ಉದಯಿಸುತ್ತಿರುವ ಕೋಟಿ ಜನ ಸೂರ್ಯರಂತೆ ಬೆಳಕುಳ್ಳ ನಿನಗೆ ನಮಸ್ಕಾರವು. ಒಡವೆಯನ್ನು ಹಾಕಿ ಕೊಂಡಿರುವ ನಿನಗೆ ನಮಸ್ಕಾರವು. ಹರಿಯಾದ ನಿನಗೆ ನಮಸ್ಕಾರವು. ಎಲ್ಲಾ ಲೋಕಗಳಿಗೂ ಈಶ್ವರನಾದ ನಿನಗೆ ನಮಸ್ಕಾರವು.

೩೧೩–೩೧೪. ಎಲ್ಲಾ ಜಗತ್ತನ್ನೂ ಉತ್ಪತ್ತಿ ಮಾಡಿದ ನಿನಗೆ ನಮಸ್ಕಾರವು. ಸಂಕರ್ಷಣನಾದ ನಿನಗೆ ನಮಸ್ಕಾರವು. ಎಲ್ಲಾ ಲೋಕಕ್ಕೂ ಬೀಜಸ್ವರೂಪನಾದ ನಿನಗೆ ನಮಸ್ಕಾರವು. ಕೃಷ್ಣನಾದ ನಿನಗೆ ನಮಸ್ಕಾರವು. ಪ್ರದ್ಯುಮ್ನನಾದ ನಿನಗೆ ನಮಸ್ಕಾರವು. ಅನಿರುದ್ಧನಾದ ನಿನಗೆ ನಮಸ್ಕಾರವು. ತೇಜೋವಂತನಾದ ನಿನಗೆ ನಮಸ್ಕಾರವು. ಸಹಸ್ರಮೂರ್ತಿಯಾದ ನಿನಗೆ ನಮಸ್ಕಾರವು. ಬಹುವಾದ ತಲೆ ತೋಳುಗಳುಳ್ಳ ನಿನಗೆ ನಮಸ್ಕಾರವು.

ಸಹಸ್ರನಾಮ್ನೇ ನಿತ್ಯಾಯ ಪುರುಷಾಯ ನಮೋ ನಮಃ ।
ನಮಸ್ತೇ ನಾಗಪರ್ಯಂಕಶಾಯಿನೇ ಸೌಮ್ಯರೂಪಿಣೇ ॥ ೩೧೫ ॥

ಕೇಶವಾಯ ನಮಸ್ತುಭ್ಯಂ ಪೀತವಸ್ತ್ರಧರಾಯ ಚ ।
ಲಕ್ಷ್ಮೀಘನಕುಚಾಶ್ಲೇಷವಿಮರ್ದೋಜ್ಜ್ವಲವರ್ಚಸೇ ॥
ಶ್ರೀಧರಾಯ ನಮಸ್ತುಭ್ಯಂ ಶ್ರೀಶಾಯಾನಂತರೂಪಿಣೇ ॥ ೩೧೬ ॥

॥ ಈಶ್ವರ ಉವಾಚ ॥

ಸ್ನಾನಕಾಲೇ ಪಠೇದ್ಯಸ್ತು ದೇವಂ ಧ್ಯಾಯನ್ ಸನಾತನಂ ।
ಇಮಂ ಸ್ತವಂ ನರೋ ಭಕ್ತ್ಯಾ ಮಹದ್ಭಿರ್ಮುಚ್ಯತೇ ಹ್ಯಘೈಃ ॥ ೩೧೭ ॥

ಸರ್ವತೀರ್ಥಫಲಂ ಪ್ರಾಪ್ಯ ವಿಷ್ಣುಸಾಯುಜ್ಯಮಾಪ್ನುಯಾತ್ ।
ಏವಮಂತರ್ಜಲೇ ದೇವಂ ಸ್ತುತ್ವಾ ಭಾಗವತೋತ್ತಮಃ ॥ ೩೧೮ ॥

---

೩೧೫-೩೧೬. ಸಾವಿರ ಹೆಸರುಗಳುಳ್ಳ ನಿನಗೆ ನಮಸ್ಕಾರವು. ನಿತ್ಯನಾದ ನಿನಗೆ ನಮಸ್ಕಾರವು. ನಿತ್ಯ ಪುರುಷನಾದ ನಿನಗೆ ನಮಸ್ಕಾರವು. ಶೇಷನ ದೇಹವೆಂಬ ಮಂಚದ ಮೇಲೆ ಮಲಗಿರುವ ನಿನಗೆ ನಮಸ್ಕಾರವು. ಸೌಮ್ಯ ವಾದ ರೂಪುಳ್ಳ ನಿನಗೆ ನಮಸ್ಕಾರವು. ಕೇಶವನಾದ ನಿನಗೆ ನಮಸ್ಕಾರವು. ಹೊಂಬಣ್ಣದ ಬಟ್ಟೆಗಳನ್ನು ಧರಿಸಿರುವ ನಿನಗೆ ನಮಸ್ಕಾರವು. ಲಕ್ಷ್ಮಿಯ ದಪ್ಪನಾದ ಸ್ತನಗಳನ್ನು ಮರ್ದಿಸುವುದರಿಂದ ತೇಜಸ್ಸನ್ನು ಹೆಚ್ಚಿಸಿಕೊಂಡಿರುವ ನಿನಗೆ ನಮಸ್ಕಾರವು. ಶ್ರೀಧರನಾದ ನಿನಗೆ ನಮಸ್ಕಾರವು. ಲಕ್ಷ್ಮೀಪತಿ ಯಾದ ನಿನಗೆ ನಮಸ್ಕಾರವು. ಅನಂತ ಸ್ವರೂಪಿಯಾದ ನಿನಗೆ ನಮಸ್ಕಾರವು.

೩೧೭. ಈಶ್ವರನು ಹೇಳಿದನು—ಸ್ನಾನಕಾಲದಲ್ಲಿ ಸ್ವಾಮಿಯನ್ನು ಸ್ಮರಿಸುತ್ತಾ ಈ ಸ್ತುತಿಯನ್ನು ಹೇಳಿದರೆ ಅವನ ಬಹುವಾದ ಪಾಪಗಳು ಹೋಗುತ್ತವೆ.

೩೧೮-೩೨೦. ಅವನಿಗೆ ಎಲ್ಲಾ ತೀರ್ಥಗಳ ಫಲವೂ ಬರುತ್ತದೆ. ಮತ್ತು ವಿಷ್ಣುಸಾಯುಜ್ಯವನ್ನು ಹೊಂದುತ್ತಾನೆ. ಆ ಅಕ್ರೂರನು ಹೀಗೆ ನೀರಿನಲ್ಲಿ

ಅರ್ಚಯಾಮಾಸ ಜಲಜೈಃ ಕುಸುಮೈಶ್ಚ ಸುಗಂಧಿಭಿಃ ।
ಕೃತಕೃತ್ಯಸ್ತದಾಕ್ರೂರೋ ನಿರ್ಗತ್ಯ ಯಮುನಾಜಲಾತ್ ॥ ೩೧೯ ॥

ಸಮೇತ್ಯ ರಾಮಕೃಷ್ಣೌ ತು ಪ್ರಣನಾಮ ಶುಭಾನ್ವಿತಃ ।
ತಂ ದೃಷ್ಟ್ವಾ ಪ್ರಾಹ ಗೋವಿಂದೋ ವಿನೀತಂ ವಿಸ್ಮಿತಂ ಹರಿಃ ॥ ೩೨೦ ॥

॥ ಕೃಷ್ಣ ಉವಾಚ ॥

ಕಿಮಾಶ್ಚರ್ಯಂ ಜಲೇ ತಸ್ಮಿನ್ ದೃಷ್ಟವಾನಸಿ ಯಾದವ ॥ ೩೨೧ ॥

॥ ಈಶ್ವರ ಉವಾಚ ॥

ಅಕ್ರೂರಸ್ತು ಯದುಶ್ರೇಷ್ಠಂ ಪ್ರಾಹ ಕೃಷ್ಣಂ ಮಹೌಜಸಂ ॥ ೩೨೨ ॥

॥ ಅಕ್ರೂರ ಉವಾಚ ॥

ತವ ಸರ್ವಗತಸ್ಯೇಶ ಮಹಿಮ್ನಾ ಜಗತಃ ಪ್ರಭೋ ।
ಕಿಮಾಶ್ಚರ್ಯಂ ಹೃಷೀಕೇಶ ಜಗತ್ಸರ್ವಂ ತ್ವಮೇವ ಹಿ ॥ ೩೨೩ ॥

---

ಸ್ವಾಮಿಯನ್ನು ಧ್ಯಾನಮಾಡಿ ಕಮಲವೇ ಮುಂತಾದ ಹೂಗಳಿಂದ ಪೂಜಿಸಿದನು. ಇಂತು ಪೂಜಿಸಿ ಯಮುನೆಯ ನೀರಿನಿಂದ ಹೊರಗೆ ಬಂದು ರಾಮಕೃಷ್ಣರ ಬಳಿಗೆ ಹೋಗಿ ನಮಸ್ಕರಿಸಿ ವಿನಯದಿಂದ ನಿಂತಿರುವ ಅಕ್ರೂರನನ್ನು ಕುರಿತು ಗೋವಿಂದನು ಇಂತೆಂದನು.

೩೨೧. ಕೃಷ್ಣನು ಹೇಳಿದನು–ಎಲೈ ಯಾದವನೇ ! ಯಮುನೆಯ ನೀರಿನೊಳಗೆ ಯಾವ ಆಶ್ಚರ್ಯವನ್ನು ಕಂಡೆ ?

೩೨೨. ಈಶ್ವರನು ಹೇಳಿದನು–ಆಗ ಆ ಅಕ್ರೂರನು ಯದುಶ್ರೇಷ್ಠನಾದ ಕೃಷ್ಣನನ್ನು ಕುರಿತು ಇಂತೆಂದನು.

೩೨೩. ಅಕ್ರೂರನು ಹೇಳಿದನು–ಎಲೈ ಸ್ವಾಮಿಯೆ ! ನಿನ್ನ ಮಹಿಮೆಯೇ ಎಲ್ಲಾ ಕಡೆಯಲ್ಲಿಯೂ ಹರಡಿಕೊಂಡಿರುವಾಗ ನಾನು ನೋಡಿದುದರಲ್ಲಿ ಆಶ್ಚರ್ಯವೇನಿದೆ ? ಎಲೈ ಹೃಷೀಕೇಶನೆ ! ನೀನೇ ಈ ಪ್ರಪಂಚಗಳ ಸ್ವರೂಪನಾಗಿದ್ದೀಯೆ.

ತ್ವಮಾಪಸ್ತ್ವಂ ನಭೋ ವಹ್ನಿಸ್ತ್ವಂ ಭೂಮಿರನಿಲಸ್ತಥಾ ।
ಚತುರ್ವಿಧಮಿದಂ ಸರ್ವಂ ಜಗತ್ ಸ್ಥಾವರಜಂಗಮಂ || ೩೨೪ ||

ತ್ವತ್ತೋ ನಾನ್ಯದ್ವಾಸುದೇವ ಜೀಮೂತಾದಮೃತಂ ಯಥಾ ।
ತ್ವಂ ಯಜ್ಞಸ್ತ್ವಂ ವಷಟ್ಕಾರಃ ತ್ವಮೋಂಕಾರೋ ಹವಿಸ್ತಥಾ || ೩೨೫ ||

ತ್ವಮೇವ ಸರ್ವದೇವಾನಾಮೀಶ್ವರಃ ಶಾಶ್ವತೋಽವ್ಯಯಃ ।
ನಾರಾಯಣಾತ್ಕಾರಣಾದ್ವಾ ಕರಣಾಕರಣಾತ್ಪರಃ || ೩೨೬ ||

ಧರ್ಮತ್ರಾಣಾಯ ದೇವೇಶ ಶರೀರಗ್ರಹಣಂ ತವ ।
ಮತ್ಸ್ಯಕೂರ್ಮವರಾಹಾದಿವೈಭವತ್ವಮುಪಾಗತಃ ॥
ಪಾಸಿ ಸರ್ವಮಿಮಂ ಲೋಕಂ ತ್ವಮೇವ ತ್ವನ್ಮಯಂ ವಿಭೋ || ೩೨೭ ||

---

೩೨೪. ಎಲೈ ಸ್ವಾಮಿಯೆ! ನೀನೇ ನೀರು. ನೀನೇ ಆಕಾಶವು. ನೀನೇ ಅಗ್ನಿಯು. ನೀನೇ ಭೂಮಿಯು. ನೀನೇ ಗಾಳಿಯು. ಚರಾಚರ ರೂಪವಾದ ಈ ಜಗತ್ತೇ ನೀನಾಗಿರುವೆ.

೩೨೫–೩೨೭. ಎಲೈ ವಾಸುದೇವನೆ! ಮೇಘದಿಂದ ನೀರು ಬಂದರೂ ಹೇಗೆ ಮೇಘವೂ ನೀರೂ ಬೇರೆಯಲ್ಲವೋ ಅಂತೆಯೇ ನಿನ್ನಿಂದ ಬೇರೆಯಾದ ಪ್ರಪಂಚವೇ ಇರುವುದಿಲ್ಲ. ನೀನೇ ಯಜ್ಞವು. ನೀನೇ ವಷಟ್ಕಾರವು. ನೀನೇ ಓಂಕಾರವು. ನೀನೇ ಹವಿಸ್ಸು. ನೀನೇ ಎಲ್ಲಾ ದೇವತೆಗಳಿಗೂ ಈಶ್ವರನು. ನೀನೇ ಶಾಶ್ವತನೂ ಅವ್ಯಯನೂ ಆಗಿದ್ದೀಯೆ. ನಾರಾಯಣ ಸ್ವರೂಪನಾದ, ಕರಣನೂ ಕಾರಣನೂ ಆದ, ನಿನಗಿಂತಲೂ ಬೇರೆಯಾದ ಮತ್ತೊಂದು ಇಲ್ಲವೇ ಇಲ್ಲ. ಎಲೈ ದೇವನೆ! ಧರ್ಮವನ್ನು ಕಾಪಾಡುವಾಗ ನೀನು ಶರೀರವನ್ನು ಹೊಂದುತ್ತೀಯೆ. ಆಗಲೇನೆ ಮತ್ಸ್ಯ, ಕೂರ್ಮ, ವರಾಹ, ಮುಂತಾದ ಆಕಾರಗಳನ್ನು ಹೊಂದಿ ನಿನ್ನ ಶಕ್ತಿಯನ್ನು ತೋರಿಸಿದೆ. ಈ ಲೋಕವನ್ನೆಲ್ಲಾ ನೀನೇ ಕಾಪಾಡುತ್ತೀಯೆ. ಈ ಲೋಕವೆಲ್ಲವೂ ನಿನ್ನ ರೂಪವಾದುವು.

॥ ಈಶ್ವರ ಉವಾಚ ॥

ಇತಿ ಸಂಸ್ತುತ್ಯ ಗೋವಿಂದಂ ಪ್ರಣಮ್ಯ ಜಗತಾಂ ಪತಿಂ ।
ಆರುರೋಹ ರಥಂ ದಿವ್ಯಂ ತಾಭ್ಯಾಂ ಸಹ ಯದೂತ್ತಮಃ ॥ ೩೨೮ ॥

ತತಸ್ತೂರ್ಣಂ ಸಮಾಸಾದ್ಯ ಮಥುರಾಂ ದೇವನಿರ್ಮಿತಾಂ ।
ರಾಮಕೃಷ್ಣೌ ಪುರದ್ವಾರಿ ನಿವೇಶ್ಯಾಂತಃ ಪುರಂ ಯಯೌ ॥ ೩೨೯ ॥

ತಯೋರಾಗಮನಂ ತಸ್ಯ ನಿವೇದ್ಯ ನೃಪತೇಸ್ತದಾ ।
ರಾಜ್ಞಾ ಸಂಪೂಜಿತಸ್ತೇನ ತತಃ ಸ್ವಗೃಹಮಾವಿಶತ್ ॥ ೩೩೦ ॥

ಅಥ ಸಾಯಾಹ್ನಸಮಯೇ ರಾಮಕೃಷ್ಣೌ ಮಹಾಬಲೌ ।
ಪರಸ್ಪರಂ ಕರೌ ಗೃಹ್ಯ ಮಥುರಾಯಾಂ ಸಮಾಗತೌ ॥ ೩೩೧ ॥

ಗಚ್ಛನ್ತೌ ಚ ಮಹಾವೀರ್ಯೌ ರಾಜಮಾರ್ಗೇ ಯದೂತ್ತಮೌ ।
ದದೃಶತುರ್ಮಹಾತ್ಮಾನೌ ರಜಕಂ ವಸ್ತ್ರರಂಜಕಂ ॥ ೩೩೨ ॥

---

೩೨೮. ಈಶ್ವರನು ಹೇಳಿದನು-ಗೋವಿಂದನನ್ನು ಈ ರೀತಿಯಾಗಿ ಸ್ತುತಿಸಿ ನಮಸ್ಕರಿಸಿ ಅವರೊಡನೆ ಆ ಅಕ್ರೂರನು ರಥವನ್ನು ಹತ್ತಿದನು.

೩೨೯. ಆಮೇಲೆ ಜಾಗ್ರತೆಯಾಗಿಯೇ ಆ ದೇವನಿರ್ಮಿತವಾದ ಮಥುರೆಗೆ ಹೋದರು. ಅಕ್ರೂರನು ರಾಮಕೃಷ್ಣರನ್ನು ಊರಬಾಗಿಲಿನಲ್ಲಿಯೇ ಇಳಿಸಿ ತಾನು ಕಂಸನ ಅಂತಃಪುರಕ್ಕೆ ಹೋದನು.

೩೩೦. ಆ ರಾಮಕೃಷ್ಣರು ಬಂದುದನ್ನು ರಾಜನಾದ ಕಂಸನಿಗೆ ತಿಳಿಸಿದನು. ಆ ಕಂಸನು ತನ್ನನ್ನು ಗೌರವಿಸಲು ಅನಂತರ ತನ್ನ ಮನೆಗೆ ಹೋದನು.

೩೩೧. ಅನಂತರ ಸಾಯಂಕಾಲದಲ್ಲಿ ರಾಮಕೃಷ್ಣರು ಒಬ್ಬರ ಕೈಯ್ಯನ್ನು ಒಬ್ಬರು ಹಿಡಿದುಕೊಂಡು ಮಥುರೆಯ ಬೀದಿಗಳಲ್ಲಿ ಸತ್ತ್ರಾಡಿದರು.

೩೩೨. ಆ ರಾಮಕೃಷ್ಣರು ರಾಜಮಾರ್ಗದಲ್ಲಿ ಹೋಗುತ್ತಾ ಅಲ್ಲಿ ಬಟ್ಟೆಯನ್ನು ಮಡಿಮಾಡುತ್ತಿದ್ದ ಒಬ್ಬ ಅಗಸನನ್ನು ನೋಡಿದರು.

ದಿವ್ಯವಸ್ತ್ರಭೃತಂ ರಾಜಗೇಹಮಾಯಾನ್ತಮಚ್ಯುತಃ ।
ಯಯಾಚೇ ತಾನಿ ವಸ್ತ್ರಾಣಿ ಸಹ ರಾಮೇಣ ವೀರ್ಯವಾನ್ ॥ ೩೩೩ ॥

ನ ದತ್ತವಾನ್ ತದಾ ತಸ್ಮೈ ರುಷಾ ವೈ ವಸ್ತ್ರರಂಜಕಃ ।
ಬಹೂನಿ ಕಟುವಾಕ್ಯಾನಿ ಪ್ರಾಹ ತತ್ರಾಧ್ವನಿ ಸ್ಥಿರಃ ॥ ೩೩೪ ॥

ತಾಡಯಾಮಾಸ ತಂ ಕೃಷ್ಣಸ್ತಲೇನೈವ ಮಹಾಬಲಃ ।
ತತ್ರೈವ ನಿಹತೋ ಮಾರ್ಗೇ ವಮನ್ವೈ ರುಧಿರಂ ಬಹು ॥ ೩೩೫ ॥

ತಾನಿ ವಸ್ತ್ರಾಣಿ ರಮ್ಯಾಣಿ ಗೋಪಾಲೈಸ್ಸಹ ಬಾಂಧವೈಃ ।
ಧಾರಯಾಮಾಸತುರ್ವೀರೌ ಯಥಾರ್ಹಂ ರಾಮಕೇಶವೌ ॥ ೩೩೬ ॥

ಮಾಲಾಕಾರಗೃಹಂ ಪ್ರಾಪ್ಯ ತೇನ ದೃಷ್ಟೌ ನಮಸ್ಕೃತೌ ।
ಸುಗಂಧಿಭಿರ್ದಿವ್ಯಪುಷ್ಪೈಃ ಪೂಜ್ಯಮಾನೌ ಮುದಾನ್ವಿತೌ ॥ ೩೩೭ ॥

---

೩೩೩. ಅವನು ಅರಮನೆಯ ಬಟ್ಟೆಗಳನ್ನು ಮಡಿಮಾಡಿಕೊಂಡು ಆ ಉತ್ತಮ ವಸ್ತ್ರಗಳನ್ನು ಅರಮನೆಗೆ ತೆಗೆದುಕೊಂಡು ಹೋಗುತ್ತಿದ್ದನು. ಅದನ್ನು ಆ ಕೃಷ್ಣನೂ ರಾಮನೂ ಕೊಡೆಂದು ಕೇಳಿದರು.

೩೩೪. ಆ ಅಗಸನು ಬಟ್ಟೆಗಳನ್ನು ಕೊಡಲಿಲ್ಲ ಅಲ್ಲದೆ ಕೋಪಗೊಂಡು ಆ ರಾಜಬೀದಿಯಲ್ಲಿದ್ದುಕೊಂಡೇ ಬಹುವಾದ ಕೆಟ್ಟಮಾತುಗಳನ್ನಾಡಿದನು.

೩೩೫–೩೩೬. ಆಗ ಬಲಿಷ್ಠನಾದ ಕೃಷ್ಣನು ಮುಷ್ಟಿಯಿಂದ ಆ ರಜಕನಿಗೆ ಹೊಡೆಯಲು ಆವನು ರಕ್ತವನ್ನು ಕಾರುತ್ತ ಅಲ್ಲಿಯೇ ಬಿದ್ದುಸತ್ತನು. ಆ ವಸ್ತ್ರಗಳನ್ನು ಕೃಷ್ಣನು ಗೋಪಾಲರಿಗೂ ಕೊಟ್ಟು ತಾನೂ ರಾಮನೂ ತಮಗೆ ಯೋಗ್ಯವಾದುವುಗಳನ್ನು ಧರಿಸಿಕೊಂಡರು.

೩೩೭. ಅನಂತರ ಹೂವಾಡಿಗನ ಮನೆಗೆ ಹೋದರು. ಅಲ್ಲಿ ಅವರನ್ನು ಗೌರವಿಸಲು ಆ ಹೂವಾಡಿಗನು ಸುವಾಸನೆಯುಳ್ಳ ಹೂವುಗಳನ್ನು ಸಂತೋಷದಿಂದ ಕೊಟ್ಟನು. ಆಗ ರಾಮಕೃಷ್ಣರು ಆ ಹೂವಾಡಿಗನು ಕೇಳಿದುದನ್ನು ಕೊಟ್ಟರು.

ದದತುಸ್ತೌ ಪರಂ ತಸ್ಮೈ ವಾಂಛಿತಂ ಯದುಪುಂಗವೌ ।
ಸಮಾಗತೌ ಪುನರ್ವೀಥ್ಯಾಮಾಯಸ್ತ್ರೀಂ ಸುಶುಭಾನನಾಂ ॥ ೩೩೮ ॥

ಕುಬ್ಜಾಂ ಸ್ತ್ರಿಯಂ ಮಹಾಭಾಗೌ ಧೃತಚಂದನಭಾಜನಾಂ ।
ವಕ್ರಾಂಗಸ್ಪೃಷ್ಟಾಂ ವನಿತಾಂ ದೃಷ್ಟ್ವಾ ಗಂಧಮಯಾಚತಾಂ ॥ ೩೩೯ ॥

ಪ್ರಹಸನ್ತೀ ತದಾ ತಾಭ್ಯಾಂ ದದೌ ಚಂದನಮುತ್ತಮಂ ।
ಆದಾಯ ಚಂದನಂ ದಿವ್ಯಮುಪಲಿಪ್ಯ ಯಥೇಚ್ಛಯಾ ॥ ೩೪೦ ॥

ತಸ್ಮೈ ಕಾಂತತರಂ ರೂಪಂ ದತ್ವಾಧ್ವನಿ ಸಮಾಗತೌ ।
ನಿರೀಕ್ಷ್ಯಮಾಣೌ ಯೋಷಿದ್ಭಿಃ ಸುಕುಮಾರೌ ಶುಭಾನನೌ ॥ ೩೪೧ ॥

ವಿವಿಶತುರ್ಮಹಾತ್ಮಾನೌ ಯಜ್ಞಶಾಲಾಂ ಸಹಾನುಗೈಃ ।
ದೃಷ್ಟ್ವಾ ಸಮರ್ಚಿತಂ ದಿವ್ಯಂ ಕಾರ್ಮುಕಂ ತತ್ರ ಕೇಶವಃ ॥ ೩೪೨ ॥

---

೩೩೮-೩೩೯. ರಾಮಕೃಷ್ಣರು ಅಲ್ಲಿಂದ ಮುಂದೆ ಬೀದಿಯಲ್ಲಿ ಹೊರಟರು. ದಾರಿಯಲ್ಲಿ ಎದುರಿಗೆ ಒಬ್ಬಳು ಗುಜ್ಜಾರಿ ಹೆಂಗಸು ಗಂಧದ ಬಟ್ಟಲಿನಲ್ಲಿ ಗಂಧವನ್ನು ಹಾಕಿಕೊಂಡು ಎದುರಿಗೆ ಬರುತ್ತಿದ್ದಳು. ಅವಯವಗಳು ವಕ್ರ ವಕ್ರವಾಗಿದ್ದುವು. ಅವಳನ್ನು ನೋಡಿ ರಾಮಕೃಷ್ಣರು ಆ ಗಂಧವನ್ನು ಕೊಡೆಂದು ಕೇಳಿದರು. ಆಕೆಯು ನಗುತ್ತ ಆ ಉತ್ತಮವಾದ ಗಂಧವನ್ನು ಅವರಿಗೆ ಕೊಟ್ಟಳು.

೩೪೦-೩೪೧. ಆಕೆಯಿಂದ ಆ ಚಂದನವನ್ನು ತೆಗೆದು ಯಥೇಚ್ಛವಾಗಿ ಬಳಿದುಕೊಂಡು ಆಕೆಗೆ ಮನೋಹರವಾದ ರೂಪವನ್ನು ಕೊಟ್ಟರು ಅನಂತರ ದಾರಿಯಲ್ಲಿ ಹೊರಟು ಅರಮನೆಗೆ ಬರುತ್ತಿದ್ದರು ಆಗ ಈ ಸುಕುಮಾರರಾದ ರಾಮಕೃಷ್ಣರನ್ನು ಮಾರ್ಗದಲ್ಲಿ ಹೆಂಗಸರೆಲ್ಲರೂ ನೋಡಿ ಆಶ್ಚರ್ಯಪಡುತ್ತಿದ್ದರು.

೩೪೨. ಅವರು ಅರಮನೆಯ ಯಜ್ಞಶಾಲೆಗೆ ಹೋಗಿ ಅಲ್ಲಿ ಪೂಜಿಸಿದ್ದ ದೊಡ್ಡದಾದ ಬಿಲ್ಲನ್ನು ನೋಡಿದರು.

ಲೀಲಯಾ ಚ ಗೃಹೀತ್ವಾಥ ಬಭಂಜ ಮಧುಸೂದನಃ ।
ವಿಭಜ್ಯಮಾನಂ ತಚ್ಚಾಪಂ ಶ್ರುತ್ವಾ ಕಂಸಃ ಸುವಿಹ್ವಲಃ ॥ ೩೪೩ ॥

ಆಹೂಯ ಮಲ್ಲಾನ್ ಸೂತಾಂಸ್ತು ಮುಖ್ಯಾಂಶ್ಚಾಣೂರಪುಂಗವಾನ್ ।
ವಿಮೃಶ್ಯ ಮಂತ್ರಿಭಿಃ ಪ್ರಾಹ ಚಾಣೂರಂ ದೈತ್ಯಪುಂಗವಃ ॥ ೩೪೪ ॥

॥ ಕಂಸ ಉವಾಚ ॥

ರಾಮಕೃಷ್ಣೌ ಸಮಾಯಾತೌ ಸರ್ವದೈತ್ಯವಿನಾಶಕೌ ।
ಪ್ರಭಾತೇ ಮಲ್ಲಯುದ್ಧೇನ ಹನ್ಯೇತಾಮವಿಶಂಕಯಾ ॥ ೩೪೫ ॥

ಯೇನ ಕೇನಾಪ್ಯುಪಾಯೇನ ಹನ್ತವ್ಯೌ ಬಲದರ್ಪಿತೌ ।
ಮದೋತ್ಕಟೈರ್ಗಜೈರ್ವಾಪಿ ಮಲ್ಲಮುಖ್ಯೈಶ್ಚ ಯತ್ನತಃ ॥ ೩೪೬ ॥

॥ ಈಶ್ವರ ಉವಾಚ ॥

ಇತ್ಯಾದಿಶ್ಯ ತತೋ ರಾಜಾ ಸಾನುಜಸ್ಸಚಿವೈಸ್ಸಹ ।
ಆರುರೋಹ ಭಯಾತ್ತೂರ್ಣಂ ದಿವ್ಯಪ್ರಾಸಾದಮೂರ್ಧನಿ ॥ ೩೪೭ ॥

---

೩೪೩-೩೪೪. ಕೃಷ್ಣನು ಅದನ್ನು ತೆಗೆದುಕೊಂಡು ಬಹು ಸರಾಗವಾಗಿಯೇ ಬಗ್ಗಿಸಿ ಮುರಿದುಬಿಟ್ಟನು. ಆ ಬಿಲ್ಲನ್ನು ಮುರಿದುದನ್ನು ಕಂಸನು ಕೇಳಿ ದುಃಗುಡಗೊಂಡವನಾಗಿ ಚಾಣೂರನೇ ಮುಂತಾದ ಜಟ್ಟಿಗಳನ್ನೂ ಸೂತರನ್ನೂ ಕರೆಸಿ ಮಂತ್ರಿಗಳೊಡನೆ ಯೋಚಿಸಿ ಆ ಚಾಣೂರನನ್ನು ಕುರಿತು ಇಂತೆಂದನು.

೩೪೫. ಕಂಸನು ಹೇಳಿದನು–ಎಲೈ ಮಲ್ಲರಿರಾ ! ದೈತ್ಯರನ್ನು ನಾಶ ಮಾಡಿದ ಆ ರಾಮಕೃಷ್ಣರು ಬಂದಿರುವರು. ಬೆಳಗಾಗುತ್ತಲೂ ಮಲ್ಲ ಯುದ್ಧವನ್ನು ಮಾಡಿ ಸಂದೇಹಪಡದೆ ಕೊಂದುಹಾಕಿರಿ.

೩೪೬. ಆ ಬಲಿಷ್ಠರನ್ನು ಯಾವುದಾದರೂ ಉಪಾಯದಿಂದ ಏನನ್ನಾದರೂ ಮಾಡಿ ಜಟ್ಟಿಗಳಿಂದಾಗಲಿ ಆನೆಗಳಿಂದಾಗಲಿ ಕೊಲ್ಲಿಸಬೇಕು.

೩೪೭. ಈಶ್ವರನು ಹೇಳಿದನು–ಆ ಕಂಸನು ಅವರಿಗೆ ಹೀಗೆಂದು ಅಪ್ಪಣೆ ಮಾಡಿ ತಮ್ಮಂದಿರನ್ನೂ ಮಂತ್ರಿಗಳನ್ನೂ ಕರೆದುಕೊಂಡು ಭಯಪಟ್ಟವನಾಗಿ ಮಹಡಿಯ ಮೇಲುಗಡೆಗೆ ಹೊರಟುಹೋದನು.

ದ್ವಾರೇಷು ಸರ್ವಮಾರ್ಗೇಷು ಗಜಾನ್ಮತ್ತಾನಯೋಜಯತ್ ।
ಮಲ್ಲಾನ್ಮದೋತ್ಕಟಾನ್ಸಾಗರ್ಗ ಸ್ಥಾಪಯಾಮಾಸ ಸರ್ವತಃ ॥ ೩೪೮ ॥

ಜ್ಞಾತ್ವಾಪಿ ಕೃಷ್ಣಸ್ತತ್ಸರ್ವಂ ಸಹ ರಾಮೇಣ ಧೀಮತಾ ।
ಉವಾಸ ರಜನೀಂ ತತ್ರ ಯಜ್ಞಗೇಹೇ ಸಹಾನುಗೈಃ ॥ ೩೪೯ ॥

ತತೋ ರಜನ್ಯಾಂ ವ್ಯುಷ್ಟಾಯಾಂ ಪ್ರಭಾತೇ ವಿಮಲೇ ಸತಿ ।
ಶಯನಾದುತ್ಥಿತೌ ವೀರೌ ರಾಮಕೃಷ್ಣೌ ಕೃತೋದಕೌ ॥ ೩೫೦ ॥

ಸ್ವಲಂಕೃತೌ ಚ ತೌ ಭುಕ್ತ್ವಾ ಸಂಗ್ರಾಮಾಭಿಮುಖೋತ್ಸುಕೌ ।
ವಿನಿರ್ಗತೌ ಗೃಹಾತ್ತಸ್ಮಾತ್ಸಿಂಹಾವಿವ ಮಹಾಗುಹಾತ್ ॥ ೩೫೧ ॥

ರಾಜದ್ವಾರಿ ಸ್ಥಿತಂ ನಾಗಂ ಹಿಮಾದ್ರಿಶಿಖರೋಪಮಂ ।
ನಾಮ್ನಾ ಕುವಲಯಾಪೀಡಂ ಕಂಸಸ್ಯ ಜಯವರ್ಧನಂ ॥ ೩೫೨ ॥

---

೩೪೮ ಅವನು ಹೆದರಿಕೊಂಡು ಎಲ್ಲಾ ಬಾಗಿಲುಗಳಲ್ಲಿಯೂ ಎಲ್ಲಾ ದಾರಿಗಳಲ್ಲಿಯೂ ಕೃಷ್ಣನು ಹೊರಗೆ ಹೋಗದಂತೆ ಮದ್ದಾನೆಗಳನ್ನೂ ಜಟ್ಟಿಗಳನ್ನೂ ನಿಲ್ಲಿಸಿದ್ದನು.

೩೪೯. ಕೃಷ್ಣನಿಗೆ ಇದೆಲ್ಲವೂ ಗೊತ್ತಿದ್ದರೂ ರಾಮನೊಡನೆಯೂ ಸಂಗಡಿಗರೊಡನೆಯೂ ಆ ರಾತ್ರಿಯಲ್ಲಿ ಆ ಯಜ್ಞದ ಮನೆಯಲ್ಲಿಯೇ ಇದ್ದುಬಿಟ್ಟನು.

೩೫೦. ಮಾರನೆಯ ದಿವಸ ಬೆಳಗ್ಗೆ ಚೆನ್ನಾಗಿ ಬೆಳಗಾಗಲು ಆ ರಾಮಕೃಷ್ಣರು ಹಾಸಿಗೆಯಿಂದ ಎದ್ದು ಸ್ನಾನ ಮುಂತಾದುವುಗಳನ್ನು ಮಾಡಿದರು.

೩೫೧. ಅನಂತರ ಊಟಮಾಡಿ ಅಲಂಕರಿಸಿಕೊಂಡು ಯುದ್ಧದಲ್ಲಿ ಆಸಕ್ತರಾಗಿ ಸಿಂಹಗಳು ದೊಡ್ಡ ಗುಹೆಯಿಂದ ಹೊರಹೊರಡುವಂತೆ ಆ ಯಜ್ಞದ ಮನೆಯಿಂದ ಹೊರಟರು.

೩೫೨–೩೫೪. ಅವರು ಹೊರಗೆ ಹೊರಟ ಕೂಡಲೆ ಬಾಗಿಲಿನಲ್ಲಿ ಕಂಸನು ಕಾವಲಿಗೋಸ್ಕರ ಇಟ್ಟಿದ್ದ ಒಂದು ಆನೆಯಿದ್ದಿತು. ಅದು ಹಿಮವತ್ಪರ್ವತದ ಶಿಖರದಂತೆ ಇದ್ದಿತು. ಅದರ ಹೆಸರು ಕುವಲಯಾಪೀಡನೆಂದು. ಅದು ಕಂಸನಿಗೆ

ದೇವಕುಂಜರದರ್ಪಘ್ನಂ ಮಹಾಕಾಯಂ ಮದೋತ್ಕಟಂ ।
ದೃಷ್ಟ್ವಾ ತತ್ರ ಮಹಾನಾಗಂ ಪಂಚಾಸ್ಯ ಇವ ಕೇಶವಃ ॥ ೩೫೩ ॥

ಕರೇಣೈವ ಕರಂ ಗೃಹ್ಯ ಸವ್ಯಮುತ್ಪ್ಲುತ್ಯ ಲೀಲಯಾ ।
ಭ್ರಾಮಯಿತ್ವಾಥ ಚಿಕ್ಷೇಪ ಧರಣ್ಯಾಂ ಧರಣೀಧರಃ ॥ ೩೫೪ ॥

ಸ ತು ಚೂರ್ಣಿತಸರ್ವಾಂಗೋ ನಿನರ್ದ ಭೈರವಸ್ವನಂ ।
ಪಪಾತ ಸಹಸಾ ಭೂಮೌ ಮಮಾರ ಚ ಮಹಾಬಲಃ ॥ ೩೫೫ ॥

ಹತ್ವಾ ದಂತೌ ಸಮುತ್ಪಾಟ್ಯ ಗೃಹೀತ್ವಾ ರಾಮಕೇಶವೌ ।
ಮಲ್ಲೈರಾಯೋಧನಂ ಕರ್ತುಂ ರಂಗಂ ವಿವಿಶತುಸ್ತದಾ ॥ ೩೫೬ ॥

ತತ್ರಸ್ಥಾ ದಾನವಾ ದೃಷ್ಟ್ವಾ ಗೋವಿಂದಸ್ಯ ಪರಾಕ್ರಮಂ ।
ಭೀತಾಃ ಪ್ರವಿದ್ರುತಾಸ್ಸರ್ವೇ ರಾಜ್ಞೋನ್ತಃಪುರಮಾಯಯುಃ ॥ ೩೫೭ ॥

---

ಎಲ್ಲೆಲ್ಲಿಯೂ ಜಯವನ್ನು ತಂದಿರುವ ಆನೆಯು. ಆ ದೇವತೆಗಳ ಆನೆಯಾದ ಐರಾವತದ ದರ್ಪವನ್ನೂ ಕೂಡ ನಾಶಮಾಡಿದ್ದಿತು. ದೊಡ್ಡದೇಹವುಳ್ಳದ್ದು. ಮತ್ತು ಬಲಶಾಲಿಯಾದುದು. ಆ ದೊಡ್ಡ ಆನೆಯನ್ನು ನೋಡಿ ಕೇಶವನು ಸಿಂಹದಂತೆ ಅದರ ಮೇಗೆ ನುಗ್ಗಿ ಕಯ್ಯಿಂದ ಅದರ ಸೊಂಡಿಲನ್ನು ಹಿಡಿದುಕೊಂಡು ಗಿರ್ರನೆ ತಿರುಗಿಸಿ ನೆಲದ ಮೇಲಕ್ಕೆ ಅಪ್ಪಳಿಸಿದನು

೩೫೫. ಅದರ ಮೈಕೈಯ್ಯೆಲ್ಲಾ ನುಜ್ಜುಗುಜ್ಜಾಗಿ ಭಯಂಕರವಾಗಿ ಕೂಗುತ್ತಾ ನೆಲದಮೇಲೆ ಬಿದ್ದು ಅಷ್ಟು ಬಲವಾಗಿದ್ದರೂ ಸತ್ತುಹೋಯಿತು.

೩೫೬. ಆ ರಾಮಕೃಷ್ಣರು ಆನೆಯನ್ನು ಕೊಂದು ಅದರ ದಂತಗಳನ್ನು ಹಿಡಿದುಕೊಂಡು ಜಟ್ಟಿಗಳೊಡನೆ ಗುದ್ದಾಡಲು ರಂಗಪ್ರದೇಶವನ್ನು ಹೊಂದಿದರು.

೩೫೭. ಅಲ್ಲಿದ್ದ ದಾನವರೆಲ್ಲರೂ ಆ ಗೋವಿಂದನ ಪರಾಕ್ರಮವನ್ನು ನೋಡಿ ಹೆದರಿದವರಾಗಿ ಎಲ್ಲರೂ ರಾಜನ ಅಂತಃಪುರಕ್ಕೆ ಓಡಿಹೋದರು.

ಕಪಾಟೌ ಸುದೃಢೌ ಬಧ್ವಾ ತತ್ರ ತಸ್ಥುಃ ಸಹಸ್ರಶಃ ।
ದೃಢಬಂಧಕಪಟಾಂಸ್ತು ದೃಷ್ಟ್ವಾ ಕೃಷ್ಣಸ್ತು ಲೀಲಯಾ ॥ ೩೫೮ ॥

ತಾಡಯಿತ್ವಾ ಪದೇನೈವ ಪಾತಯಾಮಾಸ ವೀರ್ಯವಾ್ ।
ತೌ ಭಗ್ನೌ ಪತಿತೌ ತತ್ರ ಸೇನಾನೀಕೇ ವ್ಯವಸ್ಥಿತೇ ॥ ೩೫೯ ॥

ತತ್ರಸ್ಥಾ ನಿಹಿತಾಸ್ಸರ್ವೇ ಚೂರ್ಣಿತಾಂಗಶಿರೋಧರಾಃ ।
ತತಃ ಪ್ರವಿಶ್ಯ ಭವನಂ ಕಂಸಸ್ಯಾಸ್ಯ ಮಹಾಬಲೌ ॥ ೩೬೦ ॥

ಭ್ರಾಮಯಿತ್ವಾ ಮಹಾನಾಗದಂತೌ ಪೀನೌ ರಣೋತ್ಸುಕೌ ।
ದದೃಶಾತೇ ಮಹಾತ್ಮಾನೌ ಮಲ್ಲೌ ಚಾಣೂರಮುಷ್ಟಿಕೌ ॥ ೩೬೧ ॥

ಕಂಸೋಪಿ ದೃಷ್ಟ್ವಾ ಗೋವಿಂದಂ ರಾಮಂ ಚ ಸುಮಹಾಬಲಂ ।
ಭಯಮಾವಿಶ್ಯ ಚಾಣೂರಂ ಪ್ರಾಹ ಮಲ್ಲವರಂ ತದಾ ॥ ೩೬೨ ॥

---

೩೫೮-೩೫೯. ಅವರೆಲ್ಲರೂ ಕದಗಳನ್ನು ಗಟ್ಟಿಯಾಗಿ ಹಾಕಿಕೊಂಡು ಆ ಅಂತಃಪುರದಲ್ಲಿದ್ದರು. ಇವರು ಕದಗಳನ್ನು ಗಟ್ಟಿಯಾಗಿ ಹಾಕಿಕೊಂಡಿದ್ದರೂ ಆ ರಾಮಕೃಷ್ಣರು ಬಹು ಸರಾಗವಾಗಿಯೇ ಅದನ್ನು ಕಾಲಿನಿಂದ ಒದೆದು ಕೆಡವಿದರು ಆ ಎರಡು ಕದಗಳೂ ಒಡೆದು ಕೆಳಗೆ ಬೀಳಲು ಅಲ್ಲಿ ನೋಡಲು ಸೇನೆಗಳೂ ಇದ್ದುವು.

೩೬೦-೩೬೧. ಆ ರಾಮಕೃಷ್ಣರಿಬ್ಬರೂ ಅವರ ತಲೆಗಳನ್ನು ಒಡೆದು ಕೊಂದುಹಾಕಿದರು. ಅನಂತರ ಆ ಇಬ್ಬರೂ ಕಂಸನ ಮನೆಗೆ ಹೋದರು. ಕೈಯ್ಯಲ್ಲಿದ್ದ ಆನೆಯ ದಂತಗಳನ್ನು ತಿರುಗಿಸುತ್ತಿದ್ದರು. ಚಾಣೂರ ಮುಷ್ಟಿಕರೆಂಬ ಜಟ್ಟಿಗಳು ಅಲ್ಲಿದ್ದುದನ್ನು ನೋಡಿದರು.

೩೬೨. ಕಂಸನು ಈ ಬಲಿಷ್ಠರಾದ ರಾಮಕೃಷ್ಣರನ್ನು ನೋಡಿ ಭಯಗೊಂಡು ಜಟ್ಟಿಯಾದ ಚಾಣೂರನನ್ನು ಕುರಿತು ಇಂತೆಂದನು.

|| ಕಂಸ ಉವಾಚ ||

ಅಸ್ಮಿನ್ನವಸರೇ ಮಲ್ಲ ಜಹಿ ಗೋಪಾಲಬಾಲಕೌ |
ವಿಭಜ್ಯ ತವ ರಾಜ್ಯಾರ್ಧಮಹಂ ದಾಸ್ಯಾಮ್ಯಸಂಶಯಂ || ೩೬೩ ||

|| ಈಶ್ವರ ಉವಾಚ ||

ತಸ್ಮಿನ್ನವಸರೇ ಕೃಷ್ಣೋ ಮಲ್ಲಾಭ್ಯಾಂ ದದೃಶೇ ಮಹಾನ್ |
ಅಭೇದ್ಯತನುಸಂತ್ರಾಣೋ ಮಹಾಮೇರುರಿವಾಪರಃ || ೩೬೪ ||

ಕಂಸಸ್ಯ ದೃಷ್ಟಿವಿಷಯೇ ಸಂವರ್ತಾಗ್ನಿರಿವಾಚ್ಯುತಃ |
ಸ್ತ್ರೀಣಾಂ ಚ ಸಾಕ್ಷಾನ್ಮದನಃ ಪಿತ್ರೋಃಶಿಶುರಿವಾವ್ಯಯಃ || ೩೬೫ ||

ತ್ರಿದಶಾನಾಂ ಹರಿರಿವ ಗೋಪಾಲಾನಾಂ ಸಖಾ ಯಥಾ |
ಬಹುರೂಪೇಣ ದದೃಶುಃ ತತ್ರ ಸರ್ವಗತಂ ಹರಿಂ || ೩೬೬ ||

---

೩೬೩. ಕಂಸನು ಹೇಳಿದನು–ಎಲೈ ಮಲ್ಲನೆ ! ಈ ಸಮಯದಲ್ಲಿ ನೀನು ಈ ಗೋಪಾಲರನ್ನು ಕೊಂದುಹಾಕು. ನನ್ನ ರಾಜ್ಯದಲ್ಲಿ ಭಾಗಮಾಡಿ ಅರ್ಧವನ್ನು ನಿನಗೆ ಕೊಡುತ್ತೇನೆ. ಸಂಶಯಪಡಬೇಡ.

೩೬೪. ಈಶ್ವರನು ಹೇಳಿದನು–ಆಗ ಆ ಚಾಣೂರ ಮುಷ್ಟಿಕರಿಬ್ಬರೂ ಆ ಬಲಿಷ್ಠನಾದ ಕೃಷ್ಣನನ್ನು ನೋಡಿದರು. ಅವನು ಭೇದಿಸಲಾಗದ ಕವಚವನ್ನು ಹಾಕಿಕೊಂಡು ಮಹಾಮೇರುವಿನಂತಿದ್ದನು.

೩೬೫–೩೬೬. ಆ ಅಚ್ಯುತನು ಕಂಸನಿಗೆ ಪ್ರಳಯಕಾಲದ ಅಗ್ನಿಯಂತೆ ಕಂಡುಬಂದನು. ಹೆಂಗಸರಿಗೆ ಮನ್ಮಥನಂತೆಯೂ, ತಾಯಿತಂದೆಗಳಿಗೆ ಉತ್ತಮವಾದ ಮಗುವಿನಂತೆಯೂ, ದೇವತೆಗಳಿಗೆ ಹರಿಯಂತೆಯೂ, ಗೋಪರಿಗೆ ಸ್ನೇಹಿತನಂತೆಯೂ ಕಂಡುಬಂದನು. ಈ ರೀತಿಯಾಗಿ ಅಲ್ಲಿದ್ದವರು ಎಲ್ಲಾ ಸ್ಥಳದಲ್ಲಿಯೂ ಇರುವ ಹರಿಯನ್ನು ಅನೇಕರೀತಿಯಿಂದ ನೋಡಿದರು.

ವಸುದೇವಸ್ತಥಾಕ್ರೂರೋ ನಂದಗೋಪೋ ಮಹಾಮತಿಃ |
ಅನ್ಯಂ ಪ್ರಾಸಾದ ಮಾರುಹ್ಯ ದದೃಶುಃ ಕದನಂ ಮಹತ್ || ೩೬೭ ||

ಸ್ತ್ರೀಭಿರಂತಃಪುರಸ್ಥಾಭಿರ್ದೇವಕೀ ತತ್ರ ಸಂಸ್ಥಿತಾ |
ಮುಖಂ ಪುತ್ರಸ್ಯ ದದೃಶೇ ಸಾಶ್ರುಪೂರ್ಣೇಕ್ಷಣಾ ಶುಭಾ || ೩೬೮ ||

ತಾಭಿರಾಶ್ವಾಸಿತಾ ದೇವೀ ಭವನಾಂತರಮಾವಿಶತ್ |
ತತೋ ದೇವಗಣಾಸ್ಸರ್ವೇ ವಿಮಾನಸ್ಥಾ ನಭಸ್ಥಲೇ || ೩೬೯ ||

ತುಷ್ಟುವುರ್ಜಯಶಬ್ದೇನ ಪುಂಡರೀಕಾಕ್ಷಮಚ್ಯುತಂ |
ಜಹಿ ಕಂಸಮಿತಿ ಪ್ರಾಹುಃ ಉಚ್ಚೈರ್ದೇವಾ ಮರುದ್ಗಣಾಃ || ೩೭೦ ||

ಏತಸ್ಮಿನ್ನಂತರೇ ತತ್ರ ತೂರ್ಯಘೋಷನಿನಾದಿತೇ |
ಆಸೇದತುರ್ಮಹಾಮಲ್ಲೌ ಯದುಸಿಂಹೌ ಮಹಾಬಲೌ || ೩೭೧ ||

---

೩೬೭. ವಸುದೇವನೂ ಅಕ್ರೂರನೂ ನಂದಗೋಪನೂ ಇನ್ನೂ ಅನೇಕರು ಮಹಡಿಯಮೇಲಿದ್ದುಕೊಂಡು ಈ ದೊಡ್ಡದಾದ ಯುದ್ಧವನ್ನು ನೋಡುತ್ತಿದ್ದರು.

೩೬೮. ದೇವಕಿಯು ಅಂತಃಪುರದ ಹೆಂಗಸರೊಡನೆ ಇದ್ದುಕೊಂಡು ಕಣ್ಣಿನಲ್ಲಿ ಕಣ್ಣೀರು ಬರುತ್ತಿರಲು ಮಗನ ಮುಖವನ್ನು ನೋಡುತ್ತಿದ್ದಳು

೩೬೯-೩೭೦ ಅಂತುಪುರದ ಸ್ತ್ರೀಯರು ಆ ದೇವಕಿಯನ್ನು ಸಮಾಧಾನ ಪಡಿಸಲು ಮನೆಯ ಒಳಕ್ಕೆ ಹೊರಟುಹೋದಳು. ಆಗ ದೇವತೆಗಳೆಲ್ಲರೂ ಅಂತರಿಕ್ಷದಲ್ಲಿ ವಿಮಾನದಲ್ಲಿದ್ದುಕೊಂಡು ಪುಂಡರೀಕಾಕ್ಷನೇ! ಜಯವಾಗಲಿ. ಅಚ್ಯುತನೇ! ಜಯವಾಗಲಿ. ಎಂದು ಸ್ತುತಿಸುತ್ತಲಿದ್ದರು. ಮತ್ತು ಆ ದೇವತೆಗಳೆಲ್ಲ ಆ ಕಂಸನನ್ನು ಕೊಂದುಹಾಕು ಎಂದು ಗಟ್ಟಿಯಾಗಿ ಹೇಳುತ್ತಿದ್ದರು

೩೭೧. ಈ ಸಮಯದಲ್ಲಿ ವಾದ್ಯಗಳು ಮೊಳಗುತ್ತಿದ್ದುವು. ಆಗ ಆ ಜಟ್ಟಿಗಳೂ ಯದುಸಿಂಹರೂ ಒಬ್ಬರಿಗೊಬ್ಬರು ಎದುರಾದರು.

ಚಾಣೂರೇಣ ತು ಗೋವಿಂದೋ ಮುಷ್ಟಿಕೇನ ಹಲಾಯುಧಃ ।
ಯುಯುಧಾತೇ ಮಹಾತ್ಮಾನೌ ನೀಲಶ್ವೇತಾದ್ರಿಸನ್ನಿಭೌ ॥ ೩೭೨ ॥

ಮಲ್ಲಯುದ್ಧವಿಧಾನೇನ ಮುಷ್ಟಿಭಿಃ ಪಾದತಾಡನೈಃ ।
ಬಭೂವ ಕದನಂ ಘೋರಂ ದೇವಾನಾಂ ಚ ಭಯಾವಹಂ ॥ ೩೭೩ ॥

ಚಾಣೂರೇಣ ಚಿರಂ ಕಾಲಂ ಕ್ರೀಡಿತ್ವಾಥ ಜನಾರ್ದನಃ ।
ನಿಷ್ಪಿಷ್ಯ ಗಾತ್ರಂ ಮಲ್ಲಸ್ಯ ಪಾತಯಾಮಾಸ ಲೀಲಯಾ ॥ ೩೭೪ ॥

ಸ ಪಪಾತ ಮಹೀಪೃಷ್ಠೇ ಸಂವಮನ್ ರುಧಿರಂ ಬಹು ।
ಮಮಾರ ಸ ಮಹಾಮಲ್ಲೋ ದೇವದಾನವದುಃಖದಃ ॥ ೩೭೫ ॥

ಮುಷ್ಟಿಕೇನ ತಥಾ ರಾಮಃ ಚಿರಕಾಲಮಯುದ್ಧ್ಯತ ।
ಮುಷ್ಟಿಭಿಸ್ತಾಡಯಾಮಾಸ ತಸ್ಯ ವಕ್ಷಸಿ ವೀರ್ಯವಾನ್ ॥ ೩೭೬ ॥

---

೩೭೨. ಚಾಣೂರನೊಡನೆ ಗೋವಿಂದನೂ ಮುಷ್ಟಿಕನೊಡನೆ ಬಲರಾಮನೂ ಯುದ್ಧಕ್ಕೆ ನಿಂತರು. ಇವರು ನಿಂತುದನ್ನು ನೋಡಿದರೆ ನೀಲಪರ್ವತ ಶ್ವೇತಪರ್ವತಗಳು ಹೋರಾಟಕ್ಕೆ ನಿಂತಂತಿದ್ದುವು.

೩೭೩. ಮಲ್ಲಯುದ್ಧದ ರೀತಿಯನ್ನನುಸರಿಸಿ ಮುಷ್ಟಿಗಳಿಂದಲೂ ಪಾದಗಳ ಹೊಡೆತದಿಂದಲೂ ಹೊಡೆದಾಡಿದರು. ಈ ಯುದ್ಧವು ದೇವತೆಗಳಿಗೂ ಭಯವನ್ನುಂಟುಮಾಡುತ್ತಿದ್ದಿತು.

೩೭೪. ಜನಾರ್ದನನು ಚಾಣೂರನೊಡನೆ ಬಹುಹೊತ್ತು ಯುದ್ಧಮಾಡಿ ಮೈಯ್ಯೆಲ್ಲವನ್ನೂ ಕಿವುಚಿ ಬಹು ಸರಾಗವಾಗಿಯೇ ಕೆಡಗಿದನು.

೩೭೫. ದೇವದಾನವರಿಗೆಲ್ಲಾ ತೊಂದರೆಯನ್ನು ಕೊಡುತ್ತಿದ್ದ ಆ ಮಲ್ಲನು ರಕ್ತವನ್ನು ಕಕ್ಕುತ್ತಾ ನೆಲದಮೇಲೆ ಬಿದ್ದು ಸತ್ತನು.

೩೭೬–೩೭೭. ಬಲರಾಮನು ಮುಷ್ಟಿಕನೊಡನೆ ಬಹುಹೊತ್ತು ಕಾದಿದನು. ಅನಂತರ ಮುಷ್ಟಿಯಿಂದ ಆ ಮುಷ್ಟಿಕನ ಎದೆಗೆ ಬಲವಾಗಿ ಗುದ್ದಿದನು. ಅದರಿಂದ

ಭಿನ್ನಾಸ್ಥಿಸ್ನಾಯುಬಂಧೋಽಸೌ ಪಪಾತ ಧರಣೀತಲೇ ।
ತತಃ ಪ್ರದುದ್ರುವುಃ ಸರ್ವೇ ಮಲ್ಲಾ ದೃಷ್ಟ್ವಾ ಪರಾಕ್ರಮಂ ॥ ೩೭೭ ॥

ಕಂಸೋ ಮಹದ್ಭಯಂ ತೀವ್ರಮಾವಿಶದ್ವೇದನಾತುರಃ ।
ಏತಸ್ಮಿನ್ನಂತರೇ ವೀರೌ ರಾಮಕೃಷ್ಣೌ ದುರಾಸದೌ ॥ ೩೭೮ ॥

ಆರೋಹತುರ್ಮಹಾತ್ಮಾನೌ ಪ್ರತ್ಯಕ್ ಪ್ರಾಸಾದಮೂರ್ಜಿತಂ ।
ತಾಡಯಿತ್ವಾ ತಲೇನೈವ ಕಂಸಂ ಮೂರ್ಧ್ನಿ ಜನಾರ್ದನಃ ॥ ೩೭೯ ॥

ಅಪಾತಯದ್ಧರಾಪೃಷ್ಠೇ ಪ್ರಾಸಾದಶಿಖರಾದ್ಧರಿಃ ।
ಸ ತು ನಿರ್ಭಿನ್ನಸರ್ವಾಂಗೋ ದರಣ್ಯಾಂ ತ್ಯಕ್ತಜೀವಿತಃ ॥ ೩೮೦ ॥

ಕೃಷ್ಣೇನ ನಿಹತೇ ಕಂಸೇ ರಾಮೋಽಪಿ ಸುಮಹಾಬಲಃ ।
ತಸ್ಯಾನುಜಂ ಸುನಾಮಾನಂ ಮುಷ್ಟಿನೈವ ಜಘಾನ ಹ ॥ ೩೮೧ ॥

---

ಅವನ ಮೂಳೆ ಮುರಿದು ನರಗಳು ಕಿತ್ತುಹೋದುವು. ನೆಲದಮೇಲೆ ಬಿದ್ದು ಬಿಟ್ಟನು. ಇದನ್ನು ನೋಡಿ ಉಳಿದ ಜಟ್ಟಿಗಳು ಇವರು ಬಹು ಬಲಿಷ್ಠರೆಂದು ತಿಳಿದು ಓಡಿಹೋದರು.

೩೭೮-೩೮೦. ಅನಂತರ ಕಂಸನಿಗೆ ಬಹುವಾದ ಭಯವು ಹುಟ್ಟಿತು. ಇಷ್ಟರೊಳಗೆ ಮಹಾವೀರರೂ, ತಡೆಯಲು ಅಸಾಧ್ಯರೂ ವೀರರೂ ಆದ ರಾಮ ಕೃಷ್ಣರು ಎತ್ತರದಲ್ಲಿ ಹಿಂದುಗಡೆಯಲ್ಲಿ ಆ ಕಂಸನಿದ್ದ ಮಹಡಿಯನ್ನು ಹತ್ತಿದರು. ಜನಾರ್ದನನು ಅಲ್ಲಿ ಕಂಸನನ್ನು ಕಂಡು ಅವನ ತಲೆಯಮೇಲೆ ಮುಷ್ಟಿಯಿಂದ ಗುದ್ದಿ ಮಹಡಿಯಮೇಲಿನಿಂದ ಬೀದಿಯ ನೆಲದಮೇಲಕ್ಕೆ ಬಿಸುಟನು. ಇದರಿಂದ ಆ ಕಂಸನ ದೇಹವೆಲ್ಲವೂ ಜಜ್ಜಿಹೋಗಿ ಪ್ರಾಣವನ್ನು ಬಿಟ್ಟನು.

೩೮೧. ಕೃಷ್ಣನು ಕಂಸನನ್ನು ಕೊಲ್ಲಲು ಬಲಿಷ್ಠನಾದ ರಾಮನು ಅವನ ತಮ್ಮನಾದ ಸುನಾಮನನ್ನು ಮುಷ್ಟಿಯಿಂದಲೇ ಹೊಡೆದನು.

ಧರಣ್ಯಾಂ ಪಾತಯಾಮಾಸಾನುಜಂ ಚ ಧರಣೀಧರಃ ।
ಹತ್ವಾ ಕಂಸಂ ದುರಾತ್ಮಾನಂ ಸಾನುಜಂ ರಾಮಕೇಶವೌ ॥ ೩೮೨ ॥

ಪಿತ್ರೋಸ್ಸಮೀಪಮಾಗಮ್ಯ ಭಕ್ತ್ಯಾ ಚೈವ ಪ್ರಣೇಮತುಃ ।
ದೇವಕೀವಸುದೇವಶ್ಚ ಪರಿಷ್ವಜ್ಯ ಮುಹುರ್ಮುಹುಃ ॥ ೩೮೩ ॥

ಸ್ನೇಹೇನ ಮೂರ್ಧ್ನ್ಯುಪಾಘ್ರಾಣಂ ಚಕ್ರತುಃ ಪುತ್ರಲಾಲಸೌ ।
ತಯೋರುಪರಿ ದೇವಕ್ಯಾಃ ಕ್ಷೀರಂ ವವೃಷತುಃ ಸ್ತನೌ ॥ ೩೮೪ ॥

ತತ ಆಶ್ವಾಸ್ಯ ಪಿತರೌ ರಾಮಕೃಷ್ಣೌ ಬಹಿರ್ಗತೌ ।
ಏತಸ್ಮಿನ್ನಂತರೇ ದೇವಿ ದೇವದುಂದುಭಯೋ ದಿವಿ ॥ ೩೮೫ ॥

ವಿನೇದುಃ ಪುಷ್ಪವರ್ಷಾಣಿ ವವೃಷುಸ್ತ್ರಿದಶೇಶ್ವರಾಃ ।
ಸ್ತುತ್ವಾ ಮರುದ್ಗಣೈರ್ದಿವ್ಯೈರ್ನಮಸ್ಕೃತ್ಯ ಜನಾರ್ದನಂ ॥ ೩೮೬ ॥

---

೩೮೨–೩೮೪. ಧರಣೀಧರನಾದ ರಾಮನು ಆ ಕಂಸನ ತಮ್ಮನನ್ನು ಮಹಡಿಯಿಂದ ಬೀದಿಯ ನೆಲದಮೇಲಕ್ಕೆ ಬಿಸಾಡಿದನು ಹೀಗೆ ರಾಮಕೃಷ್ಣರು ಕಂಸನನ್ನೂ ಅವನ ತಮ್ಮನನ್ನೂ ಕೊಂದು ತಾಯಿತಂದೆಗಳ ಬಳಿಗೆ ಹೋಗಿ ಭಕ್ತಿಯಿಂದ ಅವರಿಗೆ ನಮಸ್ಕರಿಸಿದರು ದೇವಕಿಯೂ ವಸುದೇವನೂ ಅವರನ್ನು ಅನೇಕಬಾರಿ ಆಲಿಂಗಿಸಿಕೊಂಡರು. ಮತ್ತು ಮಕ್ಕಳಮೇಲಿನ ಪ್ರೀತಿಯಿಂದ ಅವರ ತಲೆಯನ್ನು ಮೂಸಿನೋಡಿದರು. ಆ ಇಬ್ಬರು ಮಕ್ಕಳ ಮೇಲೆಯೂ ದೇವಕಿಯ ಸ್ತನಗಳಿಂದ ಬಂದಹಾಲು ಸುರಿಯಿತು.

೩೮೫–೩೮೮. ಅನಂತರ ರಾಮಕೃಷ್ಣರು ತಾಯಿತಂದೆಗಳನ್ನು ಸಮಾಧಾನ ಪಡಿಸಿ ಹೊರಗೆ ಬಂದರು. ಆ ಸಮಯದಲ್ಲಿ ಅಂತರಿಕ್ಷದಲ್ಲಿ ದೇವದುಂದುಭಿಯು ಮೊಳಗಿತು. ದೇವತೆಗಳು ಅವರಮೇಲೆ ಹೂಮಳೆಯನ್ನು ಕರೆದರು. ಆ ದೇವತೆಗಳೆಲ್ಲರೂ ರಾಮಕೃಷ್ಣರನ್ನು ಸ್ತುತಿಸಿ ನಮಸ್ಕರಿಸಿ ಬಹು ಸಂತೋಷಗೊಂಡು

ಪರಂ ಹರ್ಷಮನುಪ್ರಾಪ್ಯ ಲೋಕಾ ಸ್ವಾ ಸ್ವಾ ಪ್ರಪೇದಿರೇ |
ನಂದಗೋಪಂ ನಮಸ್ಕೃತ್ಯ ಗೋಪವೃದ್ಧಾಂಶ್ಚ ಕೇಶವಃ ॥ ೩೮೭ ॥

ರಾಮೇಣ ಸಹ ಧರ್ಮಾತ್ಮಾ ಮುದಾ ಸಂಪರಿಷಸ್ವಜೇ |
ಬಹುರತ್ನಧನಂ ತಸ್ಮೈ ದದೌ ಪ್ರೀತ್ಯಾ ಜನಾರ್ದನಃ ॥ ೩೮೮ ॥

ಸರ್ವಾಂಸ್ತಾನ್ಗೋಪವೃದ್ಧಾಂಶ್ಚ ವಸ್ತ್ರೈರಾಭರಣಾದಿಭಿಃ |
ಬಹುಭಿರ್ಧನಧಾನ್ಯೈಶ್ಚ ಪೂಜಯಾಮಾಸ ಕೇಶವಃ ॥ ೩೮೯ ॥

ವಿಸೃಷ್ಟಾಸ್ತೇನ ಕೃಷ್ಣೇನ ನಂದಗೋಪಪುರೋಗಮಾಃ |
ಪ್ರಯಯುರ್ಗೋವ್ರಜಂ ದಿವ್ಯಂ ಹರ್ಷಶೋಕಸಮನ್ವಿತಾಃ ॥ ೩೯೦ ॥

ಮಾತಾಮಹಂ ಸಮಾಸಾದ್ಯ ರಾಮಕೃಷ್ಣೌ ದುರಾಸದೌ |
ಬಂಧಾದ್ವಿಮೋಚಯಿತ್ವಾಥ ಸಮಾಶ್ವಾಸ್ಯ ಮುಹುರ್ಮುಹುಃ ॥ ೩೯೧ ॥

---

ತಮ್ಮ ತಮ್ಮ ಲೋಕಗಳಿಗೆ ಹೊರಟು ಹೋದರು. ಆ ಕೇಶವನು ನಂದ ಗೋಪನನ್ನು ನಮಸ್ಕರಿಸಿದನು. ಅನಂತರ ರಾಮನೂ ತಾನೂ ಆ ಗೋಪರೆಲ್ಲರನ್ನೂ ಆಲಿಂಗಿಸಿಕೊಂಡರು. ಆ ನಂದಗೋಪನಿಗೆ ಪ್ರೀತಿಯಿಂದ ಬಹುವಾದ ರತ್ನವನ್ನೂ ಧನವನ್ನೂ ಕೊಟ್ಟರು.

೩೮೯. ಆ ಗೋಪರುಗಳನ್ನೆಲ್ಲಾ ವಸ್ತ್ರಗಳಿಂದಲೂ ಆಭರಣಗಳಿಂದಲೂ ಸಂತೋಷಪಡಿಸಿದನು. ಧನಗಳನ್ನೂ ಧಾನ್ಯಗಳನ್ನೂ ಬಹುವಾಗಿ ಅವರಿಗೆ ಕೊಟ್ಟನು.

೩೯೦. ನಂದಗೋಪನೇ ಮುಂತಾದುವರು ಆ ಕೃಷ್ಣನ ಅಪ್ಪಣೆಯನ್ನು ತೆಗೆದುಕೊಂಡು ಹರ್ಷಶೋಕಗಳಿಂದ ಕೂಡಿಕೊಂಡು ಅವರ ಉತ್ತಮವಾದ ಗೊಲ್ಲದೊಡ್ಡಿಗೆ ಹೊರಟು ಹೋದರು.

೩೯೧. ಆಗ ತಮ್ಮ ತಾಯಿಯ ತಂದೆಯಾದ ಉಗ್ರಸೇನನನ್ನೂ ನೋಡಿ ಅವನನ್ನು ಬಂಧನದಿಂದ ಬಿಡಿಸಿ ಆ ರಾಮಕೃಷ್ಣರು ಆ ರಾಜ್ಯದಲ್ಲಿ ಅವನಿಗೆ ಪಟ್ಟಾಭಿಷೇಕಮಾಡಿದರು. ಅವನಿಗೆ ಅನೇಕ ಬಗೆಯಾಗಿ ಸಮಾಧಾನಗಳನ್ನೂ ಹೇಳಿದರು.

ಚಕ್ರೇ ತಸ್ಯಾಭಿಷೇಕಂ ತು ತದ್ರಾಜ್ಯೇ ಮಧುಸೂದನಃ ।
ಅಕಾರಯದ್ದ್ವಿಜೈಃ ಶ್ರೇಷ್ಠೈಃ ಸ ಕಂಸಸ್ಯೋರ್ಧ್ವದೈಹಿಕಂ    ॥ ೩೯೨ ॥

ಅಕ್ರೂರಪ್ರಮುಖಾನ್ ರಾಜ್ಯೇ ಸಂಸ್ಥಾಪ್ಯ ಯದುಪುಂಗವಾನ್ ।
ರಾಜಾನಮುಗ್ರಸೇನಂ ತು ಕೃತ್ವಾ ಧರ್ಮೇಣ ಮೇದಿನೀಂ ॥
ಪಾಲಯಾಮಾಸ ಧರ್ಮಾತ್ಮಾ ವಸುದೇವಸುತೋ ಹರಿಃ    ॥ ೩೯೩ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಶ್ರೀ ಕೃಷ್ಣಚರಿತೇ ಕಂಸವಧ ನಿರೂಪಣಂ ನಾಮ
ದ್ವಿಸಪ್ತತ್ಯಧಿಕದ್ವಿಶತತಮೋಽಧ್ಯಾಯಃ

---

೩೯೨–೩೯೩. ಅನಂತರ ಅನೇಕ ಜನ ಬ್ರಾಹ್ಮಣರನ್ನು ಕರೆಸಿ ಅವರಿಂದ ಕಂಸನಿಗೆ ದಹನಾದಿ ಸಂಸ್ಕಾರಗಳನ್ನೂ ಅಪರ ಕರ್ಮಗಳನ್ನೂ ಮಾಡಿಸಿದನು. ಅಕ್ರೂರನೇ ಮುಂತಾದ ಯದುಗಳನ್ನು ರಾಜ್ಯದಲ್ಲಿ ಸಲಹೆಗೋಸ್ಕರವಾಗಿ ಅಧಿಕಾರವನ್ನು ಕೊಟ್ಟು ಇಟ್ಟನು. ಉಗ್ರಸೇನನನ್ನು ರಾಜನನ್ನಾಗಿ ಮಾಡಿದನು ಮೇಲುವಿಚಾರಣೆಯನ್ನು ತಾನು ನೋಡಿಕೊಳ್ಳುತ್ತಿದ್ದನು ಈ ರೀತಿಯಾಗಿ ವಸುದೇವನ ಮಗನಾದ ಕೃಷ್ಣನು ಧರ್ಮದಿಂದ ರಾಜ್ಯಭಾರಮಾಡುತ್ತಿದ್ದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಶ್ರೀ ಕೃಷ್ಣ ಚರಿತ್ರೆಯಲ್ಲಿ ಕಂಸವಧ ನಿರೂಪಣವೆಂಬ
ಇನ್ನೂರ ಎಪ್ಪತ್ತೆರಡನೆಯ ಅಧ್ಯಾಯವು ಮುಗಿದುದು



॥ ಶ್ರೀಃ ॥

–x–

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ತ್ರಿಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥.



॥ ಶ್ರೀ ಮಹೇಶ್ವರ ಉವಾಚ ॥

ಅಥೋಪನಯನಂ ನಾಮ ಚಕಾರಾನಕದುಂದುಭಿಃ ।
ಪುತ್ರಯೋರ್ವೇದವಿಧಿನಾ ತಸ್ಮಿನ್ ವೈ ರಾಮಕೃಷ್ಣಯೋಃ ॥ ೧ ॥

ಆಚಾರ್ಯೇಣೈವ ಗರ್ಗೇಣ ಸಂಸ್ಕೃತೌ ರಾಮಕೇಶವೌ ।
ಪಂಡಿತೈರ್ವೈಷ್ಣವೈರ್ದಿವ್ಯೈಃ ಸ್ನಾಪನೈರ್ವಿಮಲೈಶ್ಶುಭೈಃ ॥ ೨ ॥

---

### ಇನ್ನೂರ ಎಪ್ಪತ್ತಮೂರನೆಯ ಅಧ್ಯಾಯವು



೧. ಶ್ರೀ ಮಹೇಶ್ವರನು ಹೇಳಿದನು—ಆನಕದುಂದುಭಿಯೆಂದು ಹೆಸರುಳ್ಳ ವಸುದೇವನು ಆ ರಾಮಕೃಷ್ಣರಿಗೆ ವೇದೋಕ್ತ ವಿಧಾನದಿಂದ ಉಪನಯನವನ್ನು ಮಾಡಿಸಿದನು.

೨. ಆಚಾರ್ಯನಾದ ಗರ್ಗನೇ ಆ ರಾಮಕೃಷ್ಣರಿಗೆ ಉಪನಯನ ಸಂಸ್ಕಾರಗಳನ್ನು ಮಾಡಿ ವೈಷ್ಣವರಾದ ಪಂಡಿತರುಗಳಿಂದ ಮಂತ್ರೋದಕದಿಂದ ಸ್ನಾನವನ್ನು ಮಾಡಿಸಿದನು.

ಕೃತಸಂಸ್ಕಾರಕರ್ಮಾಣೌ ರಾಮಕೃಷ್ಣೌ ಮಹಾಬಲೌ ।
ಸಾಂದೀಪಿನೇರ್ಗೃಹಂ ಗತ್ವಾ ನಮಸ್ಕೃತ್ಯ ಮಹಾತ್ಮನೇ || ೩ ||

ಅಧೀತ್ಯ ವೇದಶಾಸ್ತ್ರಾಣಿ ತಸ್ಮಾತ್ತೌ ದ್ವಿಜಪುಂಗವಾತ್ ।
ಮೃತಂ ಪುತ್ರಂ ಸಮಾನೀಯ ದದತುಸ್ತಸ್ಯ ದಕ್ಷಿಣಾಂ || ೪ ||

ಆಶೀಷೋ ವಚನಂ ಲಬ್ಧ್ವಾ ಗುರೋಸ್ತಸ್ಮಾನ್ಮಹಾತ್ಮನಃ ।
ತಸ್ಮೈ ಪ್ರಣಮ್ಯ ಮಧುರಾಂ ಜಗ್ಮತುರ್ಯದುಪುಂಗವೌ || ೫ ||

ಅಥ ಕೃಷ್ಣೇನ ನಿಹತಂ ಶ್ರುತ್ವಾ ಕಂಸಂ ದುರಾಸದಂ ।
ಶ್ವಶುರಸ್ತಸ್ಯ ನೃಪತೇಃ ಜರಾಸಂಧೋ ಮಹಾಬಲಃ || ೬ ||

ಅಕ್ಷೋಹಿಣೀಸಹಸ್ರೈಸ್ತು ಸೇನಾನೀಕೈರ್ಮಹಾಬಲೈಃ ।
ಕೃಷ್ಣಂ ಹಂತುಂ ಸಮಾಗತ್ಯ ರುರೋಧ ಮಧುರಾಂ ಪುರೀಂ || ೭ ||

---

೩-೪. ಆ ರಾಮಕೃಷ್ಣರು ಉಪನಯನವಾದಮೇಲೆ ಮಹಾತ್ಮನಾದ ಸಾಂದೀಪಿನಿಯೆಂಬ ಗುರುವಿನ ಬಳಿಗೆ ಹೋಗಿ ಅವನಿಂದ ವೇದ ಶಾಸ್ತ್ರಗಳೆಲ್ಲ ವನ್ನೂ ಅಧ್ಯಯನ ಮಾಡಿ ಅವನಿಗೆ ಸತ್ತು ಹೋಗಿದ್ದ ಮಗನನ್ನು ತಂದು ಗುರು ದಕ್ಷಿಣೆಯನ್ನು ಅರ್ಪಿಸಿದರು.

೫. ಆ ಮಹಿಮನಾದ ಗುರುವಿನಿಂದ ಆಶೀರ್ವಾದವನ್ನು ಹೊಂದಿ ಅವನಿಗೆ ನಮಸ್ಕರಿಸಿ ಅವರಿಬ್ಬರೂ ಮಧುರೆಗೆ ಬಂದರು.

೬. ಬಹು ಬಲಿಷ್ಠನಾದ ಕಂಸನನ್ನು ಕೊಂದ ವಿಷಯವನ್ನು ಅವನ ಹೆಣ್ಣು ಕೊಟ್ಟ ಮಾವನಾದ ಜರಾಸಂಧನು ಕೇಳಿ ಕ್ರೋಧಗೊಂಡನು.

೭. ಅವನು ಬಹು ಬಲವಾದ ಸಾವಿರ ಅಕ್ಷೋಹಿಣೀ ಸೈನ್ಯವನ್ನು ತಂದು ಕೃಷ್ಣನನ್ನು ಕೊಲ್ಲಲು ಮಧುರೆಯನ್ನು ಮುತ್ತಿದನು.

ರಾಮಕೃಷ್ಣೌ ಮಹಾವೀರ್‍ಯೌ ವಿನಿರ್ಗತ್ಯ ಪುರೋತ್ತಮಾತ್ ।
ಗಜವಾಜೀಸಮಾಕೀರ್ಣಂ ತದ್ಬಲೌಘಂ ದದರ್ಶತುಃ ॥ ೮ ॥

ಸಸ್ಮಾರವಾಸುದೇವಸ್ತು ಪೂರ್ವಸೂತಂ ಸನಾತನಂ ।
ತಸ್ಯ ಸ್ಮರಣಮಾತ್ರೇಣ ದಾರುಕೋ ವಿಷ್ಣುಸಾರಥಿಃ ॥ ೯ ॥

ಸುಗ್ರೀವಪುಷ್ಪಕಂ ನಾಮ ಸಮಾನೀಯ ಮಹಾರಥಂ ।
ವಾಜಭಿರ್ದಿವ್ಯಪುಷ್ಪಾದ್ಯೈರುಹ್ಯಮಾನಂ ಸನಾತನಂ ॥ ೧೦ ॥

ದಿವ್ಯಾಯುಧೈರುಪೇತಂ ತಂ ಶಂಖಚಕ್ರಗದಾದಿಭಿಃ ।
ವೈನತೇಯಪತಾಕೇನ ಶೋಭಿತಂ ದೇವದುರ್ಜಯಂ ॥ ೧೧ ॥

ಅವನೀಂ ಪ್ರಾಪ್ಯ ಗೋವಿಂದಂ ಪ್ರಣಮ್ಯ ಹರಿಸಾರಥಿಃ ।
ಪ್ರದದೌ ಸ್ಯಂದನಂ ಶುಭ್ರಂ ಸಾಯುಧಾಶ್ವಸಮನ್ವಿತಂ ॥ ೧೨ ॥

---

೮. ಬಲಿಷ್ಠರಾದ ರಾಮಕೃಷ್ಣರು ಊರಿನಿಂದ ಹೊರಗೆ ಬಂದು ಆನೆ ಕುದುರೆಗಳಿಂದ ಕೂಡಿದ ಆ ಜರಾಸಂಧನ ದೊಡ್ಡ ಸೈನ್ಯವನ್ನು ನೋಡಿದರು.

೯–೧೦. ಆಗ ವಸುದೇವನು ಹಿಂದಿನ ಸಾರಥಿಯನ್ನು ಸ್ಮರಿಸಿಕೊಂಡನು. ಅವನನ್ನು ಸ್ಮರಿಸಕೊಂಡ ಕೂಡಲೇ ವಿಷ್ಣು ಸಾರಥಿಯಾದ ದಾರುಕನು ಸುಗ್ರೀವ ಪುಷ್ಪಕವೆಂಬ ಮಹಾರಥವನ್ನು ತಂದನು. ಅದು ಒಳ್ಳೆಯ ಕುದುರೆಗಳಿಂದ ಕೂಡಿದ್ದಿತು. ದಿವ್ಯವಾದ ಹೂಗಳಿಂದ ಅಲಂಕೃತವಾಗಿದ್ದಿತು.

೧೧-೧೨. ಆ ರಥವು ದಿವ್ಯವಾದ ಆಯುಧಗಳಿಂದ ತುಂಬಿದ್ದಿತು. ಶಂಖಚಕ್ರಗದೆಗಳು ಅದರಲ್ಲಿದ್ದುವು. ಗರುಡನ ಪತಾಕೆಯು ಅದರಲ್ಲಿ ಪ್ರಕಾಶಿಸುತ್ತಿದ್ದಿತು. ದೇವತೆಗಳಿಗೂ ದುರ್ಜಯವಾದ ರಥವಾಗಿದ್ದಿತು. ಇದನ್ನು ಆ ದಾರುಕನು ತೆಗೆದುಕೊಂಡು ಭೂಮಿಗೆ ಬಂದು ಕೃಷ್ಣನಿಗೆ ನಮಸ್ಕರಿಸಿ ಆಯುದ ಅಶ್ವಗಳಿಂದ ಕೂಡಿದ ಆ ರಥವನ್ನು ಶ್ರೀ ಕೃಷ್ಣನಿಗೆ ಅರ್ಪಿಸಿದನು.

ದೃಷ್ಟ್ವಾ ಹರ್ಷೇಣ ಕೃಷ್ಣೋಽಪಿ ಪರಿಣೀಯ ಮಹಾರಥಂ ।
ಆರುರೋಹಾಗ್ರಜೇನೈವ ಸ್ತೂಯಮಾನೋ ಮರುದ್ಗಣೈಃ ॥ ೧೩ ॥

ಚತುರ್ಭುಜವಪುರ್ಭೂತ್ವಾ ಶಂಖಚಕ್ರಗದಾಸಿಭೃತ್ ।
ಕಿರೀಟೀ ಕುಂಡಲೀ ಸ್ರಗ್ವೀ ಸಂಗ್ರಾಮಾಭಿಮುಖಂ ಯಯೌ ॥ ೧೪ ॥

ಬಲದೇವೋಽಪಿ ಮುಶಲಂ ಲಾಂಗಲಂ ಗೃಹ್ಯ ವೀರ್ಯವಾನ್ ।
ತತ್ಸೈನ್ಯಂ ಹಂತುಮಾರೇಭೇ ಮಹೇಶ್ವರ ಇವಾಪರಃ ॥ ೧೫ ॥

ದಾರುಕಶ್ಚ ರಥಂ ಶೀಘ್ರಂ ನೋದಯಾಮಾಸ ತದ್ರಣೇ ।
ತೃಣಗುಲ್ಮಲತಾಕ್ರಾಂತೇ ಕಾನನೇಽಗ್ನಿಮಿವಾನಿಲಃ ॥ ೧೬ ॥

ತತೋ ಗದಾಭಿಃ ಪರಿಘೈಃ ಶಕ್ತಿಭಿರ್ಮುದ್ಗರೈಸ್ತಥಾ ।
ತದ್ರಥಂ ಛಾದಯಾಮಾಸುಃ ಜರಾಸಂಧಸ್ಯ ಸೈನಿಕಾಃ ॥ ೧೭ ॥

---

೧೩. ಕೃಷ್ಣನಿಗೆ ಆ ರಥವನ್ನು ನೋಡುತ್ತಲೂ ಸಂತೋಷವಾಯಿತು. ಅನಂತರ ಆ ರಥವನ್ನು ಸ್ವೀಕರಿಸಿ ಅಣ್ಣನನ್ನು ಕೂರಿಸಿಕೊಂಡು ತಾನೂ ಕುಳಿತನು. ಆಗ ದೇವತೆಗಳು ಸ್ತುತಿಸಿದರು.

೧೪ ಆ ಕೃಷ್ಣನು ನಾಲ್ಕು ತೋಳುಗಳುಳ್ಳ ಆಕಾರವನ್ನು ಧರಿಸಿ ಶಂಖ ಚಕ್ರ ಗದೆ ಖಡ್ಗಗಳನ್ನು ಹಿಡಿದನು. ಕಿರೀಟವನ್ನು ಹಾಕಿಕೊಂಡು ಕುಂಡಲಗಳನ್ನು ಧರಿಸಿಕೊಂಡನು. ಮಾಲೆಯನ್ನು ಹಾಕಿಕೊಂಡನು. ಅನಂತರ ಯುದ್ಧರಂಗಕ್ಕೆ ಎದುರಾಗಿ ಹೊರಟನು.

೧೫. ಬಲರಾಮನೂ ಕೂಡಾ ಮುಸಲಾಯುಧವನ್ನು ಧರಿಸಿ ಆ ಸೈನ್ಯವನ್ನು ಮತ್ತೊಬ್ಬ ಮಹೇಶ್ವರನಂತೆ ಕೊಲ್ಲಲು ಆರಂಭ ಮಾಡಿದನು.

೧೬. ಹುಲ್ಲುಪೊದರುಗಳಿಂದ ಕೂಡಿರುವ ಕಾಡಿನಲ್ಲಿ ಬೆಂಕಿಯನ್ನು ಗಾಳಿಯು ಮುಂದುವರಿಸುವಂತೆ ಮಾಡುವ ರೀತಿಯಲ್ಲಿ ದಾರುಕನು ಆ ಕೃಷ್ಣನ ರಥವನ್ನು ಮುಂದಕ್ಕೆ ನಡೆಸಿದನು.

೧೭. ಆಗ ಜರಾಸಂಧನ ಸೈನಿಕರು ಗದೆ ಪರಿಘ ಶಕ್ತಿ ಮುದ್ಗರ ಇವುಗಳಿಂದ ಅವರಿಬ್ಬರೂ ಕುಳಿತಿರುವ ರಥವನ್ನು ಮುಚ್ಚಿದರು.

ಚಕ್ರೇಣೈವ ಹರಿಸ್ತೂರ್ಣಂ ತಾನಿ ಚಿಚ್ಛೇದ ಲೀಲಯಾ ।
ಬಹೂನಿ ತೃಣಕಾಷ್ಠಾನಿ ಮಹಾವಹ್ನಿರಿವಾರ್ಚಿಷಾ ॥ ೧೮ ॥

ತತಸ್ತು ಶಾಂರ್ಗಮಾದಾಯ ಸಾಯಕೈರಕ್ಷಯೈಶ್ಶಿತೈಃ ।
ಚಿಚ್ಛೇದ ತಾನಿ ಸೈನ್ಯಾನಿ ನ ಪ್ರಾಜ್ಞಾಯತ ಕಿಂಚನ ॥ ೧೯ ॥

ಚಕ್ರಚ್ಛಿನ್ನಾಶ್ಚ ವಿಮಲಾಃ ಕೇಚಿತ್ತತ್ರ ಮಹಾಬಲಾಃ ।
ಗದಯಾ ಚೂರ್ಣಿತಾಃ ಕೇಚಿತ್ ಕೇಚಿದನ್ಯೈಃ ಮಹಾರಣೇ ॥ ೨೦ ॥

ಕೇಚಿಚ್ಛೈವಾಸಿನಾ ಛಿನ್ನಾಸ್ತಥಾನ್ಯೇ ಶರತಾಡಿತಾಃ ।
ಲಾಂಗಲಾಗ್ರಹತಗ್ರೀವಾ ಮುಸಲಾಭಿನ್ನಮಸ್ತಕಾಃ ॥ ೨೧ ॥

ಕ್ಷಣೇನ ತದ್ಬಲಂ ಸರ್ವಂ ನಿಹತ್ಯ ಮಧುಸೂದನಃ ।
ಶಂಖಂ ದಧ್ಮೌ ಯದುಶ್ರೇಷ್ಠೋ ಲಯಾಶನಿನಿಭಸ್ವನಂ ॥ ೨೨ ॥

---

೧೮. ಹರಿಯು ತನ್ನ ಚಕ್ರದಿಂದಲೇ ಶೀಘ್ರವಾಗಿ ಅವೆಲ್ಲವನ್ನೂ ಬಹುವಾದ ಹುಲ್ಲುಕಡ್ಡಿಗಳನ್ನು ದೊಡ್ಡ ಬೆಂಕಿಯು ಧ್ವಂಸ ಮಾಡುವಂತೆ ಧ್ವಂಸ ಮಾಡಿದನು.

೧೯. ಅನಂತರ ಶಾಂರ್ಗವೆಂಬ ಧನುಸ್ಸನ್ನು ತೆಗೆದುಕೊಂಡು ಆದರಲ್ಲಿ ಹರಿತವಾದ ಅಕ್ಷಯಬಾಣಗಳನ್ನು ಹೂಡಿ ಆ ಸೈನ್ಯವೆಲ್ಲವನ್ನೂ ನಾಶಮಾಡಿದನು. ಅಲ್ಲಿ ಅವನ ಬಾಣಗಳು ಕಾಣುತ್ತಿದ್ದವೇ ಹೊರತು ಮತ್ತೇನೂ ಕಾಣುತ್ತಿರಲಿಲ್ಲ.

೨೦-೨೨. ಕೆಲವರು ಚಕ್ರದಿಂದಲೂ, ಕೆಲವರು ಗದೆಯಿಂಲೂ, ಕೆಲವರು ಮಿಕ್ಕ ಆಯುಧದಿಂದಲೂ, ಕೆಲವರು ಕತ್ತಿಯಿಂದಲೂ, ಕೆಲವರು ಬಾಣದಿಂದಲೂ, ಏಟನ್ನು ತಿಂದು ಸತ್ತರು. ಕೆಲವರು ಹಲಾಯುಧದ ತುದಿಯಿಂದ ಒಡೆದುಹೋದ ತಲೆಯುಳ್ಳವರಾಗಿ ಸತ್ತರು. ಈ ರೀತಿಯಾಗಿ ಕ್ಷಣಕಾಲದಲ್ಲಿ ಜರಾಸಂಧನ ಸೈನ್ಯವೆಲ್ಲವನ್ನೂ ಶ್ರೀಕೃಷ್ಣನು ನಾಶಪಡಿಸಿದನು. ಮತ್ತು ಪ್ರಳಯಕಾಲದ ಸಿಡಿಲಿನ ಧ್ವನಿಯಂತೆ ಭಯಂಕರವಾದ ಧ್ವನಿಯು ಬರುವ ಹಾಗೆ ತನ್ನ ಪಾಂಚಜನ್ಯವೆಂಬ ಉತ್ತಮೋತ್ತಮವಾದ ಶಂಖವನ್ನು ಊದಿದನು.

ಶಂಖರಾವವಿನಿರ್ಭಿನ್ನಹೃದಯಾಸ್ತೇ ಮಹಾಬಲಾಃ ।
ಯೋಧಾಃ ಸಾಶ್ವಾಃ ಸನಾಗಾಶ್ಚ ಪತಿತಾಸ್ತ್ಯಕ್ತಜೀವಿತಾಃ ॥ ೧೩ ॥

ಅಕ್ಷೌಹಿಣೀಸಹಸ್ರಂ ತು ಸಾಶ್ವಂ ಸರಥಕುಂಜರಂ ।
ಕೃಷ್ಣೇನೈಕೇನ ನಿಹತಂ ನಿಶ್ಶೇಶಂ ತದಭೂದ್ಬಲಂ ॥ ೧೪ ॥

ನಿಹತಂ ವಾಸುದೇವೇನ ಪ್ರಹರಾರ್ಧೇನ ಶಾಂಗಿಣಾ ।
ತತೋ ದೇವಗಣಾಸ್ಸರ್ವೇ ಹರ್ಷನಿರ್ಭರಚೇತಸಃ ॥ ೧೫ ॥

ವವೃಷುಃ ಪುಷ್ಪವರ್ಷಾಣಿ ಸಾಧು ಸಾಧ್ವಿತಿ ಚಾಬ್ರುವನ್ ।
ಸರ್ವಮುಷ್ಯವನೀಭಾರಂ ವಿಮುಚ್ಯ ಧರಣೀಧರಃ ॥ ೧೬ ॥

ಸಂಸ್ತೂಯಮಾನಸ್ತ್ರಿದಶೈಃ ಬಭೌ ಸಂಗ್ರಾಮಮೂರ್ಧನಿ ।
ನಿಹತಂ ಸ್ವಬಲಂ ದೃಷ್ಟ್ವಾ ಜರಾಸಂಧೋಽಪಿ ವೀರ್ಯವಾನ್ ॥ ೧೭ ॥

---

೧೩. ಈ ಶಂಖದ ಧ್ವನಿಯಿಂದ ಮಹಾಬಲರ ಹೃದಯವು ಒಡೆದು ಯೋಧರು ಕುದುರೆಗಳೊಡನೆಯೂ ಆನೆಗಳೊಡನೆಯೂ ಜೀವವನ್ನು ಕಳೆದು ಕೊಂಡು ಬಿದ್ದು ಬಿಟ್ಟರು.

೧೪. ಆ ಅಕ್ಷೋಹಿಣೀ ಸೇನೆಯನ್ನೂ ರಥ ಕುದುರೆ ಆನೆಗಳನ್ನೂ ಆ ಕೃಷ್ಣನೊಬ್ಬನೇ ಕೊಂದನು. ಈ ರೀತಿಯಾಗಿ ಆ ಸೈನ್ಯವೆಲ್ಲವೂ ನಾಶವಾಯಿತು.

೧೫–೧೭. ಶಾಂಗಾಯುಧವನ್ನು ಹಿಡಿದಿರುವ ಆ ಶ್ರೀಕೃಷ್ಣನು ಒಂದು ಗಳಿಗೆಯಲ್ಲಿಯೇ ಆ ಸೈನ್ಯವೆಲ್ಲವನ್ನೂ ಕೊಂದುಹಾಕಿದನು. ಅನಂತರ ದೇವತೆಗಳೆಲ್ಲರೂ ಹರ್ಷವುಳ್ಳವರಾಗಿ ಆ ಸ್ವಾಮಿಯಮೇಲೆ ಪುಷ್ಪವೃಷ್ಟಿಯನ್ನು ಸುರಿಸುತ್ತಾ ಸಾಧು ಸಾಧು ಎಂದೆನ್ನುತ್ತಿದ್ದರು. ಈ ರೀತಿಯಾಗಿ ಧರಣೀಧರನಾದ ಶ್ರೀಕೃಷ್ಣನು ಭೂಭಾರವೆಲ್ಲವನ್ನೂ ನಾಶಪಡಿಸಿ ದೇವತೆಗಳಿಂದ ಹೊಗಳಲ್ಪಡುತ್ತಾ ಯುದ್ಧರಂಗದಲ್ಲಿ ಪ್ರಕಾಶಿಸಿದನು ತನ್ನ ಸೈನ್ಯವೆಲ್ಲವೂ ಸತ್ತುದನ್ನು ನೋಡಿ

ಯೋದ್ಧುಮಭ್ಯಯಯೌ ತೂರ್ಣಂ ಬಲದೇವೇನ ದುರ್ಮತಿಃ ।
ತಯೋರ್ಯುದ್ಧಮಭೂದ್ಘೋರಂ ಸಂಗ್ರಾಮೇಷ್ವನಿವರ್ತಿನೋಃ ॥ ೨೮ ॥

ರಾಮೋ ಲಾಂಗಲಮಾದಾಯ ರಥಂ ತಸ್ಯ ಸಸಾರಥಿಂ ।
ವಿನಿಪಾತ್ಯ ರಣೇ ಶೂರೋ ಗೃಹೀತ್ವಾ ತಂ ಮಹಾಬಲಂ ॥ ೨೯ ॥

ಉದ್ಯಮ್ಯ ಮುಸಲಂ ತೂರ್ಣಂ ತಂ ಹಂತುಮುಪಚಕ್ರಮೇ ।
ಪ್ರಾಣಸಂಶಯಮಾಪನ್ನಂ ಜರಾಸಂಧಂ ನೃಪೋತ್ತಮಂ ॥ ೩೦ ॥

ಕೃತಂ ರಾಮೇಣ ಬಲಿನಾ ಸಿಂಹೇನೇವ ಮಹಾಗಜಂ ।
ದೃಷ್ಟ್ವಾ ಕೃಷ್ಣೋಽಗ್ರಜಂ ಪ್ರಾಹ ನ ಹಂತವ್ಯ ಇತಿ ಪ್ರಭುಃ ॥ ೩೧ ॥

ಮೋಚಯಾಮಾಸ ಧರ್ಮಾತ್ಮಾ ಜರಾಸಂಧಂ ಮಹಾಮತಿಃ ।
ವಿಮುಚ್ಯ ಕೃಷ್ಣವಾಕ್ಯೇನ ಶತ್ರುಂ ಸಂಕರ್ಷಣೋಽವ್ಯಯಃ ॥ ೩೨ ॥

ಸಾನುಜೋ ರಥಮಾರುಹ್ಯ ಮಧುರಾಂ ಪ್ರವಿವೇಶ ಹ ।
ಸ ಕಾಲಯವನಂ ಪ್ರಾಪ್ಯ ಮಹಾವೀರ್ಯಂ ಬಲಾನ್ವಿತಂ ॥ ೩೩ ॥

---

ಬಲಿಷ್ಠನಾದ ಜರಾಸಂಧನು ಬಲರಾಮನೊಡನೆ ಯುದ್ಧಮಾಡಲು ಬಂದನು. ಯುದ್ಧದಲ್ಲಿ ಹಿಂದೆಗೆಯದಿರುವ ಅವರಿಗೆ ಘೋರವಾದ ಯುದ್ಧವು ನಡೆಯಿತು.

೨೯–೩೩. ಆಗ ಬಲರಾಮನು ಲಾಂಗಲಾಯುಧವನ್ನು ತೆಗೆದುಕೊಂಡು ಆ ಜರಾಸಂಧನ ರಥವನ್ನೂ ಸಾರಥಿಯನ್ನೂ ನಾಶಪಡಿಸಿ ಆ ಜರಾಸಂಧನನ್ನು ಹಿಡಿದುಕೊಂಡು ಮುಸಲವನ್ನು ತೆಗೆದು ಹೊಡೆಯಲು ಮೊದಲು ಮಾಡಿದನು. ಪ್ರಾಣದ ವಿಷಯದಲ್ಲಿ ಸಂದೇಹವಿರುವ ಹಾಗೆ ಆ ರಾಜನಾದ ಜರಾಸಂಧನನ್ನು ಮಾಡಿ ಸಿಂಹವು ಮಹಾಗಜವನ್ನು ಹಿಂಸಿಸಿ ಗರ್ಜಿಸುವಂತೆ ಆ ರಾಮನು ಗರ್ಜಿಸಿದನು. ಇದನ್ನು ಕೃಷ್ಣನು ನೋಡಿ ಅಣ್ಣನನ್ನು ಕುರಿತು ಕೊಲ್ಲಬೇಡವೆಂದು ಹೇಳಿ ಆ ಜರಾಸಂಧನನ್ನು ಬಿಡಿಸಿದನು. ಬಲರಾಮನು ಕೃಷ್ಣನೊಡನೆ ರಥವನ್ನು ಹತ್ತಿಕೊಂಡು ಮಧುರೆಗೆ ಬಂದನು. ಹೀಗೆ ಬಿಡಲ್ಪಟ್ಟ ಜರಾಸಂಧನು ಮಹಾಪರಾಕ್ರಮಿಯಾದ ಕಾಲಯವನನ ಬಳಿಗೆ ಹೋಗಿ

ಪುತ್ರಯೋರ್ವಸುದೇವಸ್ಯ ಸಮಾಚಷ್ಟ ಪರಾಕ್ರಮಂ ।
ದಾನವಾನಾಂ ವಧಂ ಚೈವ ಕಂಸಸ್ಯ ನಿಧನಂ ತಥಾ ॥ ೩೪ ॥

ಅಕ್ಷೌಹಿಣೀನಾಂ ಚ ವಧಂ ತಥಾ ಸ್ವಸ್ಯ ಪರಾಜಯಂ ।
ಸರ್ವಂ ನಿವೇದಯಾಮಾಸ ಕೃಷ್ಣಸ್ಯ ಚರಿತಂ ಮಹತ್ ॥ ೩೫ ॥

ತಚ್ಛ್ರುತ್ವಾ ಯವನಃ ಕ್ರುದ್ಧೋ ಮಹಾಬಲಪರಾಕ್ರಮೈಃ ।
ಮ್ಲೇಚ್ಛಕೋಟಿಸಹಸ್ರೈಸ್ತು ಜಗಾಮ ಮಥುರಾಂ ಪುರೀಂ ॥ ೩೬ ॥

ಮಗಧಾಧಿಪತೇಸ್ತಸ್ಯ ಸಹಾಯಾರ್ಥಂ ಮಹಾಬಲಃ ।
ತೇನೈವ ಸಹಿತಸ್ತೂರ್ಣಂ ಮಹಾಮದಸಮುಸ್ಥಿತಃ ॥ ೩೭ ॥

ಬಲೈರಾಚ್ಛಾದ್ಯ ಪೃಥಿವೀಂ ನಾನಾಜನಪದಾನ್ವಿತಾಂ ।
ಸನ್ನಿವೇಶ್ಯ ಮಹಾಸೈನ್ಯಂ ರುರೋಧ ಮಥುರಾಂ ಬಲೀ ॥ ೩೮ ॥

---

ಈ ವಸುದೇವನ ಮಕ್ಕಳಾದ ರಾಮಕೃಷ್ಣರ ಪರಾಕ್ರಮವನ್ನು ಹೇಳಿದನು. ದಾನವರ ವಧೆಯನ್ನೂ ಕಂಸನ ನಿಧನವನ್ನೂ ಅಕ್ಷೌಹಿಣೀ ಸೈನ್ಯದ ನಾಶವನ್ನೂ ತನಗುಂಟಾದ ಪರಾಜಯವನ್ನೂ ಹೇಳಿ ಆ ಕೃಷ್ಣನ ಚರಿತ್ರೆಯನ್ನೆಲ್ಲಾ ವರ್ಣಿಸಿದನು.

೩೬. ಯವನನಾದ ಆ ಕಾಲಯವನನು ಅದನ್ನು ಕೇಳಿ ಕೋಪಗೊಂಡು ಬಹು ಪರಾಕ್ರಮಿಗಳಾದ ಕೋಟಿಸಾವಿರ ಮ್ಲೇಚ್ಛರೊಡನೆ ಮಥುರೆಗೆ ಹೋದನು.

೩೭-೩೮. ಮಗಧ ರಾಜನಾದ ಶಿಶುಪಾಲನ ಸಹಾಯಕ್ಕೋಸ್ಕರ ಅವರೆಲ್ಲರೂ ಬಂದರು. ಅವರೊಡನೆಯೂ ತನ್ನ ಸೈನ್ಯದೊಡನೆಯೂ ಆ ದೊಡ್ಡ ದೇಶಕ್ಕೆ ರಾಜಧಾನಿಯಾದ ಮಥುರೆಗೆ ಹೋಗಿ ಅಲ್ಲಿ ಸೈನ್ಯವನ್ನಿಟ್ಟುಕೊಂಡು ಮುತ್ತಿಗೆ ಹಾಕಿ ಅವರೆಲ್ಲರೂ ನಿಂತರು.

ಕೃಷ್ಣೋಽಪಿ ಚಿಂತಯಿತ್ವಾಥ ಪೌರಾಣಾಂ ಕುಶಲಂ ತದಾ ।
ಯಯಾಚೇ ಸಾಗರಂ ಭೂಮಿಂ ನಿವಾಸಾರ್ಥಂ ಜನಸ್ಯ ಚ ‖ ೩೯ ‖

ತ್ರಿಂಶದ್ಯೋಜನವಿಸ್ತೀರ್ಣಾಂ ದದೌ ಕೃಷ್ಣಸ್ಯ ಸಾಗರಃ ।
ಕೃಷ್ಣಶ್ಚಾಪ್ಸು ಪುರೀಂ ತತ್ರ ನಾಮ್ನಾ ದ್ವಾರವತೀಂ ಶುಭಾಂ ‖ ೪೦ ‖

ಬಹುಪ್ರಾಸಾದಸಂಯುಕ್ತಾಂ ಹೇಮಪ್ರಾಕಾರತೋರಣಾಂ ।
ನಾನಾಮಣಿಮಯೈರ್ದಿವ್ಯೈಃ ಗೃಹಪಂಕ್ತಿಭಿರಾವೃತಾಂ ‖ ೪೧ ‖

ಉದ್ಯಾನೈಶ್ಚ ತಥಾ ರಮ್ಯೈಸ್ತಟಾಗೈರ್ಬಹುಭಿರ್ವೃತಾಂ ।
ಅಸೃಜತ್ಪುಂಡರೀಕಾಕ್ಷೋ ಯಥೇಂದ್ರಸ್ಯಾಮರಾವತೀ ‖ ೪೨ ‖

ಸುಷುಪ್ತಾನ್ ಮಧುರಾಯಾಂ ತು ಪೌರಾಂಸ್ತತ್ರ ಜನಾರ್ದನಃ ।
ಉದ್ಧೃತ್ಯ ಸಹಸಾ ರಾತ್ರೌ ದ್ವಾರವತ್ಯಾಂ ನ್ಯವೇಶಯತ್ ‖ ೪೩ ‖

---

೩೯–೪೨. ಆಗ ಕೃಷ್ಣನು ಪಟ್ಟಣಿಗರನ್ನು ಕಾಪಾಡುವ ಬಗೆಯನ್ನೂ ಅವರ ಯೋಗಕ್ಷೇಮವನ್ನೂ ಯೋಚಿಸಿದನು. ಅನಂತರ ಸಮುದ್ರ ರಾಜನನ್ನು ಕುರಿತು ಆ ಪಟ್ಟಣದ ಜನಗಳು ವಾಸಮಾಡಲು ಭೂಮಿಯನ್ನು ಕೇಳಿದನು. ಅದರಂತೆಯೇ ಸಮುದ್ರರಾಜನು ಮೂವತ್ತು ಯೋಜನದ ಅಗಲವುಳ್ಳ ಭೂಮಿಯನ್ನು ಕೃಷ್ಣನಿಗೆ ಕೊಟ್ಟನು. ಕೃಷ್ಣನು ಆ ನೀರಿನ ಮಧ್ಯದಲ್ಲಿ ದ್ವಾರವತೀ ಎಂಬ ಪಟ್ಟಣವನ್ನು ನಿರ್ಮಿಸಿದನು. ಅದು ಅನೇಕವಾದ ದೊಡ್ಡ ದೊಡ್ಡ ಮಹಡಿಯ ಮನೆಗಳಿಂದ ಕೂಡಿದ್ದಿತು. ಚಿನ್ನದ ಕೋಟೆಗಳಿದ್ದುವು. ಅನೇಕ ಬಗೆಯ ಮಣಿಗಳಿಂದ ಕೂಡಿದ ಮನೆಗಳನ್ನು ಸಾಲುಸಾಲಾಗಿ ಕಟ್ಟಿದ್ದರು. ಉದ್ಯಾನವನಗಳು ರಮ್ಯವಾಗಿದ್ದುವು. ಅನೇಕವಾದ ಕೆರೆಗಳು ಆ ಪಟ್ಟಣದಲ್ಲಿದ್ದುವು. ಈ ರೀತಿಯಾಗಿ ಆ ಪುಂಡರೀಕಾಕ್ಷನು ಇಂದ್ರನು ಅಮರಾವತಿಯನ್ನು ಕಟ್ಟಿಕೊಂಡಿರುವಂತೆ ಬಹಳ ಚೆನ್ನಾಗಿ ಕಟ್ಟಿಕೊಂಡನು.

೪೩. ಆಗ ಆ ಮಧುರೆಯಲ್ಲಿ ಮಲಗಿದ್ದ ಪಟ್ಟಣಿಗರನ್ನು ಆ ರಾತ್ರಿಯಲ್ಲಿಯೇ ಎತ್ತಿಕೊಂಡು ಹೋಗಿ ದ್ವಾರವತಿಯಲ್ಲಿಟ್ಟನು.

ಪ್ರಬುದ್ಧಾಸ್ತೇ ಜನಾಸ್ಸರ್ವೇ ಪುತ್ರದಾರಸಮನ್ವಿತಾಃ ।
ಹೇಮಹರ್ಮ್ಯತಲೇ ವಿಷ್ಟಾ ವಿಸ್ಮಯಂ ಪರಮಂ ಯಯುಃ ॥ ೪೪ ॥

ಬಹುಭಿರ್ಧನಧಾನ್ಯೈಶ್ಚ ದಿವ್ಯವಸ್ತ್ರವಿಭೂಷಣೈಃ ।
ಪರಿಪೂರ್ಣೈರ್ನಿರಾತಂಕೈಃ ಗೃಹಮುಖ್ಯೈಸ್ಸಮಾವೃತಾಃ ॥ ೪೫ ॥

ತಸ್ಮಿನ್ ಪ್ರಹೃಷ್ಟಾಸ್ಸಂತಸ್ಥುರ್ದಿವಿ ದೇವಗಣಾ ಇವ ।
ಯವನೇನ ತದಾ ಯೋದ್ಧುಂ ರಾಮಕೃಷ್ಣೌ ಮಹಾಬಲೌ ॥ ೪೬ ॥

ವಿನಿರ್ಯಯತುರಾಶ್ಮೇಶೌ ಮಥುರಾಯಾ ಬಹಿಸ್ತದಾ ।
ರಾಮೋ ಲಾಂಗಲಮಾದಾಯ ಮುಸಲಂ ಚ ಮಹಾರಥಃ ॥ ೪೭ ॥

ಜಘಾನ ಸಮರೇ ಕ್ರುದ್ಧೋ ಯವನಾನಾಂ ಮಹದ್ಬಲಂ ।
ಕೃಷ್ಣಸ್ತು ಶಾಂರ್ಗಮಾಸಜ್ಯ ಬಾಣೈರಗ್ನಿಶಿಖೋಪಮೈಃ ॥ ೪೮ ॥

---

೪೪. ಆಮೇಲೆ ಆ ಜನರು ಎಚ್ಚೆತ್ತು ನೋಡಲು ತಾವು ಸಂಸಾರದೊಡನೆ ಚಿನ್ನದ ಮಹಡಿಯ ಮನೆಯಲ್ಲಿ ಇರುವುದನ್ನು ನೋಡಿ ಬಹು ಆಶ್ಚರ್ಯಪಟ್ಟರು.

೪೫. ಆ ಮನೆಯಲ್ಲಿ ಬಹುವಾದ ಧನವೂ ಧಾನ್ಯವೂ ಇದ್ದುವು. ದಿವ್ಯವಾದ ವಸ್ತ್ರಗಳೂ ಭೂಷಣಗಳೂ ಇದ್ದುವು. ಈ ರೀತಿಯಾಗಿ ಪರಿಪೂರ್ಣವಾಗಿಯೂ ತೊಂದರೆಯಿಲ್ಲದೆಯೂ ಇರುವ ಮನೆಗಳಲ್ಲಿ ಅವರು ಇದ್ದರು.

೪೬-೫೨. ಆ ಪಟ್ಟಣಿಗರೆಲ್ಲರೂ ಸಂತೋಷದಿಂದ ಸ್ವರ್ಗದಲ್ಲಿ ದೇವತೆಗಳು ಇರುವಂತೆ ಇದ್ದರು. ಅನಂತರ ಈ ಬಹು ಬಲಶಾಲಿಗಳಾದ ರಾಮಕೃಷ್ಣರು ಆ ದುಷ್ಟನಾದ ಕಾಲಯವನನನ್ನೂ ಅವನ ಸೈನ್ಯವನ್ನೂ ಸಂಹರಿಸುವುದಕ್ಕೋಸ್ಕರ ಮಥುರೆಯಿಂದ ಹೊರಕ್ಕೆ ಹೊರಟರು. ರಾಮನು ಲಾಂಗಲವನ್ನೂ ಮುಸಲವನ್ನೂ ತೆಗೆದುಕೊಂಡು ಯುದ್ಧರಂಗದಲ್ಲಿ ಅನೇಕ ಯವನರನ್ನು ಕೊಂದನು. ಕೃಷ್ಣನು ಶಾಂರ್ಗವನ್ನು ಹೆದೆಯೇರಿಸಿ ಅದರಲ್ಲಿ ಬೆಂಕಿಗೆ

ನಿರ್ದದಾಹ ಬಲಂ ಸರ್ವಂ ಮ್ಲೇಚ್ಛಾನಾಂ ದೇವಕೀಸುತಃ ।
ನಿಹತಂ ಸ್ವಬಲಂ ದೃಷ್ಟ್ವಾ ಸ ಕಾಲಯವನೋ ಬಲೀ ॥ ೪೯ ॥

ಯುಯುಧೇ ವಾಸುದೇವೇನ ಗದಯಾ ಯವನೇಶ್ವರಃ ।
ಕೃಷ್ಣೋಽಪಿ ಕದನಂ ತೇನ ಕೃತ್ವಾ ಚಿರಮನಾಮಯಃ ॥ ೫೦ ॥

ವಿಮುಖಃ ಪ್ರಾದ್ರವತ್ಕೃಷ್ಣಃ ಸಂಗ್ರಾಮಾತ್ಕಮಲೇಕ್ಷಣಃ ।
ಸೋಽನುಯಾತೋಽತಿವೇಗೇನ ತಿಷ್ಠ ತಿಷ್ಠೇತಿ ಚ ಬ್ರುವನ್ ॥ ೫೧ ॥

ವೇಗಾತ್ಕೃಷ್ಣೋ ಗಿರಿಗುಹಾಂ ಪ್ರವಿವೇಶ ಮಹಾಮತಿಃ ।
ತತ್ರ ಪ್ರಸುಪ್ತೋ ರಾಜಾಸೌ ಮುಚುಕುಂದೋ ಮಹಾಮುನಿಃ ॥ ೫೨ ॥

ಅದೃಶ್ಯಸ್ತಸ್ಯ ನೃಪತೇಃ ಸಂಸ್ಥಿತೋ ಭಗವಾನ್ ಹರಿಃ
ಯವನೋಽಪಿ ಮಹಾಧೀರೋ ಗದಾಮುದ್ಯಮ್ಯ ಪಾಣಿನಾ ॥ ೫೩ ॥

---

ಸಮವಾದ ಬಾಣಗಳನ್ನು ಹೂಡಿ ಆ ಮ್ಲೇಚ್ಛರ ಬಲವೆಲ್ಲವನ್ನೂ ನಾಶ ಮಾಡಿದನು. ಆ ಕಾಲಯವನನು ತನ್ನ ಸೈನ್ಯವೆಲ್ಲವೂ ನಾಶವಾದುದನ್ನು ತಿಳಿದು ಗದೆಯನ್ನು ತೆಗೆದುಕೊಂಡು ಬಂದು ವಾಸುದೇವನೊಡನೆ ಯುದ್ಧಮಾಡಿದನು. ಕೃಷ್ಣನು ಬಹು ಕಾಲದವರೆಗೂ ಅವನೊಡನೆ ಯುದ್ಧವನ್ನು ಮಾಡಿ ಸೋತು ಯುದ್ಧಭೂಮಿಯಿಂದ ಹೊರಟು ಹೋದನು. ಆ ಯವನನು ನಿಲ್ಲು ನಿಲ್ಲು ಎಂದೆನ್ನುತ್ತಾ ವೇಗದಿಂದ ಅಟ್ಟಿಸಿಕೊಂಡು ಬಂದನು. ಕೃಷ್ಣನು ವೇಗದಿಂದ ಹೋಗಿ ಅಲ್ಲಿದ್ದ ಒಂದು ಪರ್ವತದ ಗುಹೆಯನ್ನು ಹೊಕ್ಕನು. ಆ ಗುಹೆಯಲ್ಲಿ ಮುಚುಕುಂದನೆಂಬ ಮಹಾಮುನಿಯು ಮಲಗಿದ್ದನು. ಈ ಕೃಷ್ಣನು ಅವನ ಹಾಸಿಗೆಯಲ್ಲಿ ಕಾಣದಂತೆ ಅವಿತುಕೊಂಡನು.

೫೩-೫೮. ಮಹಾವೀರನಾದ ಯವನನು ಕೈಯ್ಯಲ್ಲಿ ಗದೆಯನ್ನು ಎತ್ತಿಕೊಂಡೇ ಕೃಷ್ಣನನ್ನು ಹೊಡೆಯಲು ಸಿದ್ಧನಾಗಿ ಆ ಗುಹೆಗೆ ನುಗ್ಗಿದನು. ಅಲ್ಲಿ

ಕೃಷ್ಣಂ ಹಂತುಂ ಸಮಾರಬ್ಧೋ ಗುಹಾಂ ತಾಂ ಪ್ರವಿವೇಶ ಹ ।
ದೃಷ್ಟ್ವಾ ಶಯಾನಂ ರಾಜಾನಂ ಮತ್ವಾ ಕೃಷ್ಣಂ ಜನಾರ್ದನಂ ॥ ೫೪ ॥

ಪಾದೇನ ತಾಡಯಾಮಾಸ ಮುಚುಕುಂದಂ ಮಹಾಮುನಿಂ ।
ತತಃ ಪ್ರಬೋಧಯಾಮಾಸ ಮುಚುಕುಂದೋ ಮಹಾಮುನಿಃ ॥ ೫೫ ॥

ಕ್ರೋಧಾತ್ಸಂರಕ್ತನಯನೋ ಹುಂಕಾರಂ ಕೃತವಾನಸೌ ।
ತಸ್ಯ ಹುಂಕಾರಶಬ್ದೇನ ತಥಾ ಕ್ರೋಧನಿರೀಕ್ಷಣಾತ್ ॥ ೫೬ ॥

ನಿರ್ದಗ್ಧೋ ಭಸ್ಮತಾಂ ಪ್ರಾಪ ಯವನಸ್ತ್ಯಕ್ತಜೀವಿತಃ ।
ತತಃ ಕೃಷ್ಣಂ ದದರ್ಶಾಗ್ರೇ ರಾಜರ್ಷಿಃ ಪುರತಃ ಪ್ರಭುಂ ॥ ೫೭ ॥

ನೀಲೋತ್ಪಲದಲಶ್ಯಾಮಂ ಪುಂಡರೀಕನಿಭೇಕ್ಷಣಂ ।
ಶಂಖಚಕ್ರಗದಾಪಾಣಿಂ ಪೀತವಾಸಸಮಚ್ಯುತಂ ॥ ೫೮ ॥

ದೃಷ್ಟ್ವಾ ತಂ ಸಹಸೋತ್ಥಾಯ ರಾಜರ್ಷಿರಮಿತೌಜಸಂ ।
ಅಹೋ ಭಾಗ್ಯಮಹೋಭಾಗ್ಯಮಿತ್ಯುವಾಚ ಮಹಾಮುನಿಃ ॥ ೫೯ ॥

---

ಆ ಮುನಿಯೂ ರಾಜನೂ ಆದ ಮುಚುಕುಂದನು ಮಲಗಿರುವುದನ್ನು ನೋಡಿ ಇವನೇ ಕೃಷ್ಣನಿರಬಹುದೆಂದು ತಿಳಿದು ಆ ಮುಚುಕುಂದನನ್ನು ಕಾಲಿನಿಂದ ಒದೆದು ಎಚ್ಚರಗೊಳಿಸಿದನು. ಆಗ ಆ ಮುನಿಯೂ ರಾಜನೂ ಆಗಿರತಕ್ಕ ಆ ಮುಚುಕುಂದನು ಎಚ್ಚತ್ತು ಕೋಪದಿಂದ ಕಣ್ಣನ್ನು ಕೆಂಪಗೆಮಾಡಿಕೊಂಡು ಹುಂಕಾರಮಾಡಿದನು. ಅವನ ಹುಂಕಾರದ ಶಬ್ದದಿಂದಲೂ ಕೋಪದ ನೋಟದಿಂದಲೂ ಆ ಕಾಲಯವನನು ಸುಟ್ಟುಬೂದಿಯಾಗಿ ಸತ್ತುಹೋದನು. ಅನಂತರ ಆ ರಾಜರ್ಷಿಯಾದ ಮುಚುಕುಂದನು ಎದುರಿನಲ್ಲಿ ಕೃಷ್ಣನಿರುವುದನ್ನು ಕಂಡನು. ಅವನು ನೀಲೋತ್ಪಲದಂತೆ ಕಪ್ಪಗಿದ್ದನು. ಪುಂಡರೀಕದಂತೆ ಕಣ್ಣುಗಳಿದ್ದುವು. ಶಂಖಚಕ್ರಗದೆಗಳು ಕೈಯ್ಯಲ್ಲಿದ್ದುವು. ಹೊಂಬಣ್ಣದ ಬಟ್ಟೆಯನ್ನು ಧರಿಸಿದ್ದನು. ಇಂತಹ ಅಚ್ಯುತನನ್ನು ನೋಡಿದನು.

೫೯. ಆ ಕೃಷ್ಣನನ್ನು ನೋಡಿ ಬೇಗನೆ ಮೇಲಕ್ಕೆದ್ದು ಮುಚುಕುಂದನು ಅಹೋ! ಭಾಗ್ಯವು. ಅಹೋ! ಭಾಗ್ಯವು. ಎಂಬುದಾಗಿ ಹೇಳಿದನು.

ಪುಲಕಾಂಕಿತಸರ್ವಾಂಗಃ ಸಾನಂದಾಶ್ರುಜಲಾಕುಲಃ ।
ಸ್ತುವನ್ವೈ ಜಯಶಬ್ದೇನ ಪ್ರಣನಾಮ ಮುಹುರ್ಮುಹುಃ ॥ ೬೦ ॥

॥ ಮುಚುಕುಂದ ಉವಾಚ ॥

ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ದರ್ಶನಾತ್ಪರಮೇಶ್ವರ ।
ಅದ್ಯ ಮೇ ಸಫಲಂ ಜನ್ಮ ಜೀವಿತಂ ಸಫಲಂ ಮಮ ॥ ೬೧ ॥

ನಮಸ್ತೇ ವಾಸುದೇವಾಯ ಜಗನ್ನಾಥಾಯ ಶಾರ್ಙ್ಗಿಣೇ ।
ದಾಮೋದರಾಯ ದೇವಾಯ ತೇಜಸಾಂ ನಿಧಯೇ ನಮಃ ॥ ೬೨ ॥

ಅಧೋಕ್ಷಜಾಯ ಹರಯೇ ನೃಸಿಂಹವಪುಷೇ ನಮಃ ।
ರಾಘವಾಯ ನಮಸ್ತುಭ್ಯಂ ಪುಂಡರೀಕೇಕ್ಷಣಾಯ ಚ ॥ ೬೩ ॥

ಅಚ್ಯುತಾಯಾ ವಿಕಾರಾಯಾ ತಥಾನಂತಾಯ ತೇ ನಮಃ ।
ಗೋವಿಂದಾಯ ನಮಸ್ತುಭ್ಯಂ ವಿಷ್ಣವೇ ಜಿಷ್ಣವೇ ನಮಃ ॥ ೬೪ ॥

---

೬೦. ಮೈಯ್ಯೆಲ್ಲವೂ ಬೆವರಿತು. ಕೂದಲುಗಳು ನಿಮಿರಿದುವು. ಕಣ್ಣುಗಳಲ್ಲಿ ಸಂತೋಷದಿಂದ ನೀರುತುಂಬಿತು. ಆಗ ಜಯ ಜಯ ಎಂಬ ಶಬ್ದದಿಂದ ಸ್ತುತಿಸುತ್ತಾ ಅನೇಕಬಾರಿ ನಮಸ್ಕರಿಸಿದನು.

೬೧. ಮುಚುಕುಂದನು ಹೇಳಿದನು :—ಧನ್ಯನಾದೆನು. ಕೃತಕೃತ್ಯನಾದೆನು. ನಿನ್ನನ್ನು ನೋಡಿದುದರಿಂದ ಇಂದು ನನ್ನ ಜನ್ಮವು ಸಾರ್ಥಕವಾಯಿತು. ಜೀವಿತವು ಫಲವುಳ್ಳದ್ದಾಯಿತು.

೬೨–೬೬. ವಾಸುದೇವನಿಗೆ ನಮಸ್ಕಾರವು ಜಗನ್ನಾಥನಿಗೆ ನಮಸ್ಕಾರವು. ಶಾರ್ಙ್ಗಿಗೆ ನಮಸ್ಕಾರವು. ದಾಮೋದರನಿಗೆ ನಮಸ್ಕಾರವು. ತೇಜೋನಿಧಿಗೆ ನಮಸ್ಕಾರವು. ಇಂದ್ರಿಯಗಳನ್ನು ತಿರಸ್ಕರಿಸಿರುವವನಿಗೆ ನಮಸ್ಕಾರವು. ನರಸಿಂಹನಿಗೆ ನಮಸ್ಕಾರವು. ರಾಘವನಿಗೆ ನಮಸ್ಕಾರವು. ಪುಂಡರೀಕಾಕ್ಷನಿಗೆ ನಮಸ್ಕಾರವು. ಅಚ್ಯುತನಿಗೆ ನಮಸ್ಕಾರವು. ವಿಕಾರವಿಲ್ಲದವನಿಗೆ ನಮಸ್ಕಾರವು. ಅನಂತನಿಗೆ ನಮಸ್ಕಾರವು. ಗೋವಿಂದನಿಗೆ ನಮಸ್ಕಾರವು. ವಿಷ್ಣುವಿಗೆ ನಮಸ್ಕಾರವು. ನಾರಾಯಣನಿಗೆ ನಮಸ್ಕಾರವು. ಶ್ರೀಶನಿಗೆ

ನಾರಾಯಣಾಯ ಶ್ರೀಶಾಯ ಕೃಷ್ಣಾಯ ಪರಮಾತ್ಮನೇ |
ಮುಕುಂದಾಯ ನಮಸ್ತುಭ್ಯಂ ಚತುರ್ವ್ಯೂಹಾಯ ತೇ ನಮಃ ॥ ೬೫ ॥

ನಮಃ ಪರಮಕಲ್ಯಾಣ ನಮಸ್ತೇ ಪರಮಾತ್ಮನೇ |
ವಾಸುದೇವಾಯ ಶಾನ್ತಾಯ ಯದೂನಾಂ ಪತಯೇ ನಮಃ ॥ ೬೬ ॥

॥ ಮಹೇಶ್ವರ ಉವಾಚ ॥

ಏವಂ ಸ್ತುತ್ವಾ ತು ಗೋವಿಂದಂ ಪ್ರಣನಾಮ ಪುನಃ ಪುನಃ ।
ಸಂತುಷ್ಟೋ ಭಗವಾನ್ ಪ್ರಾಹ ಮುಚುಕುಂದಂ ಮಹಾಮುನಿಂ ॥ ೬೭ ॥

॥ ಭಗವಾನುವಾಚ ॥

ವರಂ ವೃಣೀಷ್ವ ರಾಜರ್ಷೇ ಯತ್ತೇ ಮನಸಿ ವರ್ತತೇ ॥ ೬೮ ॥

---

ನಮಸ್ಕಾರವು. ಕೃಷ್ಣನಿಗೆ ನಮಸ್ಕಾರವು. ಪರಮಾತ್ಮನಿಗೆ ನಮಸ್ಕಾರವು. ಮುಕುಂದನಿಗೆ ನಮಸ್ಕಾರವು. ಚತುರ್ವ್ಯೂಹನಿಗೆ ನಮಸ್ಕಾರವು. ಪರಮ ಕಲ್ಯಾಣಮೂರ್ತಿಗೆ ನಮಸ್ಕಾರವು. ಪರಮಾತ್ಮನಿಗೆ ನಮಸ್ಕಾರವು. ವಾಸು ದೇವನಿಗೆ ನಮಸ್ಕಾರವು. ಶಾಂತನಿಗೆ ನಮಸ್ಕಾರವು. ಯದುಗಳ ಒಡೆಯನಿಗೆ ನಮಸ್ಕರವು.

೬೭. ಮಹೇಶ್ವರನು ಹೇಳಿದನು–ಈ ರೀತಿಯಾಗಿ ಮುಚುಕುಂದನು ಹೇಳುತ್ತಾ ಗೋವಿಂದನಿಗೆ ನಮಸ್ಕರಿಸಿದನು. ಆಗ ಸಂತುಷ್ಟನಾದ ಭಗವಂತನು ಮುಚುಕುಂದನನ್ನು ಕುರಿತು ಇಂತೆಂದನು.

೬೮ ಭಗವಂತನು ಹೇಳಿದನು-ಎಲೈ ರಾಜರ್ಷಿಯಾದ ಮುಚುಕುಂದನೆ ನಿನ್ನ ಮನಸ್ಸಿನಲ್ಲಿರುವ ವರವನ್ನು ಕೇಳಿಕೊ.

॥ ಮಹೇಶ್ವರ ಉವಾಚ ॥

ಸೋಽಪಿ ಮುಕ್ತಿಂ ಯಯಾಚಾಥ ಪುನರಾವೃತ್ತಿವರ್ಜಿತಾಂ ।
ತಸ್ಮೈ ದದೌ ತದಾ ಕೃಷ್ಣೋ ದಿವ್ಯಂ ಲೋಕಂ ಸನಾತನಂ ॥ ೭೯ ॥

ರಾಜಾ ತು ಮಾನುಷಂ ರೂಪಂ ವಿಹಾಯಾಥ ಮಹಾಮುನಿಃ ।
ಸಮಾನರೂಪಮಾಸ್ಥಾಯ ದೇವಸ್ಯ ಪರಮಾತ್ಮನಃ ।
ವೈನತೇಯಂ ಸಮಾರುಹ್ಯ ಶಾಶ್ವತಂ ಪದಮಾವಿಶತ್ ॥ ೮೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ
ಸಂವಾದೇ ಶ್ರೀ ಕೃಷ್ಣ ಚರಿತೇ ಮುಚುಕುಂದೋಪಾಖ್ಯಾನಂ ನಾಮ
ತ್ರಿಸಪ್ತತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೭೯. ಮಹೇಶ್ವರನು ಹೇಳಿದನು–ಅವನು ಮತ್ತೆ ಹಿಂದಿರುಗದಂತಹ ಶಾಶ್ವತವಾದ ಮುಕ್ತಿಯನ್ನು ಕೇಳಿಕೊಂಡನು. ಶ್ರೀಕೃಷ್ಣನು ಅವನಿಗೆ ಅಂತಹ ದಿವ್ಯವೂ ಸನಾತನವೂ ಆದ ಮುಕ್ತಿಯನ್ನೇ ಕೊಟ್ಟನು.

೮೦. ಆಗ ಆ ರಾಜರ್ಷಿಯು ತನ್ನ ರೂಪವನ್ನು ಬಿಟ್ಟು ಆ ಸ್ವಾಮಿಗೆ ಸಮವಾದ ರೂಪವನ್ನು ಹೊಂದಿ ಗರುಡನಮೇಲೆ ಕುಳಿತು ಶಾಶ್ವತವಾದ ವೈಕುಂಠಕ್ಕೆ ಹೋದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ
ಸಂವಾದದ ಶ್ರೀಕೃಷ್ಣಚರಿತ್ರೆಯಲ್ಲಿ ಮುಚುಕುಂದೋಪಾಖ್ಯಾನವೆಂಬ
ಇನ್ನೂರ ಎಪ್ಪತ್ತಮೂರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

—x—

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಚತುಸ್ಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ||



**|| ಶ್ರೀ ರುದ್ರ ಉವಾಚ ||**

**ಹತ್ವಾಥ ಯವನಂ ತತ್ರ ಮುಚುಕುಂದೇನ ಧೀಮತಾ |**
**ದತ್ವಾ ತಸ್ಮೈ ಪರಾಂ ಮುಕ್ತಿಂ ನಿಷ್ಕ್ರಾಂತೋ ಯದುನಂದನಃ || ೧ ||**

**ಹತಂ ಚ ಯವನಂ ಶ್ರುತ್ವಾ ಜರಾಸಂಧಃ ಸುದುರ್ಮತಿಃ |**
**ಯುಯುಧೇ ರಾಮಕೃಷ್ಣಾಭ್ಯಾಂ ಸ್ವಬಲೇನ ಸಮಾವೃತಃ || ೨ ||**

**ಕೃಷ್ಣೇನ ನಿಹತಂ ಸೈನ್ಯಂ ಸರ್ವಂ ತಸ್ಯ ದುರಾತ್ಮನಃ |**
**ಸ ಪಪಾತ ಮಹೀಪೃಷ್ಠೇ ಮೂರ್ಛಿತೋ ಮಗದಾಧಿಪಃ || ೩ ||**

---

## ಇನ್ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು



೧. ಶ್ರೀ ರುದ್ರನು ಹೇಳಿದನು-ಹೀಗೆ ಶ್ರೀಕೃಷ್ಣನು ಮುಚುಕುಂದನಿಂದ ಕಾಲಯವನನನ್ನು ಕೊಲ್ಲಿಸಿ ಅವನಿಗೆ ಉತ್ಕೃಷ್ಟವಾದ ಮುಕ್ತಿಯನ್ನು ಕೊಟ್ಟು ಹೊರಟು ಹೋದನು.

೨. ಜರಾಸಂಧನು ಕಾಲಯವನನು ಸತ್ತುದನ್ನು ಕೇಳಿ ಆ ರಾಮಕೃಷ್ಣರೊಡನೆ ತನ್ನ ಬಲವನ್ನು ಸೇರಿಸಿಕೊಂಡೇ ಯುದ್ಧಮಾಡುತ್ತಿದ್ದನು.

೩. ಆ ದುಷ್ಟನಾದ ಜರಾಸಂಧನ ಸೈನ್ಯವನ್ನು ಕೃಷ್ಣನು ನಾಶ ಮಾಡಿದನು. ಆಗ ಆ ಜರಾಸಂಧನೂ ಕೂಡ ಮೂರ್ಛೆಬಂದು ನೆಲದಮೇಲೆ ಬಿದ್ದನು.

ಚಿರೇಣ ಲಬ್ಧಸಂಜ್ಞಸ್ತು ವಿಹ್ವಲಾಂಗೋ ಭಯಾತುರಃ |
ನ ಶಶಾಕ ರಣೇ ಯೋದ್ಧುಂ ರಾಮೇಣ ಮಗಧೇಶ್ವರಃ || ೪ ||

ವಿಮುಖಃ ಸ್ವಾದ್ರವತ್ತೂರ್ಣಂ ಹತಶೇಷಬಲಾನುಗಃ |
ಅಜೇಯಾವಿತಿ ತೌ ಮತ್ವಾ ರಾಮಕೃಷ್ಣೌ ಮಹಾಬಲೌ || ೫ ||

ತಯೋರ್ವಿರೋಧಂ ತ್ಯಕ್ತ್ವಾಥ ನಗರೀಂ ಸ್ವಾಂ ವಿವೇಶ ಹ |
ಅಥ ತೌ ವಸುದೇವಸ್ಯ ತನಯೌ ಸಹ ಸೇನಯಾ || ೬ ||

ಮಥುರಾಂ ತ್ಯಜ್ಯ ನಗರೀಂ ದ್ವಾರಕಾಂ ಪ್ರವಿವೇಶತುಃ |
ಇಂದ್ರೇಣ ಪ್ರೇಷಿತೋ ವಾಯುಃ ಸಭಾಂ ತತ್ರ ದಿವೌಕಸಾಂ || ೭ ||

ಕೃಷ್ಣಾಯ ಪ್ರದದೌ ಪ್ರೀತ್ಯಾ ನಿರ್ಮಿತಾಂ ವಿಶ್ವಕರ್ಮಣಾ |
ವಜ್ರವೈಡೂರ್ಯರಚಿತಾಂ ಚಂದ್ರಾಸನವಿಚಿತ್ರಿತಾಂ || ೮ ||

---

೪-೮. ಬಹುಕಾಲದಮೇಲೆ ಜ್ಞಾನಬಂದು ಖೇದಗೊಂಡು ಭಯಪಟ್ಟವನಾಗಿ ಆ ರಾಮನೊಡನೆ ಯುದ್ಧಮಾಡುವುದು ಸಾಧ್ಯವಿಲ್ಲವೆಂದು ತಿಳಿದು ಕಳಿದುಳಿದವರೊಡನೆ ಹಿಂದುರುಗಿ ಹೊರಟು ಹೋದನು. ಆ ರಾಮಕೃಷ್ಣರು ಬಹು ಬಲಿಷ್ಠರೆಂದೂ ಅವರನ್ನು ಜಯಿಸಲಾಗುವುದಿಲ್ಲವೆಂದೂ ತಿಳಿದು ಅವರೊಡನೆ ವಿರೋಧವನ್ನು ಬಿಟ್ಟು ತನ್ನ ಪಟ್ಟಣಕ್ಕೆ ಹೊರಟುಹೋದನು. ಅನಂತರ ಆ ವಸುದೇವನ ಮಕ್ಕಳಾದ ರಾಮಕೃಷ್ಣರು ಸೇನೆಯೊಡನೆ ಮಥುರೆಯನ್ನು ಬಿಟ್ಟು ದ್ವಾರಕೆಗೆ ಹೊರಟುಹೋದರು. ಇಂದ್ರನು ಈ ಕೃಷ್ಣನಿಗೆ ವಿಶ್ವಕರ್ಮನಿಂದ ನಿರ್ಮಿತವಾದ ವಿಚಿತ್ರವಾದ ಒಂದು ಸಭೆಯನ್ನು ವಾಯುವಿನ ಕೈಯ್ಯಲ್ಲಿ ಕಳುಹಿಸಿ ಕೊಟ್ಟನು. ಅದು ವಜ್ರವೈಡೂರ್ಯಗಳಿಂದ ನಿರ್ಮಿತವಾಗಿದ್ದಿತು. ಚಂದ್ರಾಸನವು ಅದರಲ್ಲಿದ್ದಿತು ಅನೇಕ ಬಗೆಯಾದ ದಿವ್ಯವಾದ ಚಿನ್ನದ ಛತ್ರಿಗಳು ಅದರಲ್ಲಿದ್ದುವು.

ನಾನಾರತ್ನಮಯೈರ್ದಿವ್ಯೈಃ ಸ್ವರ್ಣಚ್ಛತ್ರೈರ್ವಿರಾಜಿತಾಂ ।
ತಾಂ ಪ್ರಾಪ್ಯ ರಮ್ಯಾಂ ಸುಭಗಾಮುಗ್ರಸೇನಾದಯೋ ನೃಪಾಃ ॥ ೯ ॥

ಮೋದಂತೇ ನೈಗಮ್ಯೈಃ ಸಾರ್ಧಂ ದಿವಿ ದೇವಗಣಾ ಇವ ।
ಇಕ್ಷ್ವಾಕುವಂಶಸಂಭೂತೋ ರೈವತೋ ನಾಮ ಪಾರ್ಥಿವಃ ॥ ೧೦ ॥

ಕನ್ಯಾಂ ದುಹಿತರಂ ಸ್ವಸ್ಯ ಸರ್ವಲಕ್ಷಣಸಂಯುತಾಂ ।
ರಾಮಾಯ ಪ್ರದದೌ ಪ್ರೀತ್ಯಾ ರೇವತೀಂ ನಾಮ ನಾಮತಃ ॥ ೧೧ ॥

ಉಪಯೇಮೇ ವಿಧಾನೇನ ಸ ರಾಮಸ್ತಾಂ ಚ ರೇವತೀಂ ।
ರಮಯಾಮಾಸ ರೇವತ್ಯಾ ಶಚ್ಯಾ ಇವ ಸುರೇಶ್ವರಃ ॥ ೧೨ ॥

ವಿದರ್ಭರಾಜೋ ಧರ್ಮಾತ್ಮಾ ಭೀಷ್ಮಕೋ ನಾಮ ಧಾರ್ಮಿಕಃ ।
ಬಭೂವುಸ್ತಸ್ಯ ಪುತ್ರಾಸ್ತು ರುಕ್ಮಿಪ್ರಭೃತಯಶ್ಶುಭಾಃ ॥ ೧೩ ॥

---

೯-೧೧. ಆ ಉತ್ತಮವಾದ ಸಭೆಯನ್ನು ಹೊಂದಿ ಉಗ್ರಸೇನನೇ ಮುಂತಾದ ರಾಜರು ಸ್ವರ್ಗದಲ್ಲಿ ದೇವತೆಗಳು ಸುಖಿಸುವಂತೆ ವೇದವಾದಿಗಳೊಡನೆ ಸುಖಿಸುತ್ತಿದ್ದರು. ಇಕ್ಷ್ವಾಕುವಿನ ವಂಶದಲ್ಲಿ ಹುಟ್ಟಿದ ರೈವತನೆಂಬ ರಾಜನು ಸರ್ವಲಕ್ಷಣಗಳಿಂದ ಕೂಡಿದ ತನ್ನ ಮಗಳಾದ ರೇವತಿಯೆಂಬುವಳನ್ನು ರಾಮನಿಗೆ ಸಂತೋಷದಿಂದ ಮದುವೆಮಾಡಿ ಕೊಟ್ಟನು.

೧೨. ಆ ಬಲರಾಮನು ರೇವತಿಯನ್ನು ಶಾಸ್ತ್ರರೀತಿಯಿಂದ ಮದುವೆಯಾದನು. ಆ ರೇವತಿಯೊಡನೆ ಇಂದ್ರನು ಶಚಿಯೊಡನೆ ರಮಿಸುವಂತೆ ರಮಿಸಿದನು.

೧೩. ವಿದರ್ಭದೇಶಕ್ಕೆ ರಾಜನಾದ ಭೀಷ್ಮಕನೆಂಬ ಒಬ್ಬ ಧಾರ್ಮಿಕನಾದ ರಾಜನಿದ್ದನು. ಅವನಿಗೆ ರುಕ್ಮಿಯೇ ಮುಂತಾದ ಅನೇಕಜನ ಮಕ್ಕಳಿದ್ದರು.

ತೇಷಾಮವರಜಾ ಕನ್ಯಾ ರುಕ್ಮಿಣೀ ವರವರ್ಣಿನೀ ।
ಕಮಲಾಂಶೇನ ಸಂಭೂತಾ ಸರ್ವಲಕ್ಷಣಸಂಯುತಾ ॥ ೧೪ ॥

ರಾಘವತ್ವೇಽಭವತ್ಸೀತಾ ರುಕ್ಮಿಣೀ ಕೃಷ್ಣಜನ್ಮನಿ ।
ಅನ್ಯೇಷ್ವಪ್ಯವತಾರೇಷು ವಿಷ್ಣೋರೇಷಾ ಸಹಾಯಿನೀ ॥ ೧೫ ॥

ಹಿರಣ್ಯಕಹಿರಣ್ಯಾಕ್ಷೌ ಸಂಭೂತೌ ದ್ವಾಪರೇ ಪುನಃ ।
ಶಿಶುಪಾಲೋ ದಂತವಕ್ತ್ರ ಇತಿ ನಾಮ್ನಾ ಸಮನ್ವಿತೌ ॥ ೧೬ ॥

ಚೈದ್ಯಾನ್ವಯೇ ಸಮುದ್ಭೂತೌ ಮಹಾಬಲಪರಾಕ್ರಮೌ ।
ರುಕ್ಮಿಣೀಂ ಶಿಶುಪಾಲಾಯ ದಾತುಮೈಚ್ಛನ್ನೃಪಾತ್ಮಜಃ ॥ ೧೭ ॥

ತಂ ನೇಚ್ಛತಿ ಪತಿಂ ಸಾ ತು ಶಿಶುಪಾಲಂ ಶುಭಾನನಾ ।
ಬಾಲ್ಯಾತ್ಪ್ರಭೃತಿ ವೈ ವಿಷ್ಣುಮನುರಕ್ತಾ ಧೃಡವ್ರತಾ ॥ ೧೮ ॥

---

೧೪. ಆ ಮಕ್ಕಳೊಳಗೆಲ್ಲಾ ಚಿಕ್ಕವಳಾದವಳು ಒಬ್ಬಳು ಹೆಣ್ಣು ಮಗಳಿದ್ದಳು. ಅವಳ ಹೆಸರು ರುಕ್ಮಿಣಿಯು. ಆಕೆಯು ಎಲ್ಲಾ ಲಕ್ಷಣಗಳಿಂದಲೂ ಕೂಡಿದ್ದಳು. ಲಕ್ಷ್ಮಿಯ ಅಂಶದಿಂದ ಹುಟ್ಟಿದ್ದಳು.

೧೫. ರಾಘವಾವತಾರದಲ್ಲಿ ಸೀತೆಯಾಗಿಯೂ, ಕೃಷ್ಣಾವತಾರದಲ್ಲಿ ರುಕ್ಮಿಣಿಯಾಗಿಯೂ, ಇದ್ದುಕೊಂಡು ಉಳಿದ ಸ್ವಾಮಿಯ ಅವತಾರಗಳಲ್ಲಿಯೂ ಕೂಡ ಈಕೆಯು ವಿಷ್ಣುವಿಗೆ ಸಹಾಯಕಳಾಗಿದ್ದುಕೊಂಡು ಬಿಡದೆ ಇರತಕ್ಕವಳು.

೧೬–೧೮. ಆ ಜಯವಿಜಯರು ಹಿರಣ್ಯಕ ಹಿರಣ್ಯಾಕ್ಷರಾಗಿ ಹುಟ್ಟಿದ್ದರಷ್ಟೆ. ಅವರೇ ಈ ದ್ವಾಪರಯುಗದಲ್ಲಿ ಶಿಶುಪಾಲ ದಂತವಕ್ತ್ರರೆಂಬ ಹೆಸರನ್ನು ಹೊಂದಿದವನಾಗಿ ಚೈದ್ಯನ ವಂಶದಲ್ಲಿ ಹುಟ್ಟಿದರು. ಇವರು ಬಹು ಪರಾಕ್ರಮಿಗಳು. ಆ ರುಕ್ಮಿಯು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಡಬೇಕೆಂದು ಇಷ್ಟಪಟ್ಟನು. ಆ ರುಕ್ಮಿಣಿಯು ಅವನನ್ನು ಮದುವೆಮಾಡಿಕೊಳ್ಳಲು ಒಪ್ಪಲಿಲ್ಲ. ಚಿಕ್ಕಂದಿನಿಂದಲೇ ಈ ಕೃಷ್ಣನಲ್ಲಿ ಆಸಕ್ತಳಾಗಿ ಇವನನ್ನು ಮದುವೆಯಾಗಲು ದೃಢಮನಸ್ಸು ಮಾಡಿಕೊಂಡಿದ್ದಳು.

ಉದ್ದಿಶ್ಯ ಕೃಷ್ಣಂ ಭರ್ತಾರಂ ಸುರಾಣಾಮರ್ಚನಂ ಸದಾ ।
ಚಕಾರ ರುಕ್ಮಿಣೀ ಕನ್ಯಾ ದಾನಾನಿ ವಿವಿಧಾನಿ ಚ　　॥ ೧೯ ॥

ವ್ರತಚರ್ಯಾಪರಾ ಭೂತ್ವಾ ಧ್ಯಾಯಂತೀ ಪುರುಷೋತ್ತಮಂ ।
ಆತ್ಮೇಶಂ ಸ್ವಸ್ಯ ಭರ್ತಾರಮುವಾಸ ಪಿತೃಮಂದಿರೇ　　॥ ೨೦ ॥

ಕರ್ತುಂ ತು ಶಿಶುಪಾಲಾಯ ವಿವಾಹಂ ಪಾರ್ಥಿವೋತ್ತಮಃ ।
ಚಕಾರ ಯತ್ನಂ ಪುತ್ರೇಣ ರುಕ್ಮಿಣಾ ಸಹ ಧೀಮತಾ　　॥ ೨೧ ॥

ಪುರೋಹಿತಸುತಂ ವಿಪ್ರಂ ಪ್ರೇಷಯಾಮಾಸ ರುಕ್ಮಿಣೀ ।
ಉದ್ದಿಶ್ಯ ಕೃಷ್ಣಂ ಭರ್ತಾರಂ ಸ ತೂರ್ಣಂ ದ್ವಾರಕಾಂ ಯಯೌ　　॥ ೨೨ ॥

---

೧೯. ಆಕೆಯು ಕೃಷ್ಣನನ್ನೇ ಮದುವೆಯಾಗಬೇಕೆಂಬುದಾಗಿ ಯಾವಾಗಲೂ ದೇವತೆಗಳನ್ನು ಪೂಜಿಸುತ್ತಿದ್ದಳು. ಅದಕ್ಕೋಸ್ಕರವೇ ಅನೇಕ ದಾನಗಳನ್ನೂ ಕೊಡುತ್ತಿದ್ದಳು.

೨೦. ಆ ಪುರುಷೋತ್ತಮನಾದ ಕೃಷ್ಣನನ್ನೇ ಧ್ಯಾನಿಸುತ್ತಾ ವ್ರತದಲ್ಲಿ ಆಸಕ್ತಳಾಗಿ ಆ ಸ್ವಾಮಿಯೇ ತನ್ನ ಗಂಡನಾಗಬೇಕೆಂದು ಎನ್ನುತ್ತಾ ತಂದೆಯ ಮನೆಯಲ್ಲಿದ್ದಳು.

೨೧. ಆ ರಾಜನು ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆಯನ್ನು ಮಾಡಲು ಮಗನಾದ ರುಕ್ಮಿಯೊಡನೆ ಪ್ರಯತ್ನಗಳನ್ನು ಮಾಡಿದನು.

೨೨ ಆಗ ರುಕ್ಮಿಣಿಯು ಪುರೋಹಿತನ ಮಗನನ್ನು ಕೃಷ್ಣನ ಬಳಿಗೆ ಕಳುಹಿಸಿ ಕೊಟ್ಟು ಅವನೊಡನೆ ನಿನ್ನನ್ನೇ ಮದುವೆಯಾಗಬೇಕೆಂದಿಚ್ಛಿಸಿದ್ದೇನೆ. ಎಂದು ಹೇಳಿಕಳುಹಿಸಿದಳು. ಆತನು ಆ ವಿಷಯವನ್ನು ತೆಗೆದುಕೊಂಡು ದ್ವಾರಕೆಗೆ ಬೇಗನೆ ಬಂದನು

ಸಮೇತ್ಯ ಕೃಷ್ಣಂ ರಾಮಂ ಚ ತಾಭ್ಯಾಂ ವಿಧಿವದರ್ಚಿತಃ ।
ಏಕಾಂತೇ ಸರ್ವಮಾಚಷ್ಟ ರುಕ್ಮಿಣೀಭಾಷಿತಂ ತಯೋಃ ॥ ೨೩ ॥

ತಚ್ಛ್ರುತ್ವಾ ರಾಮಕೃಷ್ಣೌ ತು ತೇನ ವಿಪ್ರೇಣ ಧೀಮತಾ ।
ಸರ್ವಶಸ್ತ್ರಾಸ್ತ್ರಸಂಪೂರ್ಣಂ ರಥಮಾಕಾಶಗಂ ಪ್ರಭೂ ॥ ೨೪ ॥

ಆರುಹ್ಯ ಸೂತಮುಖ್ಯೇನ ದಾರುಕೇಣ ಮಹಾತ್ಮನಾ ।
ವಿದರ್ಭನಗರೀಂ ತೂರ್ಣಂ ಜಗ್ಮತುಃ ಪುರುಷೋತ್ತಮೌ ॥ ೨೫ ॥

ರಾಜಾನಃ ಸರ್ವರಾಷ್ಟ್ರೇಭ್ಯೋ ವಿವಾಹಂ ದ್ರಷ್ಟುಮಾಗತಾಃ ।
ಜರಾಸಂಧಮುಖಾಸ್ಸರ್ವೇ ಶಿಶುಪಾಲಸ್ಯ ಧೀಮತಃ ॥ ೨೬ ॥

ತಸ್ಮಿನ್ನುದ್ವಾಹಸಮಯೇ ರುಕ್ಮಿಣೀ ರುಕ್ಮಭೂಷಣಾ ।
ನಿಸ್ಸೃತಾರ್ಚಯಿತುಂ ದುರ್ಗಾಂ ಸಖೀಭಿರ್ನಗರಾದ್ಬಹಿಃ ॥ ೨೭ ॥

---

೨೩. ಅವನು ರಾಮನನ್ನೂ ಕೃಷ್ಣನನ್ನೂ ನೋಡಿದನು. ಅವರು ಯಥೋಚಿತವಾಗಿ ಅವನನ್ನು ಗೌರವಿಸಿದರು ಆಗ ಏಕಾಂತವಾಗಿ ರುಕ್ಮಿಣಿಯು ಹೇಳಿರುವುದನ್ನೆಲ್ಲಾ ಹೇಳಿದನು.

೨೪–೨೫. ಆ ರಾಮಕೃಷ್ಣರು ಆ ಬ್ರಾಹ್ಮಣಕುಮಾರನು ಹೇಳಿದುದನ್ನು ಕೇಳಿ ಎಲ್ಲಾ ಶಸ್ತ್ರಾಸ್ತ್ರಗಳಿಂದಲೂ ತುಂಬಿದ ಆಕಾಶದಲ್ಲಿಯೇ ಹೋಗುವ ರಥವನ್ನು ಹತ್ತಿದರು. ಸೂತರಲ್ಲಿ ಉತ್ತಮನಾದ ದಾರುಕನೇ ರಥವನ್ನು ನಡೆಸಿದನು. ಇಂತು ಹತ್ತಿ ಅವರಿಬ್ಬರೂ ಶೀಘ್ರವಾಗಿ ವಿದರ್ಭದೇಶದ ರಾಜಧಾನಿಗೆ ಹೋದರು.

೨೬. ಆ ಮದುವೆಯನ್ನು ನೋಡಲು ಎಲ್ಲಾ ದೇಶಗಳಿಂದಲೂ ಅನೇಕ ಜನ ರಾಜರು ಬಂದಿದ್ದರು. ಜರಾಸಂಧನೇ ಮುಂತಾದವರು ಆ ಶಿಶುಪಾಲನ ಮದುವೆಯನ್ನು ನೋಡಲು ಬಂದಿದ್ದರು.

೨೭ ಆ ಮದುವೆಯ ಸಮಯದಲ್ಲಿ ರುಕ್ಮಿಣಿಯು ಒಳ್ಳೆಯ ಬಟ್ಟೆಗಳನ್ನೂ ಒಡವೆಗಳನ್ನೂ ಧರಿಸಿಕೊಂಡು ದುರ್ಗಿಯನ್ನು ಪೂಜಿಸಲು ಸಖಿಯರೊಡನೆ ಊರಿನಿಂದ ಹೊರಕ್ಕೆ ದೇವಸ್ಥಾನಕ್ಕೆ ಹೋದಳು.

ತದೈವ ಸಂಧ್ಯಾಕಾಲೇ ತು ಸಂಪ್ರಾಪ್ತೋ ದೇವಕೀಸುತಃ |
ರಥಸ್ಥಾಂ ತಾಂ ಚ ಜಗ್ರಾಹ ಬಲವಾನ್ಮಧುಸೂದನಃ || ೨೮ ||

ಸಹಸಾ ರಥಮಾರೋಪ್ಯ ಯಯೌ ತೂರ್ಣಂ ಸ್ವಮಾಲಯಂ |
ತತಃ ಕ್ರೋಧಸಮಾವಿಷ್ಟಾ ಜರಾಸಂಧಮುಖಾ ನೃಪಾಃ || ೨೯ ||

ರುಕ್ಮಿಣಾ ರಾಜಪುತ್ರೇಣ ಯುದ್ಧಾಯ ಸಮುಪಸ್ಥಿತಾಃ |
ಅನುಯಾತಾ ಹರಿಂ ಕ್ರುದ್ಧಾಃ ಚತುರಂಗಬಲಾನ್ವಿತಾಃ || ೩೦ ||

ಬಲಭದ್ರೋ ಮಹಾಬಾಹುಃ ಅವರುಹ್ಯ ರಥೋತ್ತಮಾತ್ |
ಲಾಂಗಲಂ ಮುಸಲಂ ಗೃಹ್ಯ ನಿಜಘಾನ ರಣೇ ರಿಪೂನ್ || ೩೧ ||

ರಥಾನಶ್ವಾನ್ಮಹಾನಾಗಾಂಸ್ತಥಾ ಪಾದಚರಾನಪಿ |
ಲಾಂಗಲ ಮುಸಲಾಭ್ಯಾಂ ವೈ ನಿಜಘಾನ ಬಲಾದ್ರಣೇ || ೩೨ ||

---

೨೮. ಸಂಧ್ಯಾಕಾಲದಲ್ಲಿಯೇ ಬಂದಿದ್ದ ದೇವಕೀಸುತನಾದ ಕೃಷ್ಣನು ಆಕೆಯನ್ನು ಹಿಡಿದು ತನ್ನ ರಥದಲ್ಲಿ ಕೂರಿಸಿಕೊಂಡನು.

೨೯-೩೦ ಹಾಗೆ ಜಾಗ್ರತೆಯಾಗಿ ರಥದಲ್ಲಿ ಕೂರಿಸಿಕೊಂಡು ಜಾಗ್ರತೆಯಾಗಿ ತನ್ನ ಮನೆಗೆ ಕರೆದುಕೊಂಡು ಹೊರಟನು. ಅದರಿಂದ ಕೋಪಗೊಂಡ ಜರಾಸಂಧನೇ ಮುಂತಾದ ರಾಜರು ರಾಜಪುತ್ರನಾದ ರುಕ್ಮಿಯನ್ನು ಕರೆದುಕೊಂಡು ಯುದ್ಧಕ್ಕೆ ಸಿದ್ಧರಾಗಿ ಚತುರಂಗ ಸೇನೆಯನ್ನು ತೆಗೆದುಕೊಂಡು ಕೃಷ್ಣನ ಹಿಂದೆ ಹೋದರು.

೩೧. ಆಗ ಮಹಾಬಾಹುವಾದ ಬಲರಾಮನು ರಥದಿಂದ ಕೆಳಕ್ಕೆ ಇಳಿದು ಲಾಂಗಲವನ್ನೂ ಮುಸಲನ್ನೂ ತೆಗೆದುಕೊಂಡು ಯುದ್ಧದಲ್ಲಿ ಶತ್ರುಗಳನ್ನು ಹೊಡೆಯಲು ಮೊದಲುಮಾಡಿದನು.

೩೨. ರಥ, ಕುದುರೆ, ಆನೆ, ಕಾಲಾಳುಗಳೆಲ್ಲವನ್ನೂ ಆ ಲಾಂಗಲ ಮುಸಲಗಳಿಂದ ಬಹು ತೀವ್ರವಾಗಿ ಹೊಡೆದನು.

ತಸ್ಯ ಲಾಂಗಲಪಾತೇನ ಚೂರ್ಣಿತಾ ರಥಪಂಕ್ತಯಃ ।
ನಾಗಾಶ್ಚ ಪತಿತಾ ಭೂಮೌ ವಜ್ರೇಣೇವ ಮಹೀಧರಾಃ ॥ ೩೩ ॥

ಸಿಭಿರ್ನ್ನಮಸ್ತಕಾಸ್ಸರ್ವೇ ವಮಂತೋ ರುಧಿರಂ ಬಹು ।
ಕ್ಷಣೇನೈವ ಹತಂ ಸೈನ್ಯಂ ಬಲರಾಮೇಣ ವೈ ತದಾ ॥ ೩೪ ॥

ಸಾಶ್ವಂ ಸನಾಗಂ ಸರಥಂ ಸಪದಾತಿ ಮಹಾರಣೇ ।
ಸಮಂತಾತ್ಸಮರೇ ತತ್ರ ಸುಸ್ರುವುಃ ಶೋಣಿತಾಪಗಾಃ ॥ ೩೫ ॥

ಸಂಭಗ್ನಾಃ ಪಾರ್ಥಿವಾಸ್ಸರ್ವೇ ದುದ್ರುವುರ್ಭಯಪೀಡಿತಾಃ ।
ಕೃಷ್ಣೇನ ಕದನಂ ಚಕ್ರೇ ರುಕ್ಮೀ ಕ್ರೋಧವಶಾದ್ಬಲೀ ॥ ೩೬ ॥

ಧನುರುದ್ಯಮ್ಯ ಬಾಣೌಘೈಃ ತಾಡಯಾಮಾಸ ಶಾಂರ್ಗಿಣಂ ।
ತತಃ ಪ್ರಹಸ್ಯ ಗೋವಿಂದಃ ಶಾಂರ್ಗಮಾದಾಯ ಲೀಲಯಾ ॥ ೩೭ ॥

---

೩೩. ಅವನ ಲಾಂಗಲದ ಹೊಡೆತದಿಂದ ಪುಡಿಪುಡಿಯಾದ ರಥಗಳೂ ಆನೆಗಳೂ ಭೂಮಿಯಲ್ಲಿ ಬೀಳುತ್ತಿರುವುದನ್ನು ನೋಡಿದರೆ ವಜ್ರಾಯುಧದ ಏಟಿನಿಂದ ಪುಡಿಪುಡಿಯಾಗಿ ಪರ್ವತಗಳು ಬೀಳುವಂತಿದ್ದುವು.

೩೪. ಈ ರೀತಿಯಾಗಿ ಬಲರಾಮನು ಆ ಸೈನ್ಯದ ತಲೆಯನ್ನು ಒಡೆಯಲು ಅವುಗಳೆಲ್ಲವೂ ರಕ್ತವನ್ನು ಕಾರುತ್ತ ಕೆಳಗೆ ಬಿದ್ದುವು. ಈ ರೀತಿಯಾಗಿ ಬಲರಾಮನು ಕ್ಷಣಕಾಲದಲ್ಲಿಯೇ ಆ ಸೈನ್ಯವೆಲ್ಲವನ್ನೂ ನಾಶಪಡಿಸಿದನು.

೩೫. ಕುದುರೆ, ಆನೆ, ರಥ, ಕಾಲಾಳುಗಳೆಲ್ಲವೂ ಆ ಯುದ್ಧರಂಗದಲ್ಲಿ ರಕ್ತವನ್ನು ಸುರಿಸುತ್ತಾ ಎಲ್ಲಾ ಕಡೆಯಲ್ಲಿಯೂ ರಕ್ತದ ನದಿಯನ್ನೇ ಹರಿಸುತ್ತಿದ್ದುವು

೩೬. ಆ ರಾಜರೆಲ್ಲರೂ ಸೋತು ಭಯಪಟ್ಟುಕೊಂಡು ಓಡಿಹೋದರು. ರಾಜಪುತ್ರನಾದ ರುಕ್ಮಿಯು ಕೋಪಗೊಂಡು ಕೃಷ್ಣನೊಡನೆ ಯುದ್ಧಮಾಡಿದನು.

೩೭–೩೮. ಆ ರುಕ್ಮಿಯು ಕೋಪಗೊಂಡು ಧನುಸ್ಸನ್ನು ಹೆದೆಯೇರಿಸಿ ಬಾಣಗಳಿಂದ ಆ ಕೃಷ್ಣನನ್ನು ಹೊಡೆದನು. ಆಗ ಗೋವಿಂದನು ನಗುತ್ತಾ

ಜಘಾನೈಕೇನ ಬಾಣೇನ ರಥಾಶ್ವಾಂಸ್ತಸ್ಯ ಸಾರಥಿಂ ।
ರಥಂ ಧ್ವಜಪತಾಕಾಂ ಚ ಚಿಚ್ಛೇದ ಧರಣೀಧರಃ ॥ ೩೮ ॥

ವಿರಥಃ ಖಡ್ಗಮಾದಾಯ ಧರಣ್ಯಾಂ ಸ ಉಪಸ್ಥಿತಃ ।
ಕೃಷ್ಣಸ್ತು ಖಡ್ಗಂ ಚಿಚ್ಛೇದ ಬಾಣೇನೈಕೇನ ವೀರ್ಯವಾನ್ ॥ ೩೯ ॥

ತತಸ್ಸ ಮುಷ್ಟಿಮುದ್ಯಮ್ಯ ಕೃಷ್ಣಂ ವಕ್ಷಸ್ಯತಾಡಯತ್ ।
ತಂ ತು ಜಗ್ರಾಹ ವೀರ್ಯೇಣ ನಿಬಧ್ಯ ನಿಬಿಡಂ ಹರಿಃ ॥ ೪೦ ॥

ತೀಕ್ಷ್ಣಂ ಕ್ಷುರಂ ಸಮಾದಾಯ ಪ್ರಹಸನ್ ಮಧುಸೂದನಃ ।
ಶಿರಸೋ ಮುಂಡನಂ ಕೃತ್ವಾ ಮುಮೋಚ ಚ ಜನಾರ್ದನಃ ॥ ೪೧ ॥

---

ಶಾಂರ್ಗವನ್ನು ತೆಗೆದುಕೊಂಡು ಒಂದು ಬಾಣದಿಂದ ಅವನ ರಥದ ಸಾರಥಿ ಮತ್ತು ಕುದುರೆಗಳನ್ನೂ ರಥವನ್ನೂ ಧ್ವಜವನ್ನೂ ಪತಾಕೆಯನ್ನೂ ಕತ್ತರಿಸಿದನು.

೩೯. ರಥವು ನಾಶವಾದ ಮೇಲೆ ರುಕ್ಮಿಯು ಖಡ್ಗವನ್ನು ತೆಗೆದುಕೊಂಡು ಭೂಮಿಯಲ್ಲಿಯೇ ಯುದ್ಧ ಮಾಡಲು ನಿಂತನು. ಆಗ ಕೃಷ್ಣನು ಒಂದು ಬಾಣವನ್ನು ಬಿಟ್ಟು ಆ ಖಡ್ಗವನ್ನೂ ಕತ್ತರಿಸಿದನು.

೪೦. ಆಮೇಲೆ ರುಕ್ಮಿಯು ಮುಷ್ಟಿಯನ್ನು ಹಿಡಿದು ಆ ಕೃಷ್ಣನ ಎದೆಯ ಮೇಲೆ ಎತ್ತಿಹೊಡೆದನು. ಆ ಏಟನ್ನು ಕೃಷ್ಣನು ಬಲದಿಂದ ಸಹಿಸಿ ಕೊಂಡನು.

೪೧. ಅನಂತರ ಕೃಷ್ಣನು ಒಂದು ಹರಿತವಾದ ಕತ್ತಿಯನ್ನು ತೆಗೆದು ಕೊಂಡು ಆ ರುಕ್ಮಿಯ ತಲೆಯನ್ನು ಬೋಳಿಸಿದನು. ಅಂತೆಯೇ ದಯದಿಂದ ಬಿಟ್ಟುಬಿಟ್ಟನು.

ಸ ತು ಶೋಕಸಮಾವಿಷ್ಟೋ ನಿಶ್ವಸನ್ನುರಗೋ ಯಥಾ ।
ನ ವಿವೇಶ ಪುರೀಂ ಸ್ವೀಯಾಂ ಸ ತು ತತ್ರೈವ ಚಾವಸತ್ ॥ ೪೨ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ಕೃಷ್ಣಚರಿತೇ ವಿದರ್ಭಸೇನಾ ವಿಧ್ವಂಸನಂ ನಾಮ ಚತುಸ್ಸಪ್ತತ್ಯಧಿಕದ್ವಿಶತತಮೋಽಧ್ಯಾಯಃ

---

೪೨. ಆ ರುಕ್ಮಿಯು ಶೋಕದಿಂದ ಕೂಡಿಕೊಂಡು ಸರ್ಪದಂತೆ ನಿಟ್ಟುಸಿರು ಬಿಡುತ್ತಾ ತನ್ನ ಊರಿಗೇ ಹೋಗದೆ ಬೇರೆಯೊಂದು ಜಾಗದಲ್ಲಿ ವಾಸಸ್ಥಾನವನ್ನು ಮಾಡಿಕೊಂಡು ಇದ್ದುಬಿಟ್ಟನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀ ಕೃಷ್ಣ ಚರಿತ್ರೆಯಲ್ಲಿ ವಿದರ್ಭಸೇನೆಯ ವಿಧ್ವಂಸನವೆಂಬ ಇನ್ನೂರ ಎಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಪಂಚಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ॥



**॥ ರುದ್ರ ಉವಾಚ ॥**

**ಅಥ ಕೃಷ್ಣಸ್ತು ರಾಮೇಣ ರುಕ್ಮಿಣ್ಯಾ ದಾರುಕೇಣ ಚ ।**
**ದಿವ್ಯಂ ಸ್ಯಂದನಮಾರುಹ್ಯ ಯಯೌ ತೂರ್ಣಂ ಸ್ವಮಾಲಯಂ ॥ ೧ ॥**

**ತತಃ ಪ್ರವಿಶ್ಯ ನಗರೀಂ ದ್ವಾರಕಾಂ ದೇವಕೀಸುತಃ ।**
**ಶುಭೇಹ್ನಿ ಶುಭಲಗ್ನೇ ವೈ ವೇದೋಕ್ತವಿಧಿನಾ ಹರಿಃ ॥ ೨ ॥**

**ಉಪಯೇಮೇ ನೃಪಸುತಾಂ ರುಕ್ಮಿಣೀಂ ರುಕ್ಮಭೂಷಿತಾಂ ।**
**ತಸ್ಮಿನ್ನುದ್ವಾಹಸಮಯೇ ದೇವದುಂದುಭಯೋ ದಿವಿ ॥ ೩ ॥**

---

### ಇನ್ನೂರ ಎಪ್ಪತ್ತೈದನೆಯ ಅಧ್ಯಾಯವು



೧. ರುದ್ರನು ಹೇಳಿದನು–ಅನಂತರ ಕೃಷ್ಣನು ರಾಮರುಕ್ಮಿಣಿದಾರಕರೊಡನೆ ಆ ದಿವ್ಯವಾದ ರಥವನ್ನು ಹತ್ತಿಕೊಂಡು ತನ್ನ ಪಟ್ಟಣಕ್ಕೆ ಹೋದನು.

೨–೩. ಊರಿಗೆ ಹೋದಮೇಲೆ ದೇವಕೀನಂದನನಾದ ಕೃಷ್ಣನು ಶುಭದಿಸವದಲ್ಲಿ ಶುಭಲಗ್ನವನ್ನು ನೋಡಿ ಆ ದಿನವೇ ವೇದೋಕ್ತವಾದ ರೀತಿಯಿಂದ ಆ ರುಕ್ಷಿಣಿಯನ್ನು ಮದುವೆಯಾದನು. ಆ ಮದುವೆಯ ಕಾಲದಲ್ಲಿ ಅಂತರಿಕ್ಷದಲ್ಲಿ

ವಿನೇದುಃ ಪುಷ್ಪವರ್ಷಾಣಿ ವವೃಷುಃ ಸುರಸತ್ತಮಾಃ ।
ವಸುದೇವೋಗ್ರಸೇನಶ್ಚ ತಥಾಕ್ರೂರೋ ಯದೂತ್ತಮಃ ॥ ೪ ॥

ಬಲಭದ್ರೋ ಮಹಾತೇಜಾಃ ಯೇ ಚಾನ್ಯೇ ಯದುಪುಂಗವಾಃ ।
ಚಕ್ರುಃ ಕೃಷ್ಣಸ್ಯ ರುಕ್ಮಿಣ್ಯಾ ವಿವಾಹಂ ಸುಸುಖಂ ಯಥಾ ॥ ೫ ॥

ನಂದಗೋಪೋಥ ಗೋಪಾಲೈರ್ಗೋಪವೃಂದೈಃ ಸಮಾಗತಃ ।
ಸ್ವಲಂಕೃತಾಭಿರ್ಯೋಷಿದ್ಭಿಃ ಯಶೋದಾ ಚ ಸಮಾಗತಾ ॥ ೬ ॥

ವಸುದೇವಸ್ತ್ರಿಯಸ್ಸರ್ವಾ ದೇವಕೀಪ್ರಮುಖಾಸ್ತಥಾ ।
ರೇವತೀ ರೋಹಿಣೀ ದೇವಿ ಯಾಶ್ಚಾನ್ಯಾಃ ಪುರಯೋಷಿತಃ ॥ ೭ ॥

ಸರ್ವಾಣ್ಯುದ್ವಾಹಕರ್ಮಾಣಿ ಚಕ್ರುರ್ಹರ್ಷಸಮನ್ವಿತಾಃ ।
ಸುರಾಣಾಮರ್ಚನಂ ಪ್ರೀತ್ಯಾ ಕರ್ತವ್ಯಂ ತತ್ರ ದೇವಕೀ ॥ ೮ ॥

---

ದೇವದುಂದುಭಿಗಳು ಮೊಳಗಿದುವು. ಅಂತರಿಕ್ಷದಿಂದ ದೇವತೆಗಳು ಹೂಮಳೆಯನ್ನೂ ಸುರಿಸಿದರು. ವಸುದೇವ, ಉಗ್ರಸೇನ, ಅಕ್ರೂರ, ಬಲಭದ್ರ ಮತ್ತು ಉಳಿದ ಯದುಪುಂಗವರು ಕೃಷ್ಣನಿಗೂ ರುಕ್ಮಿಣಿಗೂ ವಿವಾಹವನ್ನು ಸುಖವಾಗಿ ನೆರವೇರಿಸಿದರು.

೬. ನಂದಗೋಪನೂ ಗೋಪಾಲರೊಡನೆ ಆಗ ಬಂದನು. ಯಶೋದೆಯೂ ಕೂಡ ಅಲಂಕಾರಹೊಂದಿದ ಗೋಪಸ್ತ್ರೀಯರೊಡನೆ ಬಂದಳು.

೭-೯. ದೇವಕಿಯೇ ಮುಂತಾದ ಹೆಂಗಸರೂ ರೇವತಿರೋಹಿಣಿಯರೂ ಇನ್ನೂ ಆ ಊರಿನ ಹೆಂಗಸರೂ ವಸುದೇವನೂ ಆ ಮದುವೆಯನ್ನು ಬಹು ಹರ್ಷದಿಂದ ಮಾಡಿದರು. ಈ ವಿವಾಹದಲ್ಲಿ ದೇವತೆಗಳ ಪೂಜೆಯನ್ನು ಪ್ರೀತಿಯಿಂದ ಮಾಡಬೇಕು. ಅದನ್ನು ದೇವಕಿಯೇ ವೃದ್ಧರಾದ ಮುತ್ತೈದೆಯರನ್ನು

ವೃದ್ಧಾಭಿರ್ನೃಪಯೋಷಿದ್ಭಿಶ್ಚಕಾರ ವಿಧಿನಾ ತದಾ ।
ಸರ್ವಮೌದ್ವಾಹಿಕಂ ಕರ್ಮ ಹ್ಯುತ್ಸವಂ ಹಿ ದ್ವಿಜೋತ್ತಮಾಃ ॥ ೯ ॥

ಬ್ರಾಹ್ಮಣಾನ್ ಭೋಜಯಾಮಾಸ ವಸ್ತ್ರೈರಾಭರಣೈಶ್ಶುಭೈಃ ।
ಉಗ್ರಸೇನಾದಯಸ್ತತ್ರ ರಾಜಾನಶ್ಚ ಸುಪೂಜಿತಾಃ ॥ ೧೦ ॥

ನಂದಗೋಪಾದಯೋ ಗೋಪಾ ಯಶೋದಾದ್ಯಶ್ಚ ಯೋಷಿತಃ ।
ಬಹುಭಿಸ್ಸ್ವರ್ಣರತ್ನಾದ್ಯೈರ್ವಾಸೋಭಿಃ ಸವಿಭೂಷಣೈಃ ॥ ೧೧ ॥

ಪೂಜಿತಾಸ್ಸಂಪ್ರಹೃಷ್ಟಾಸ್ತೇ ತದ್ವಿವಾಹಮಹೋತ್ಸವೇ ।
ತೌ ದಂಪತೀ ಸಮಾಶ್ಲಿಶ್ಯ ಪ್ರಣತೌ ಜಾತವೇದಸಂ ॥ ೧೨ ॥

ವೇದವಿದ್ಭಿರ್ವಿಪ್ರಮುಖ್ಯೈರಾಶೀರ್ಭಿರಭಿನಂದಿತೌ ।
ತಸ್ಯಾಂ ವಿವಾಹವೇದ್ಯಾಂ ತು ಶುಶುಭಾತೇ ವಧೂವರೌ ॥ ೧೩ ॥

---

ಸೇರಿಕೊಂಡು ವಿಜೃಂಭಣೆಯಿಂದ ಮಾಡಿದಳು. ಈ ವಿವಾಹ ಕರ್ಮವೆಲ್ಲವೂ ಬಹು ವಿಜೃಂಭಣೆಯಿಂದಲೇ ನಡೆಯಿತು.

೧೦-೧೩. ಬ್ರಾಹ್ಮಣರಿಗೆ ಬಹುವಾಗಿ ಭೋಜನಮಾಡಿಸಿ ವಸ್ತ್ರ ಒಡವೆಗಳನ್ನು ಬಹುವಾಗಿ ಕೊಟ್ಟನು. ಉಗ್ರಸೇನನೇ ಮುಂತಾದ ರಾಜರನ್ನೂ ಯೋಗ್ಯತೆಗೆ ತಕ್ಕಂತೆ ಪೂಜಿಸಿ ಗೌರವಿಸಿದನು. ನಂದಗೋಪನೇ ಮುಂತಾದ ಗೋಪರನ್ನೂ ಯಶೋದೆಯೇ ಮುಂತಾದ ಗೋಪಿಯರನ್ನೂ ಬಹು ವಿಧವಾದ ವಸ್ತ್ರಾಭರಣಗಳಿಂದ ತೃಪ್ತಿಪಡಿಸಿದನು. ಅವರೆಲ್ಲರೂ ಆ ಮದುವೆಯಲ್ಲಿ ಬಹುವಾಗಿ ಸಂತೋಷಗೊಂಡರು. ಆ ದಂಪತಿಗಳು ಒಬ್ಬರನ್ನು ಒಬ್ಬರು ಹಿಡಿದುಕೊಂಡು ಅಗ್ನಿದೇವನಿಗೆ ನಮಸ್ಕರಿಸಿದರು. ವೇದವನ್ನು ಬಲ್ಲ ಬ್ರಾಹ್ಮಣ ಶ್ರೇಷ್ಠರು ಆಶೀರ್ವಾದವನ್ನು ಮಾಡಿದರು. ಈ ರೀತಿಯಾಗಿ ಆ ವಿವಾಹ ವೇದಿಕೆಯಲ್ಲಿ ವಧೂವರರು ಪ್ರಕಾಶಿಸಿದರು.

ಬ್ರಾಹ್ಮಣೇಭ್ಯೋಽಥ ವೃದ್ಧೇಭ್ಯಃ ರಾಜಭ್ಯಃ ಸಹ ಭಾರ್ಯಯಾ ।
ವವಂದೇ ದೇವಕೀಪುತ್ರೋ ಜ್ಯೇಷ್ಠಸ್ಯ ಭ್ರಾತುರೇವ ಚ ॥ ೧೪ ॥

ಏವಮೌದ್ವಾಹಿಕಂ ಸರ್ವಂ ನಿರ್ವರ್ತ್ಯ ಮಧುಸೂದನಃ ।
ವಿಸಸರ್ಜ ನೃಪಾನ್ ಸರ್ವಾನ್ ಪ್ರೀತ್ಯಾ ತತ್ರ ಸಮಾಗತಾನ್ ॥ ೧೫ ॥

ಪ್ರಸ್ಥಿತಾ ಹರಿಣಾ ತತ್ರ ಪೂಜಿತಾ ನೃಪಪುಂಗವಾಃ ।
ಬ್ರಾಹ್ಮಣಾಶ್ಚ ಮಹಾತ್ಮಾನೋ ನಿರ್ಯಯುಃ ಸ್ವಂ ಸ್ವಮಾಲಯಂ ॥ ೧೬ ॥

ರುಕ್ಮಿಣ್ಯಾ ಸಹ ಧರ್ಮಾತ್ಮಾ ದೇವಕೀನಂದನೋಽವ್ಯಯಃ ।
ಉವಾಸ ಸುಸುಖೇನೈವ ದಿವ್ಯಹರ್ಮ್ಯತಲೇ ಶುಭೇ ॥ ೧೭ ॥

ತಯಾ ವೈ ರಮಯಾಮಾಸ ನಾರಾಯಣ ಇವ ಶ್ರಿಯಾ ।
ಸಂಸ್ತೂಯಮಾನೋ ಮುನಿಭಿಃ ದಿವಿ ದೇವಗಣೈರಪಿ ॥ ೧೮ ॥

---

೧೪. ಆಗ ಆ ಕೃಷ್ಣನು ಹೆಂಡತಿಯೊಡನೆ ವೃದ್ಧರಾದ ಬ್ರಾಹ್ಮಣರಿಗೂ ಮುದುಕರಾದ ರಾಜರಿಗೂ ಅಣ್ಣನಿಗೂ ನಮಸ್ಕರಿಸಿದನು

೧೫. ಶ್ರೀಕೃಷ್ಣನು ಹೀಗೆ ಮದುವೆಯ ಕೆಲಸವನ್ನು ಪೂರ್ತಿಮಾಡಿ ಅಲ್ಲಿಗೆ ಬಂದಿದ್ದ ರಾಜರನ್ನು ಪ್ರೀತಿಯಿಂದ ಗೌರವಿಸಿ ಕಳುಹಿಸಿಕೊಟ್ಟನು.

೧೬. ಹರಿಯಿಂದ ಗೌರವವನ್ನು ಹೊಂದಿದ ಆ ರಾಜರೆಲ್ಲರೂ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು. ಬ್ರಾಹ್ಮಣರೂ ಕೂಡ ತಮ್ಮ ತಮ್ಮ ಸ್ಥಳಗಳಿಗೆ ಹೊರಟುಹೋದರು.

೧೭. ಧರ್ಮಾತ್ಮನಾದ ಆ ಶ್ರೀಕೃಷ್ಣನು ರುಕ್ಮಿಣಿಯೊಡನೆ ಆ ಉತ್ತಮವಾದ ಮಹಡಿಮನೆಗಳಲ್ಲಿ ಸುಖವಾಗಿ ಕಾಲಕಳೆಯುತ್ತಾ ವಾಸಿಸುತ್ತಿದ್ದನು.

೧೮. ಮುನಿಗಳಿಂದ ಹೊಗಳಲ್ಪಡುತ್ತಾ ಅಂತರಿಕ್ಷದಲ್ಲಿ ದೇವತೆಗಳಿಂದ ಬಹಳ ಭಕ್ತಿಯಿಂದ ಹೊಗಳಲ್ಪಡುತ್ತಾ ಆ ವಾಸುದೇವನು ತನ್ನ ಹೆಂಡತಿಯಾದ ರುಕ್ಮಿಣಿಯೊಡನೆ ಶ್ರೀಮನ್ನಾರಾಯಣನು ವೈಕುಂಠದಲ್ಲಿ ಶ್ರೀಮನ್ಮಹಾಲಕ್ಷ್ಮಿಯಲ್ಲಿ ರಮಿಸುವಂತೆ ದ್ವಾರಕೆಯಲ್ಲಿ ರಮಿಸುತ್ತಿದ್ದನು.

**ಅಹನ್ಯಹನಿ ತುಷ್ಟಾತ್ಮಾ ಸುಖೇನೈವ ಜನಾರ್ದನಃ ।**
**ಅಥೋವಾಸ ಸುಶೋಭಾಯಾಂ ದ್ವಾರವತ್ಯಾಂ ಸನಾತನಃ ॥ ೧೯ ॥**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ಕೃಷ್ಣ ಚರಿತೇ ರುಕ್ಮಿಣೀ ವಿವಾಹ ಕಥನಂ ನಾಮ ಪಂಚಸಪ್ತತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೧೯. ಆ ಜನಾರ್ದನನು ಪ್ರತಿದಿನವೂ ಸಂತೋಷದಿಂದಲೇ ಇರುತ್ತಾ ಸುಖವಾಗಿ ಆ ರಮ್ಯವಾದ ದ್ವಾರವತಿಯಲ್ಲಿ ಇರುತ್ತಿದ್ದನು.

ಇಂತು ಶ್ರೀ ಪದ್ಮ ಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀ ಕೃಷ್ಣಚರಿತ್ರೆಯಲ್ಲಿ ರುಕ್ಮಿಣೀ ವಿವಾಹ ಕಥನವೆಂಬ ಇನ್ನೂರ ಎಪ್ಪತ್ತೈದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

–X–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಷಟ್‌ಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ||



|| ಶ್ರೀ ರುದ್ರ ಉವಾಚ ||

**ಸತ್ರಾಜಿತಸ್ಯ ತನಯಾ ನಾಮ್ನಾ ಸತ್ಯಾ ಯಶಸ್ವಿನೀ |**
**ಪೃಥಿವ್ಯಂಶೇನ ಸಂಭೂತಾ ಭಾರ್ಯಾ ಕೃಷ್ಣಸ್ಯ ಚಾಪರಾ || ೧ ||**

**ವೈವಸ್ವತೀ ಮಹಾಭಾಗಾ ಕಾಳಿಂದೀ ನಾಮ ನಾಮತಃ |**
**ತೃತೀಯಾ ತಸ್ಯ ಭಾರ್ಯಾ ಸಾ ಲೀಲಾಂಶೇನ ಸಮುತ್ಥಿತಾ || ೨ ||**

**ವಿಂದಾನುವಿಂದಸ್ಯ ಸುತಾಂ ಮಿತ್ರವಿಂದಾಂ ಶುಚಿಸ್ಮಿತಾಂ |**
**ಸ್ವಯಂವರಸ್ಥಿತಾಂ ಕನ್ಯಾಮುಪಯೇಮೇ ಜನಾರ್ದನಃ || ೩ ||**

---

### ಇನ್ನೂರ ಎಪ್ಪತ್ತಾರನೆಯ ಅಧ್ಯಾಯವು



೧. ಶ್ರೀರುದ್ರನು ಹೇಳಿದನು–ಸತ್ರಾಜಿತನೆಂಬವನ ಮಗಳಾದ ಸತ್ಯೆಯೆಂಬುವಳಿದ್ದಳು. ಆಕೆಯು ಭೂಮಿಯ ಅಂಶದಿಂದ ಹುಟ್ಟಿದವಳು. ಈಕೆಯು ಕೃಷ್ಣನ ಮತ್ತೊಬ್ಬ ಹೆಂಡತಿಯು.

೨. ವಿವಸ್ವತನ ಮಗಳಾದ ಕಾಳಿಂದೀ ಎಂಬುವಳು ಆ ಕೃಷ್ಣನ ಮೂರನೆಯ ಹೆಂಡತಿಯು. ಆಕೆಯು ಲೀಲೆ (ಲಕ್ಷ್ಮಿ)ಯ ಅಂಶದಿಂದ ಹುಟ್ಟಿದವಳು.

೩. ವಿಂದಾನುವಿಂದನ ಮಗಳಾದ ಮಿತ್ರವಿಂದೆಯೆಂಬುವಳೊಬ್ಬಳಿದ್ದಳು. ಅವಳನ್ನು ಸ್ವಯಂವರದಲ್ಲಿ ಜನಾರ್ದನನು ಮದುವೆಯಾದನು.

ಪಾಶೇನೈಕೇನ ಬಧ್ವಾ ತಾನ್ ವೃಷಭಾನ್ ಸಪ್ತ ದುರ್ದವಾನ್ ।
ವೀರ್ಯವಾನ್ ಸತ್ಯಾಂ ಜಗ್ರಾಹ ಪದ್ಮಪತ್ರಾಯತೇಕ್ಷಣಃ ॥ ೪ ॥

ಸತ್ರಾಜಿತೋ ಮಹಾರತ್ನಂ ಸ್ಯಮಂತಾಖ್ಯಂ ಮಹೀಪತಿಃ ।
ಅನುಜಾಯ ದದೌ ಸೋಽಯಂ ಪ್ರಸೇನಾಯ ಮಹಾತ್ಮನೇ ॥ ೫ ॥

ಯಯಾಚೇ ತಂ ಮಣಿವರಂ ಕದಾಚಿನ್ಮಧುಸೂದನಃ ।
ಉವಾಚ ವಾಸುದೇವಂ ತಂ ಪ್ರಸೇನಃ ಪ್ರಸಭಂ ತದಾ ॥ ೬ ॥

॥ ಪ್ರಸೇನ ಉವಾಚ ॥

ಭಾರಾನಷ್ಟ ಸುವರ್ಣಾನಿ ನಿತ್ಯಂ ಪ್ರಸ್ರವತೇ ಮಣಿಃ ।
ತಸ್ಮಾತ್ಕಸ್ಯ ನ ದಾತವ್ಯಂ ಸ್ಯಮಂತಾಖ್ಯಮಿದಂ ಮಯಾ ॥ ೭ ॥

---

೪. ಬಹುಬಲಶಾಲಿಗಳೂ ಕ್ರೂರವಾದುವುಗಳೂ ಆದ ಏಳುಹೋರಿಗಳನ್ನು ಒಂದೇ ಹಗ್ಗದಲ್ಲಿ ಕಟ್ಟಿ ಈ ಕೃಷ್ಣನು ತನ್ನ ಪರಾಕ್ರಮವನ್ನು ತೋರಿಸಿದುದರಿಂದ ಆ ಸತ್ಯೆಯನ್ನು ಮದುವೆಯಾದನು.

೫–೬. ಸತ್ರಾಜಿತನು ಸ್ಯಮಂತಕವೆಂಬ ರತ್ನವನ್ನು ಸೂರ್ಯನಿಂದ ಸಂಪಾದಿಸಿಕೊಂಡಿದ್ದನು. ಅದನ್ನು ತಮ್ಮನಾದ ಪ್ರಸೇನನಿಗೆ ಕೊಟ್ಟಿದ್ದನು. ಆ ಮಣಿಯನ್ನು ಕೃಷ್ಣನು ಕೊಡೆಂದು ಒಂದುಸಾರಿ ಕೇಳಿದ್ದನು. ಆಗ ಆ ಪ್ರಸೇನನು ಗರ್ವದಿಂದ ಅವನನ್ನು ಕುರಿತು ಇಂತೆಂದನು.

೭. ಪ್ರಸೇನನು ಹೇಳಿದನು–ಈ ಮಣಿಯು ಎಂಟುಮಣ ಚಿನ್ನವನ್ನು ಪ್ರತಿದಿನವೂ ಸ್ರವಿಸುವುದು. ಆದ್ದರಿಂದ ನಾನು ಇದನ್ನು ಯಾರಿಗೂ ಕೊಡುವುದಿಲ್ಲ.

|| ಮಹಾದೇವ ಉವಾಚ ||

ಕೃಷ್ಣಸ್ತು ತದಭಿಪ್ರಾಯಂ ಜ್ಞಾತ್ವಾ ತೂಷ್ಣೀಮುವಾಸ ಹ ।
ಕದಾಚಿನ್ಮೃಗಯಾಂ ಕರ್ತುಂ ಕೃಷ್ಣಸ್ಸರ್ವೈರ್ಯದೂತ್ತಮೈಃ || ೮ ||

ಪ್ರವಿವೇಶ ಮಹಾರಣ್ಯಂ ಪ್ರಸೇನಾದ್ಯೈರ್ಮಹಾಬಲೈಃ ।
ಪ್ರತ್ಯೇಕಂ ವೈ ಮೃಗಾನ್ ಹಂತುಮನುಯಾತಾಃ ಸಹಸ್ರಶಃ || ೯ ||

ಏಕ ಏವ ಮಹಾರಣ್ಯೇ ಪ್ರಸೇನೋ ದೂರಮಾಗತಃ ।
ತಂ ಸಿಂಹೋ ದುಷ್ಟಮಾಸಾಧ್ಯ ಹತ್ವಾ ರತ್ನಂ ಜಹಾರ ಸಃ || ೧೦ ||

ತಂ ಸಿಂಹಂ ಜಾಂಬವಾನ್ ಹತ್ವಾ ಮಣಿಂ ಗೃಹ್ಯ ಮಹಾಬಲಃ ।
ಪ್ರವಿವೇಶ ಬಿಲಂ ತೂರ್ಣಂ ದಿವ್ಯಸ್ತ್ರೀಭಿರ್ನಿಷೇವಿತಂ || ೧೧ ||

ತಸ್ಮಿನ್ನಸ್ತಂ ಗತೇ ಸೂರ್ಯೇ ವಾಸುದೇವಃ ಸಹಾನುಗಃ ।
ಚತುರ್ಥ್ಯಾಮುದಿತಂ ಚಂದ್ರಂ ದೃಷ್ಟ್ವಾ ಸ್ವಂ ಪುರಮಾವಿಶತ್ || ೧೨ ||

---

೮–೧೦. ಮಹಾದೇವನು ಹೇಳಿದನು-ಕೃಷ್ಣನು ಆ ಪ್ರಸೇನನ ಅಭಿಪ್ರಾಯವನ್ನು ತಿಳಿದುಕೊಂಡು ಮತ್ತೆ ಕೇಳದೆ ಸುಮ್ಮನಾದನು. ಒಂದು ಸಾರಿ ಕೃಷ್ಣನು ಬೇಟೆಯಾಡಲು ಯಾದವರನ್ನು ಕರೆದುಕೊಂಡು ದೊಡ್ಡ ಅರಣ್ಯಕ್ಕೆ ಹೋದನು. ಆಗ ಮಹಾ ಬಲಿಷ್ಠನಾದ ಪ್ರಸೇನನೂ ಅವನ ಜೊತೆಯಲ್ಲಿ ಹೋಗಿದ್ದನು. ಒಬ್ಬೊಬ್ಬರೂ ಬೇರೆಬೇರೆಯಾಗಿ ಮೃಗಗಳನ್ನು ಕೊಲ್ಲಲು ಹೋದರು. ಈ ಪ್ರಸೇನನು ಒಬ್ಬಂಟಿಗನಾಗಿಯೇ ಮೃಗಗಳನ್ನು ಕೊಲ್ಲುವುದಕ್ಕೆ ಆ ದೊಡ್ಡ ಕಾಡಿನಲ್ಲಿ ಬಹುದೂರಕ್ಕೆ ಹೋದನು. ಆ ಪ್ರಸೇನನನ್ನು ಒಂದು ಸಿಂಹವು ಕೊಂದು ಅವನಲ್ಲಿದ್ದ ಮಣಿಯನ್ನು ಕದ್ದುಕೊಂಡು ಹೋಯಿತು.

೧೧. ಆ ಸಿಂಹವನ್ನು ಜಾಂಬವಂತನು ಕೊಂದು ಮಣಿಯನ್ನು ತೆಗೆದುಕೊಂಡು ತನ್ನ ದಿವ್ಯ ಸ್ತ್ರೀಯರಿರುವ ಒಂದು ಗುಹೆಯನ್ನು ಹೊಕ್ಕಿತು.

೧೨. ಆಗ ಸೂರ್ಯನು ಮುಳುಗಲು ಕೃಷ್ಣನು ಚಂದ್ರನನ್ನು ನೋಡಿದನು. ಆ ದಿನ ಚತುರ್ಥಿಯಾಗಿದ್ದಿತು. ಆನಂತರ ತನ್ನ ಜೊತೆಯವರೊಡನೆ ಪಟ್ಟಣಕ್ಕೆ ಬಂದನು.

ತತಃ ಸರ್ವೇ ಪುರಜನಾಃ ಕೃಷ್ಣಂ ಪ್ರೋಚುಃ ಪರಸ್ಪರಂ ।
ಹತ್ವಾ ಪ್ರಸೇನಂ ಗೋವಿಂದಃ ಆಗಮದ್ದ್ವಾರಕಾಂ ವನೇ ॥ ೧೩ ॥

ಸ್ಯಮಂತಕಂ ಮಣಿವರಮುಗ್ರಹ್ಣಾದವಿಶಂಕಯಾ ।
ತದಾಕರ್ಣ್ಯ ಹರಿಸ್ತತ್ರ ದ್ವಾರಕಾಜನಭಾಷಿತಂ ॥ ೧೪ ॥

ಅಜ್ಞಲೋಕಭಯಾತ್ಸರ್ವೈರ್ಯದುಭಿರ್ಗಹನಂ ಯಯೌ ।
ದರ್ಶಯಾಮಾಸ ತಾನ್ ಸರ್ವಾನ್ ಸಿಂಹೇನ ನಿಹತಂ ವನೇ ॥ ೧೫ ॥

ಲಬ್ಧಾತ್ಮಶುದ್ಧಿಸ್ತತ್ರೈವ ಸಂಸ್ಥಾಪ್ಯ ಮಹತೀಂ ಚಮೂಂ ।
ಏಕಃ ಶಾಂರ್ಗಗದಾಪಾಣಿರ್ಜಗಾಮ ಗಹನಂ ವನಂ ॥ ೧೬ ॥

ದೃಷ್ಟ್ವಾ ಮಹಾಬಿಲಂ ಕೃಷ್ಣಃ ಪ್ರವಿವೇಶಾವಿಶಂಕಿತಃ ।
ತತ್ರ ನಾನಾಮಣಿವರದ್ಯೋತಿತೇ ವಿಮಲೇ ಗೃಹೇ ॥ ೧೭ ॥

---

೧೩–೧೬. ಆಗ ದ್ವಾರಕೆಯ ಜನಗಳು ಒಬ್ಬರಿಗೊಬ್ಬರು ಕೃಷ್ಣನ ವಿಷಯದಲ್ಲಿ ಹೀಗೆ ಮಾತಾಡಿಕೊಳ್ಳುತ್ತಿದ್ದರು. "ಗೋವಿಂದನು ಪ್ರಸೇನನನ್ನು ಕಾಡಿನಲ್ಲಿ ಕೊಂದು ದ್ವಾರಕೆಗೆ ಬಂದನು. ಅವನಲ್ಲಿದ್ದ ಸ್ಯಮಂತಕ ಮಣಿಯನ್ನು ಲಜ್ಜೆ ಪಡದೆ ಕದ್ದಿರುವನು." ಆ ಹರಿಯು ಜನಗಳು ಆಡಿಕೊಳ್ಳುತ್ತಿದ್ದುದನ್ನು ಕೇಳಿ ದಡ್ಡರು ಆಡುವ ಮಾತಿಗೆ ಹೆದರಿ ಆ ಯದುಗಳೆಲ್ಲರನ್ನೂ ಕರೆದುಕೊಂಡು ಆ ದೊಡ್ಡ ವನಕ್ಕೆ ಹೋದನು. ಅಲ್ಲಿ ಸಿಂಹವು ಆ ಪ್ರಸೇನನನ್ನು ಕೊಂದಿರುವುದನ್ನು ಅವರೆಲ್ಲರಿಗೂ ತೋರಿಸಿದನು. ಇದರಿಂದ ತಾನು ಕೊಂದಿಲ್ಲವೆಂದೂ ಮಣಿಗೆ ಆಸೆಪಟ್ಟಿಲ್ಲವೆಂದೂ ವ್ಯಕ್ತವಾದುದರಿಂದ ಆತ್ಮಶುದ್ಧಿಯನ್ನು ಹೊಂದಿದನು. ಅನಂತರ ಮುಂದೇನಾಯಿತೆಂದು ತಿಳಿಯಲು ಧನುಸ್ಸನ್ನೂ ಗದೆಯನ್ನೂ ತೆಗೆದುಕೊಂಡು ಸೇನೆಯೆಲ್ಲವನ್ನೂ ಹಿಂದೆಯೇ ಬಿಟ್ಟು ಆ ಮಹಾರಣ್ಯದಲ್ಲಿ ಮುಂದಕ್ಕೆ ಹೋದನು.

೧೭–೧೮. ಅಲ್ಲಿ ಬಂದು ದೊಡ್ಡ ಬಿಲವನ್ನು ಕೃಷ್ಣನು ನೋಡಿದನು. ಸ್ವಲ್ಪವೂ ಕೂಡ ಹೆದರದೆ ಅದರೊಳಕ್ಕೆ ನುಗ್ಗಿದನು. ಅಲ್ಲಿ ಒಂದು ಮನೆಯಿದ್ದಿತು ಅದರಲ್ಲಿ ಅನೇಕವಾಗಿ ರತ್ನಗಳಿದ್ದುದರಿಂದ ಪ್ರಕಾಶಮಾನವಾಗಿದ್ದಿತು. ಅಲ್ಲಿ

**ಸುತಂ ಜಾಂಬವತೋ ಧಾತ್ರೀ ಡೋಲಾಮಾರೋಪ್ಯ ಲೀಲಯಾ ।**
**ಡೋಲಾಮುಖೇ ಮಣಿಂ ಧೃತ್ವಾ ದೋಲಯಂ ಗಾಯತೀ ಮುದಾ ॥೧೮॥**

**ಸಿಂಹಃ ಪ್ರಸೇನಮವಧೀತ್ಸಿಂಹೋ ಜಾಂಬವತಾ ಹತಃ ।**
**ಸುಕುಮಾರಕ ಮಾರೋದೀಸ್ತವ ಹ್ಯೇಷ ಸ್ಯಮಂತಕಃ ॥ ೧೯ ॥**

**ತಚ್ಛ್ರುತ್ವಾ ವಾಸುದೇವೋಥ ಶಂಖಂ ದಧ್ಮೌ ಪ್ರತಾಪವಾನ್ ।**
**ತೇನ ನಾದೇನ ಮಹತಾ ನಿರ್ಜಗಾಮಾಥ ಜಾಂಬವಾನ್ ॥ ೨೦ ॥**

**ತಯೋರ್ಯುದ್ಧಮಭೂದ್ಘೋರಂ ದಶರಾತ್ರಂ ನಿರಂತರಂ ।**
**ಮುಷ್ಟಿಭಿರ್ವಜ್ರಕಲ್ಪೈಶ್ಚ ಸರ್ವಭೂತಭಯಾವಹಂ ॥ ೨೧ ॥**

**ಕೃಷ್ಣಸ್ಯ ಬಲವೃದ್ಧಿಂ ಚ ತಥಾತ್ಮಬಲಸಂಕ್ಷಯಂ ।**
**ಅವೇಕ್ಷ್ಯ ಪೂರ್ವವಚನಂ ಬುಬುಧೇ ಪರಮಾತ್ಮನಃ ॥ ೨೨ ॥**

---

ಒಂದು ತೊಟ್ಟಿಲನ್ನು ಕಟ್ಟಿ ಒಬ್ಬ ದಾದಿಯು ಜಾಂಬವಂತನ ಮಗನನ್ನು ತೂಗುತ್ತಿದ್ದಳು. ಆ ತೊಟ್ಟಿಲಿನ ಮೇಲೆ ಒಂದು ಮಣಿಯನ್ನಿಟ್ಟು ಒಂದು ಹಾಡನ್ನು ಹಾಡುತ್ತಾ ತೂಗುತ್ತಿದ್ದಳು.

೧೯. ಸಿಂಹವು ಪ್ರಸೇನನನ್ನು ಕೊಂದಿತು. ಆ ಸಿಂಹವನ್ನು ಜಾಂಬವಂತನು ಕೊಂದನು. ಅಲ್ಲಿದ್ದ ಈ ಮಣಿಯನ್ನು ತಂದಿದ್ದಾನೆ. ಎಲೈ ಸುಕುಮಾರನೆ! ಅಳಬೇಡ. ಈ ಸ್ಯಮಂತಕರತ್ನವು ನಿನ್ನದೇ.

೨೦. ಆ ಹಾಡನ್ನು ವಾಸುದೇವನು ಕೇಳಿ ತನ್ನಲ್ಲಿದ್ದ ಶಂಖವನ್ನು ಬಲವಾಗಿ ಊದಿದನು. ಆ ಬಲವಾದ ಶಬ್ದವನ್ನು ಕೇಳಿ ಜಾಂಬವಂತನು ಹೊರಗೆ ಬಂದನು.

೨೧. ಅವರಿಬ್ಬರೂ ಯುದ್ಧಕ್ಕೆ ತೊಡಗಿ ವಜ್ರಮುಷ್ಟಿಗಳಿಂದ ಹೊಡೆದಾಡಿದರು. ಅದು ಎಲ್ಲಾ ಪ್ರಾಣಿಗಳಿಗೂ ಹೆದರಿಕೆಯನ್ನುಂಟುಮಾಡುತ್ತಿದ್ದಿತು. ಈ ರೀತಿಯಾಗಿ ಎಡೆಬಿಡದೆ ಹತ್ತುರಾತ್ರಿಗಳು ನಡೆದುವು.

೨೨. ಆಗ ಜಾಂಬವನು ಎದುರಾಳಿಗೆ ಬಲವು ಹೆಚ್ಚುತ್ತಿರುವುದನ್ನೂ ತನಗೆ ಕಡಿಮೆಯಾಗುತ್ತಿರುವುದನ್ನೂ ತಿಳಿದು ಆ ಪರಮಾತ್ಮನ ಹಿಂದಿನ ಮಾತನ್ನು ಜ್ಞಾಪಿಸಿಕೊಂಡನು.

ಸೋಽಯಂ ರಾಮೋಽವತೀರ್ಣೋಽತ್ರ ಧರ್ಮತ್ರಾಣಾಯ ವೈ ಪುನಃ ।
ಸಮಾಗತೋ ಮಮ ಸ್ವಾಮೀ ದಾತುಂ ಮಮ ಮನೋರಥಂ ॥ ೨೩ ॥

ಏವಂ ಜ್ಞಾತ್ವಾಥ ಋಕ್ಷೇಂದ್ರೋ ನಿವರ್ತ್ಯ ರಣಕರ್ಮ ತತ್ ।
ಪ್ರಾಂಜಲಿಃ ಪ್ರಾಹ ಗೋವಿಂದಂ ಕೋಽತ್ರ ಕೋಽಸೀತಿ ವಿಸ್ಮಯಾತ್ ।
ನಿವರ್ತ್ಯ ಕದನಂ ಶೌರಿಃ ಪ್ರೋಚೇ ಗಂಭೀರಯಾ ಗಿರಾ ॥ ೨೪ ॥

॥ ಕೃಷ್ಣ ಉವಾಚ ॥

ಪುತ್ರೋಽಹಂ ವಸುದೇವಸ್ಯ ವಾಸುದೇವ ಇತೀರಿತಃ ।
ಮಮ ರತ್ನಂ ಸ್ಯಮಂತಾಖ್ಯಂ ಹೃತವಾಂಸ್ತ್ವಂ ಸುನಿರ್ಭಯಃ ।
ತದ್ದೀಯತಾಂ ಚ ಶೀಘ್ರಂ ಮೇ ಅನ್ಯಥಾ ವಧಮೇಷ್ಯಸಿ ॥ ೨೫ ॥

॥ ಮಹಾದೇವ ಉವಾಚ ॥

ತಚ್ಛ್ರುತ್ವಾ ಜಾಂಬವಾನ್ ಹೃಷ್ಟಃ ಪ್ರಣನಾಮಾಥ ದಂಡವತ್ ।
ಪರಿಣೀಯ ನಮಸ್ಕೃತ್ಯ ವಿನಯಾತ್ಪ್ರಾಹ ಕೇಶವಂ ॥ ೨೬ ॥

---

೨೩. ಹಿಂದಿನ ಆ ರಾಮನೇ ಧರ್ಮವನ್ನು ಉದ್ಧಾರಮಾಡಲು ಅವತರಿಸಿರುವನು. ಆ ಸ್ವಾಮಿಯೇ ನನ್ನ ಇಷ್ಟಾರ್ಥವನ್ನು ನೆರವೇರಿಸಲು ಬಂದಿರುವನು.

೨೪. ಈ ರೀತಿಯಾಗಿ ಮನಸ್ಸಿನಲ್ಲಿ ತಂದುಕೊಂಡು ಒಡನೆಯೇ ಜಾಂಬವಂತನು ಆ ಯುದ್ಧವನ್ನು ನಿಲ್ಲಿಸಿ ಗೋವಿಂದನನ್ನು ಕುರಿತು ಕೈಮುಗಿದುಕೊಂಡು ಈ ಭೂಮಿಯಲ್ಲಿ ನೀನಾರು? ಎಂದು ಆಶ್ಚರ್ಯದಿಂದ ಕೇಳಿದನು. ಆಗ ಕೃಷ್ಣನು ಯುದ್ಧವನ್ನು ನಿಲ್ಲಿಸಿ ಗಂಭೀರವಾದ ಮಾತಿನಿಂದ ಇಂತೆಂದನು.

೨೫. ಕೃಷ್ಣನು ಹೇಳಿದನು—ನಾನು ವಸುದೇವನ ಮಗನು. ನನ್ನ ಹೆಸರು ವಾಸುದೇವನು. ನನ್ನ ರತ್ನವಾದ ಈ ಸ್ಯಮಂತಕವನ್ನು ನೀನು ಹೆದರಿಕೆಯಿಲ್ಲದೆ ಕದ್ದಿದ್ದೀಯೆ. ಅದನ್ನು ಬೇಗನೆ ನನಗೆ ಕೊಡು. ಇಲ್ಲದಿದ್ದರೆ ನಿನ್ನನ್ನು ಕೊಲ್ಲುವೆನು.

೨೬. ಮಹಾದೇವನು ಹೇಳಿದನು—ಅದನ್ನು ಕೇಳಿ ಜಾಂಬವನು ಸಂತೋಷಗೊಂಡು ದೀರ್ಘದಂಡನಮಸ್ಕಾರವನ್ನು ಮಾಡಿದನು. ಆಗ ಕೇಶವನಿಗೆ ವಿನಯದಿಂದ ಇಂತೆಂದು ಹೇಳಿದನು.

|| ಜಾಂಬವಾನುವಾಚ ||

ಧನ್ಯೋऽಸ್ಮಿ ಕೃತಕೃತ್ಯೋऽಸ್ಮಿ ತವ ಸಂದರ್ಶನಾತ್ಪ್ರಭೋ ।
ದಾಸೋऽಹಂ ಪೂರ್ವಭಾವೇನ ತವ ದೇವಕಿನಂದನ ॥ ೨೭ ॥

ದತ್ತವಾನಸಿ ಗೋವಿಂದ ಕದನಂ ಪೂರ್ವಕಾಂಕ್ಷಿತಂ ।
ಮಯೇದಂ ಕದನಂ ಮೋಹಾತ್ ಯತ್ಕೃತಂ ಸ್ವಾಮಿನಾ ತ್ವಯಾ ।
ತತ್ ಕ್ಷಮ್ಯತಾಂ ಜಗನ್ನಾಥ ಕರುಣಾಕರ ಶಾಶ್ವತ || ೨೮ ||

|| ಮಹಾದೇವ ಉವಾಚ ||

ಇತ್ಯುಕ್ತ್ವಾ ಪ್ರಣತೋ ಭೂತ್ವಾ ನಮಸ್ಕೃತ್ಯ ಪುನಃ ಪುನಃ ।
ನಾನಾರತ್ನಮಯೇ ಪೀಠೇ ನಿವೇಶ್ಯ ವಿನಯಾತ್ಪ್ರಭುಂ || ೨೯ ||

ಶಾರದಾಬ್ಜನಿಭೌ ಪಾದೌ ಪ್ರಕ್ಷಾಲ್ಯ ಶುಭವಾರಿಣಾ ।
ಮಧುಪರ್ಕವಿಧಾನೇನ ಪೂಜಯಿತ್ವಾ ಯದೂದ್ವಹಂ || ೩೦ ||

---

೨೭. ಜಾಂಬವಂತನು ಹೇಳಿದನು—ಎಲೈ ಪ್ರಭುವೆ! ನಿನ್ನ ದರ್ಶನದಿಂದ ಧನ್ಯನಾದೆನು. ಕೃತಕೃತ್ಯನಾದೆನು. ದೇವಕೀನಂದನನೆ! ನಾನು ಹಿಂದಿನ ಜನ್ಮದ ರೀತಿಯಿಂದ ನಿನಗೆ ದಾಸನು.

೨೮. ಎಲೈ ಗೋವಿಂದನೆ! ನಾನು ಹಿಂದೆ ಕೇಳಿದ್ದಂತಹ ಯುದ್ಧವನ್ನು ಕೊಟ್ಟಿದ್ದೀಯೆ ಸ್ವಾಮಿಯಾದ ನಿನ್ನೊಡನೆ ಅಜ್ಞಾನದಿಂದ ಈ ಯುದ್ಧವನ್ನು ಮಾಡಿದ್ದೇನೆ. ಎಲೈ ಜಗನ್ನಾಥನೂ ಕರುಣಾಕರನೂ ಆದ ಸ್ವಾಮಿಯೆ! ಅದನ್ನು ಕ್ಷಮಿಸು.

೨೯—೩೨. ಮಹಾದೇವನು ಹೇಳಿದನು—ಈ ರೀತಿಯಾಗಿ ಹೇಳಿ ಬಹು ಬಾರಿ ನಮಸ್ಕರಿಸಿ ಆ ಹರಿಯನ್ನು ರತ್ನಪೀಠದಲ್ಲಿ ಕುಳ್ಳಿರಿಸಿ ವಿನಯದಿಂದ ಶರತ್ಕಾಲದ ಕಮಲಗಳಂತಿರುವ ಪಾದಗಳನ್ನು ಒಳ್ಳೆಯ ನೀರಿನಿಂದ ತೊಳೆದು

ವಸ್ತ್ರೈರಾಭರಣೈರ್ದಿವ್ಯೈಃ ಪೂಜಯಿತ್ವಾ ವಿಧಾನತಃ ।
ಪುತ್ರೀಂ ಜಾಂಬವತೀಂ ನಾಮ ಕನ್ಯಾಂ ಲಾವಣ್ಯಸಂಯುತಾಂ ॥ ೩೧ ॥

ಕನ್ಯಾರತ್ನಂ ದದೌ ತಸ್ಮೈ ಭಾರ್ಯಾರ್ಥಮಮಿತೌಜಸೇ ।
ಅನ್ಯೈಶ್ಚ ಮಣಿಮುಖ್ಯೈಶ್ಚ ಸ್ಯಮಂತಾಖ್ಯಂ ದದೌ ಮಣಿಂ ॥ ೩೨ ॥

ತತ್ರೈವೋದ್ವಾಹ್ಯ ತಾಂ ಕನ್ಯಾಂ ಪ್ರಹೃಷ್ಟಃ ಪರವೀರಹಾ ।
ದದೌ ತಸ್ಮೈ ಪರಾಂ ಮುಕ್ತಿಂ ಪ್ರೀತ್ಯಾ ಜಾಂಬವತೇ ಹರಿಃ ॥ ೩೩ ॥

ಗೃಹೀತ್ವಾ ತನಯಾಂ ತಸ್ಯ ಕನ್ಯಾಂ ಜಾಂಬವತೀಂ ಮುದಾ ।
ವಿನಿರ್ಗತ್ಯ ಬಿಲಾತ್ತಸ್ಮಾತ್ ಪ್ರಯಯೌ ದ್ವಾರಕಾಂ ಪುರೀ ॥ ೩೪ ॥

ಸತ್ರಾಜಿತೇ ದದೌ ರತ್ನಂ ಸ್ಯಮಂತಾಖ್ಯಂ ರಘೂತ್ತಮಃ ।
ದುಹಿತ್ರೇ ಪ್ರದದೌ ಸೋಽಪಿ ಕನ್ಯಾಯೈ ಮಣಿಮುತ್ತಮಂ ॥ ೩೫ ॥

---

ಮಧುಪರ್ಕ ವಿಧಾನನಿಂದ ಪೂಜಿಸಿದನು. ಮತ್ತು ವಸ್ತ್ರ ಆಭರಣಗಳನ್ನು ಕೊಟ್ಟನು. ಅಲ್ಲದೆ ರೂಪವತಿಯಾದ ಜಾಂಬವತಿಯೆಂಬ ತನ್ನ ಮಗಳನ್ನೂ ಮದುವೆಮಾಡಿಕೊಟ್ಟನು. ಅನಂತರ ಆ ಸ್ಯಮಂತಕಮಣಿಯನ್ನೂ ಇನ್ನೂ ಅನೇಕ ಮಣಿಗಳನ್ನೂ ಕೊಟ್ಟನು.

೩೩. ಅಲ್ಲಿಯೇ ಆ ಜಾಂಬವನ ಮಗಳಾದ ಜಾಂಬವತಿಯನ್ನು ಮದುವೆ ಮಾಡಿಕೊಂಡು ಸಂತೋಷದಿಂದ ಆ ಜಾಂಬವನಿಗೆ ಉತ್ತಮವಾದ ಮುಕ್ತಿಯನ್ನು ಕೊಟ್ಟನು.

೩೪. ಆ ಜಾಂಬವತಿಯನ್ನು ಸಂತೋಷದಿಂದ ಮದುವೆಯಾಗಿ ಅವಳನ್ನೂ ಕರೆದುಕೊಂಡು ಆ ಗುಹೆಯಿಂದ ಹೊರಟು ದ್ವಾರಕೆಗೆ ಬಂದನು.

೩೫. ಆಗ ಆ ಸ್ಯಮಂತಕ ಮಣಿಯನ್ನು ಕೃಷ್ಣನು ಸತ್ರಾಜಿತನಿಗೆ ಕೊಟ್ಟನು. ಆ ಸತ್ರಾಜಿತನೂ ಕೂಡ ಆ ಮಣಿಯನ್ನು ತನ್ನ ಮಗಳಿಗೆ ಕೊಟ್ಟು ಬಿಟ್ಟನು. ಈ ರೀತಿಯಾಗಿ ಅದು ಕೃಷ್ಣನಿಗೆ ಸೇರಿತು.

ಮಾಸಿ ಭಾದ್ರಪದೇ ಶುಕ್ಲೇ ಚತುರ್ಥ್ಯಾಂ ಚಂದ್ರದರ್ಶನಂ ।
ಮಿಥ್ಯಾಭಿದೂಷಣಂ ಪ್ರಾಹುಸ್ತಸ್ಮಾತ್ತತ್ಪರಿವರ್ಜಯೇತ್ ॥ ೩೬ ॥

ತತ್ಪ್ರಾಪ್ತಸ್ಯ ದರ್ಶನಂ ತತ್ರ ಚತುರ್ಥ್ಯಾಂ ಶೀತರಶ್ಮಿನಃ ।
ಸ್ಯಮಂತಸ್ಯ ಕಥಾಂ ಶ್ರುತ್ವಾ ಮಿಥ್ಯಾವಾದಾತ್ ಪ್ರಮುಚ್ಯತೇ ॥ ೩೭ ॥

ಸುಲಕ್ಷಣಾಂ ನಾಗ್ನಜಿತೀಂ ಸುಶೀಲಾಂ ಚ ಯಶಸ್ವಿನೀಂ ।
ಮದ್ರರಾಜಸುತಾಸ್ತಸ್ರಃ ಕನ್ಯಕಾಸ್ತಾಃ ಶುಭಾನನಾಃ ॥ ೩೮ ॥

ಸ್ವಯಂವರಸ್ಥಾಃ ತಾಃ ಕೃಷ್ಣಂ ವರಯಾಮಾಸುರುಜ್ಜ್ವಲಾಃ ।
ಏಕಸ್ಮಿನ್ ದಿವಸೇ ತಾಸ್ತು ಉಪಯೇಮೇ ಯದೂದ್ವಹಃ ॥ ೩೯ ॥

ಅಷ್ಟೌ ಮಹಿಷ್ಯಸ್ತಾಸ್ಸರ್ವಾ ರುಕ್ಮಿಣ್ಯಾದ್ಯಾ ಮಹಾತ್ಮನಃ ।
ರುಕ್ಮಿಣೀ ಸತ್ಯಭಾಮಾ ಚ ಕಾಳಿಂದೀ ಚ ಶುಚಿಸ್ಮಿತಾ ॥ ೪೦ ॥

---

೩೬. ಭಾದ್ರಪದಮಾಸದ ಶುಕ್ಲಪಕ್ಷದ ಚತುರ್ಥಿಯದಿನ ಚಂದ್ರನ ದರ್ಶನವು ಸುಳ್ಳಾದ ದೋಷವನ್ನು ಹೊರಿಸುತ್ತದೆ. ಆದ್ದರಿಂದ ಆ ದಿನ ಚಂದ್ರ ದರ್ಶನವನ್ನು ಮಾಡಬಾರದು.

೩೭. ಒಂದು ವೇಳೆ ಆ ದಿನ ಚಂದ್ರನನ್ನು ನೋಡಿದರೆ ಈ ಸ್ಯಮಂತಕ ಮಣಿಯ ಕಥೆಯನ್ನು ಕೇಳಿದರೆ ಆ ಸುಳ್ಳಾದ ಆರೋಪವು ಹೋಗುತ್ತದೆ.

೩೮. ಸುಲಕ್ಷಣಾ, ನಾಗ್ನಿಜಿತಿ, ಸುಶೀಲೆ ಎಂಬುವರು ಮದ್ರರಾಜನ ಹೆಣ್ಣುಮಕ್ಕಳು. ಈ ಮೂವರು ಹುಡುಗಿಯರೂ ಲಕ್ಷಣವತಿಯರು. ಮತ್ತು ಸುಂದರಿಯರು.

೩೯. ಸ್ವಯಂವರದಲ್ಲಿ ಆ ಹುಡುಗಿಯರು ಕೃಷ್ಣನನ್ನು ವರಿಸಿದರು. ಅವರು ಮೂವರನ್ನೂ ಕೃಷ್ಣನು ಒಂದೇ ದಿನದಲ್ಲಿ ಮದುವೆಯಾದನು

೪೦–೪೧. ಆ ರುಕ್ಮಿಣಿಯೇ ಮುಂತಾದ ಎಂಟು ಜನರು ಆ ಕೃಷ್ಣನಿಗೆ ಹೆಂಡತಿಯರು. ರುಕ್ಮಿಣಿ, ಸತ್ಯಭಾಮೆ, ಕಾಳಿಂದಿ, ಮಿತ್ರವಿಂದೆ, ಜಾಂಬವತಿ,

ಮಿತ್ರವಿಂದಾ ಜಾಂಬವತೀ ನಾಗ್ನಜಿತ್ಯಃ ಸುಲಕ್ಷ್ಮಣಾ |
ಸುಶೀಲಾ ನಾಮ ತನ್ವಂಗೀ ಮಹಿಷೀ ಚಾಷ್ಟಮೀ ಸ್ಮೃತಾ || ೪೧ ||

ಭೂಮಿಪುತ್ರೋ ಮಹಾವೀರ್ಯೋ ನರಕೋ ನಾಮ ರಾಕ್ಷಸಃ |
ಜಿತ್ವಾ ದೇವಪತಿಂ ಶಕ್ರಂ ಸರ್ವಾಂಶ್ಚೈವ ಸುರಾನ್ ರಣೇ || ೪೨ ||

ಅದಿತ್ಯಾ ದೇವಮಾತುಶ್ಚ ಕುಂಡಲೇ ಚ ಸುವರ್ಚಸೀ |
ಬಲಾಜ್ಜಗ್ರಾಹ ದೇವಾನಾಂ ರತ್ನಾನಿ ವಿವಿಧಾನಿ ಚ || ೪೩ ||

ಐರಾವತಂ ಮಹೇಂದ್ರಸ್ಯ ತಥೈವೋಚ್ಚೈಶ್ರವೋ ಹಯಂ |
ಮಾಣಿಕ್ಯಾದಿ ಧನೇಶಸ್ಯ ಶಂಖಪದ್ಮನಿಧಿಂ ತಥಾ || ೪೪ ||

ಸ್ತ್ರಿಯಶ್ಚಾಪ್ಸರಸಶ್ಚೈವ ಹೃತವಾನ್ ಕ್ಷಿತಿನಂದನಃ |
ವಜ್ರಾದಿಹೇತಯಶ್ಚೈವ ಬಲಾದ್ಧೃತ್ವಾ ದಿವೌಕಸಾಂ || ೪೫ ||

---

ನಾಗ್ನಿಜಿತಿ, ಸುಲಕ್ಷಣೆ, ಸುಶೀಲೆ, ಎಂಬುದಾಗಿ ಕೃಷ್ಣನ ಎಂಟುಜನ ಹೆಂಡಿರ ಹೆಸರುಗಳು.

೪೨–೪೩. ನರಕನೆಂಬ ಒಬ್ಬ ರಾಕ್ಷಸನಿದ್ದನು. ಅವನು ಭೂಮಿಯ ಪುತ್ರನು. ಅವನು ದೇವತೆಗಳನ್ನೂ ದೇವೇಂದ್ರನನ್ನೂ ಜಯಿಸಿದ್ದನು. ಮತ್ತು ಇಂದ್ರನ ತಾಯಿಯಾದ ಅದಿತಿಯ ಬಹು ಕಾಂತಿಯಿಂದಕೂಡಿದ ಓಲೆಗಳನ್ನು ಬಲಾತ್ಕಾರದಿಂದ ಕಿತ್ತುಕೊಂಡಿದ್ದನು. ಅಲ್ಲದೆ ದೇವತೆಗಳಲ್ಲಿದ್ದ ಶ್ರೇಷ್ಠ ವಸ್ತುಗಳನ್ನೆಲ್ಲಾ ಬಿಡದೆ ಕಿತ್ತುಕೊಂಡಿದ್ದನು.

೪೪–೪೬. ಮಹೇಂದ್ರನ ಐರಾವತವೆಂಬ ಆನೆಯನ್ನೂ ಉಚ್ಚೈಶ್ರವಸ್ಸೆಂಬ ಕುದುರೆಯನ್ನೂ ಕಿತ್ತುಕೊಂಡಿದ್ದನು. ಕುಬೇರನ ಮಾಣಿಕ್ಯವೇ ಮುಂತಾದ ರತ್ನಗಳನ್ನೂ ಅಂತೆಯೇ ಶಂಖ ಪದ್ಮಗಳೆಂಬ ನಿಧಿಗಳನ್ನೂ ಅಪಹರಿಸಿದ್ದನು. ಮತ್ತು ಅವನು ಅಪ್ಸರಸ್ತ್ರೀಯರನ್ನೂ ಅಪಹರಿಸಿದ್ದನು. ದೇವತೆಗಳ ವಜ್ರವೇ ಮುಂತಾದ ಆಯುಧಗಳನ್ನೂ ಕಸಿದುಕೊಂಡು ಆ ಆಯುಧಗಳಿಂದಲೇ

ತೈರೇವ ಸ ಸುರಾ಼ ಹತ್ವಾ ಸಭಾಂ ಮಯವಿನಿರ್ಮಿತಾಂ |
ಉವಾಸ ವ್ಯೋಮಗೋ ದಿವ್ಯೋ ನಗರ್ಯಾಂ ವಿಮಲೇಽಂಬರೇ || ೪೬ ||

ತತೋ ದೇವಗಣಾಸ್ಸರ್ವೇ ಪುರಸ್ಕೃತ್ಯ ಶಚೀಪತಿಂ |
ಭಯಾರ್ತಾಶ್ಶರಣಂ ಜಗ್ಮುಃ ಕೃಷ್ಣಮಕ್ಲಿಷ್ಟಕಾರಣಂ || ೪೭ ||

ಕೃಷ್ಣೋಽಪಿ ತದುಪಶ್ರುತ್ಯ ಸರ್ವಂ ನರಕಚೇಷ್ಟಿತಂ |
ದೇವಾನಾಮಭಯಂ ದತ್ವಾ ವೈನತೇಯಂ ವ್ಯಚಿಂತಯತ್ || ೪೮ ||

ತಸ್ಮಿ಼ ಕ್ಷಣೇ ಹರೇಸ್ತಸ್ಯ ವೈನತೇಯೋ ಮಹಾಬಲಃ |
ಪ್ರಾಂಜಲಿಃ ಪುರತಸ್ತಸ್ಥೌ ಸರ್ವದೇವನಮಸ್ಕೃತಃ || ೪೯ ||

ತಮಾರುಹ್ಯ ದ್ವಿಜಶ್ರೇಷ್ಠಂ ಸತ್ಯಯಾ ಸಹ ಕೇಶವಃ |
ಸಂಸ್ತೂಯಮಾನೋ ಮುನಿಭಿಃ ಪ್ರಯಯೌ ರಾಕ್ಷಸಾಲಯಂ || ೫೦ ||

---

ಅವರನ್ನೆಲ್ಲಾ ಹೊಡೆದೋಡಿಸಿದ್ದನು. ಮತ್ತು ಮಯ ನಿರ್ಮಿತವಾದ ದೇವ ಸಭೆಯನ್ನು ತೆಗೆದುಕೊಂಡು ಅದನ್ನು ನಿರ್ಮಲವಾದ ಆಕಾಶದಲ್ಲಿ ಒಂದು ಪಟ್ಟಣವನ್ನು ಕಟ್ಟಿಸಿ ಅದರಲ್ಲಿಟ್ಟುಕೊಂಡು ಸುಖದಿಂದಿದ್ದನು.

೪೭. ಆಗ ದೇವತೆಗಳೆಲ್ಲರೂ ಇಂದ್ರನನ್ನು ಮುಂದುಮಾಡಿಕೊಂಡು ಆ ನರಕಾಸುರನ ಭಯದಿಂದ ಅಂಜಿ ಶರಣಾಗತರ ರಕ್ಷಕನಾದ ಕೃಷ್ಣನನ್ನು ಶರಣು ಹೊಂದಿದರು.

೪೮. ಆ ನರಕನ ಚೇಷ್ಟೆಯನ್ನೆಲ್ಲಾ ಕೃಷ್ಣನು ಕೇಳಿ ದೇವತೆಗಳಿಗೆ ಅಭಯವನ್ನು ಕೊಟ್ಟು ಗರುಡನನ್ನು ಸ್ಮರಿಸಿದನು.

೪೯. ಮಹಾ ಬಲಿಷ್ಠನಾದ ಗರುಡನು ಆಕ್ಷಣದಲ್ಲಿಯೇ ಬಂದು ಕೃಷ್ಣನಿಗೆ ನಮಸ್ಕರಿಸಿ ಕೈಮುಗಿದುಕೊಂಡು ನಿಂತುಕೊಂಡನು.

೫೦. ಆಗ ಆ ಕೇಶವನು ಸತ್ಯಭಾಮೆಯನ್ನು ಜೊತೆಯಲ್ಲಿ ಕರೆದುಕೊಂಡು ಆ ಗರುಡನ ಮೇಲೆ ಹತ್ತಿಕೊಂಡನು. ಆಗ ಮುನಿಗಳು ಸ್ತುತಿಸುತ್ತಿದ್ದರು. ಇಂತು ಸ್ತುತಿಸಲ್ಪಡುತ್ತ ಆ ರಾಕ್ಷಸನ ಮನೆಗೆ ಹೋದನು.

ಪ್ರದೀಪ್ಯಮಾನಮಾಕಾಶೇ ಯಥಾ ಸೂರ್ಯಸ್ಯ ಮಂಡಲಂ ।
ರಾಕ್ಷಸೈರ್ಬಹುಭಿರ್ಯುಕ್ತಂ ದಿವ್ಯೈರಾಭರಣೈರ್ಯುತಂ ॥ ೫೧ ॥

ದದರ್ಶ ತತ್ಪುರಂ ಕೃಷ್ಣೋ ದುರ್ಭೇದ್ಯಂ ತ್ರಿದಶೈರಪಿ ।
ತದಾವರಣಾನಿ ಭಗವಾನ್ ವೀಕ್ಷ್ಯ ಚಕ್ರೇಣ ವೀರ್ಯವಾನ್ ॥ ೫೨ ॥

ಚಿಚ್ಛೇದ ತೇಜಸಾ ದೀಪ್ತ್ಯಾ ತಮಾಂಸೀವ ದಿವಾಕರಃ ।
ತತಸ್ತೇ ರಾಕ್ಷಸಾಸ್ಸರ್ವೇ ಶತಶೋಥ ಸಹಸ್ರಶಃ ॥ ೫೩ ॥

ಉದ್ಯಮ್ಯ ಶೂಲಾಂಶ್ಚ ತದಾ ಯುದ್ಧಾಯಾಭಿಮುಖಂ ಯಯುಃ ।
ತತಸ್ತು ತೋಮರೈರ್ದಿವ್ಯೈರ್ಭಿಂದಿವಾಲೈಃ ಸಪಟ್ಟಿಶೈಃ ॥ ೫೪ ॥

ಕೇಶವಂ ತಾಡಯಾಮಾಸುಃ ರಾಕ್ಷಸಾ ಜಯಕಾಂಕ್ಷಿಣಃ ।
ತತಸ್ತು ಶಾಂರ್ಗಮಾದಾಯ ಭಗವಾನ್ ಗರುಡಧ್ವಜಃ ॥ ೫೫ ॥

ದಿವ್ಯಶಸ್ತ್ರಾಣಿ ಚಿಚ್ಛೇದ ಬಾಣೈರಗ್ನಿಶಿಖೋಪಮೈಃ ।
ತೇಷಾಂ ಶಿರೋಧರಾನ್ ನಾಗಾನಶ್ವಾಂಶ್ಚೈವ ತರಸ್ವಿನಃ ॥ ೫೬ ॥

---

೫೧–೫೯. ಆಕಾಶದಲ್ಲಿ ಸೂರ್ಯಮಂಡಲದಂತೆ ಪ್ರಕಾಶಿಸುತ್ತಿರುವ, ಅನೇಕ ರಾಕ್ಷಸರಿರುವ, ಉತ್ತಮವಾದ ಆಭರಣಗಳಿಂದ ಕೂಡಿದ ದೇವತೆಗಳಿಗೂ ಭೇದಿಸಲಾಗದ, ಆ ಪಟ್ಟಣವನ್ನು ಕೃಷ್ಣನು ನೋಡಿದನು. ಆ ಕೃಷ್ಣನು ಆ ಊರಿನ ಕೋಟೆಗಳನ್ನು ನೋಡಿ ಅದನ್ನು ಸೂರ್ಯನು ತನ್ನ ಉಗ್ರವಾದ ತೇಜಸ್ಸಿನಿಂದ ಕತ್ತಲೆಯನ್ನು ನಾಶಮಾಡುವಂತೆ ಚಕ್ರದಿಂದ ನಾಶಮಾಡಿದನು. ಅನಂತರ ರಾಕ್ಷಸರುಗಳು ನೂರು ಸಾವಿರಗಟ್ಟಲೆಯಲ್ಲಿ ಹೊರಟು ಶೂಲಗಳನ್ನು ಮೇಲಕ್ಕೆ ಎತ್ತಿಕೊಂಡು ಯುದ್ಧಕ್ಕೆ ಹೊರಟರು. ತೋಮರ, ಭಿಂದಿವಾಲ, ಪಟ್ಟಿಶ, ಇವುಗಳಿಂದ ಆ ರಾಕ್ಷಸರು ಕೃಷ್ಣನ ಮೇಲೆ ಯುದ್ಧಮಾಡುತ್ತಾ ಜಯವನ್ನು ಹಾರೈಸುತ್ತಿದ್ದರು. ಆಗ ಕೃಷ್ಣನು ಶಾಂರ್ಗವೆಂಬ ಧನುಸ್ಸನ್ನು ತೆಗೆದುಕೊಂಡು ಅಗ್ನಿಯಂತಿರುವ ಬಾಣಗಳಿಂದ ಆ ದಿವ್ಯಾಸ್ತ್ರಗಳೆಲ್ಲವನ್ನೂ ಕತ್ತರಿಸಿದನು. ಶಕ್ತನಾದ ಆ ಪುರುಷೋತ್ತಮನು ಆ ರಾಕ್ಷಸರ ತಲೆಗಳನ್ನೂ ಆನೆಗಳನ್ನೂ ಕುದುರೆಗಳನ್ನೂ

ಚಕ್ರೇಣೈವ ಪ್ರಚಿಚ್ಛೇದ ವೀರ್ಯವಾನ್ ಪುರುಷೋತ್ತಮಃ |
ಕೇಚಿಚ್ಚಕ್ರೇಣ ಸಂಭಿನ್ನಾಃ ತಥಾನ್ಯೇ ಶರತಾಡಿತಾಃ || ೫೭ ||

ಗದಯಾ ನಿಹತಾಃ ಕೇಚಿದ್ರಾಕ್ಷಸಾಸ್ತದ್ರಣಾಜಿರೇ |
ಏವಂ ತೇ ರಾಕ್ಷಸಾಸ್ಸರ್ವೇ ಪತಿತಾ ಧರಣೀತಲೇ || ೫೮ ||

ಶಕ್ರೋತ್ಸೃಷ್ಟೇನ ವಜ್ರೇಣ ನಿರ್ಭಿನ್ನಾ ಇವ ಭೂಧರಾಃ |
ನಿಹತ್ಯ ದಾನವಾನ್ ಸರ್ವಾನ್ ಪುಂಡರೀಕಾಯತೇಕ್ಷಣಃ || ೫೯ ||

ಪಾಂಚಜನ್ಯಂ ಮಹಾಶಂಖಂ ಪ್ರದಧ್ಮೌ ಪುರುಷೋತ್ತಮಃ |
ತತಸ್ಸ ನರಕೋ ದೈತ್ಯೋ ಧನುರಾದಾಯ ವೀರ್ಯವಾನ್ || ೬೦ ||

ದಿವ್ಯಂ ಸ್ಯಂದನಮಾರುಹ್ಯ ಯಯೌ ಯುದ್ಧಾಯ ಕೇಶವಂ |
ತಯೋರ್ಯುದ್ಧಮಭೂದ್ಘೋರಂ ತುಮುಲಂ ಲೋಮಹರ್ಷಣಂ || ೬೧ ||

---

ಆ ಚಕ್ರದಿಂದಲೇ ಕತ್ತರಿಸಿದನು. ಕೆಲವರನ್ನು ಚಕ್ರದಿಂದ ಕತ್ತರಿಸಿದನು. ಕೆಲವರನ್ನು ಬಾಣದಿಂದ ಕೊಂದನು. ಕೆಲವರನ್ನು ಗದೆಯಿಂದ ಕೊಂದನು. ಈ ರೀತಿಯಾಗಿ ರಣರಂಗದಲ್ಲಿ ಎಲ್ಲರನ್ನೂ ಕೊಂದನು. ಇಂದ್ರನು ಬಿಟ್ಟ ವಜ್ರಾಯುಧದಿಂದ ಪರ್ವತಗಳು ಕೆಳಗೆ ಬಿದ್ದಂತೆ ಶ್ರೀಕೃಷ್ಣನು ಬಿಟ್ಟ ಬಾಣಗಳಿಂದ ಆ ರಾಕ್ಷಸರೆಲ್ಲರೂ ನೆಲದ ಮೇಲೆ ಬಿದ್ದರು. ಈ ಶ್ರೀ ಕೃಷ್ಣನು ಆ ದಾನವರನ್ನೆಲ್ಲರನ್ನೂ ಕೊಂದು ತನ್ನ ಮಹಾ ಶಂಖವಾದ ಪಾಂಚಜನ್ಯವನ್ನು ಬಹುಗಟ್ಟಿಯಾಗಿ ಊದಿದನು.

೬೦–೬೧. ಇದನ್ನು ಕೇಳಿ ಆ ದೈತ್ಯನಾದ ನರಕನು ಧನುಸ್ಸನ್ನು ತೆಗೆದುಕೊಂಡು ಉತ್ತಮವಾದ ರಥದ ಮೇಲೆ ಕುಳಿತು ಕೇಶವನೊಡನೆ ಯುದ್ಧಕ್ಕೆ ಹೊರಟನು. ಅವರಿಬ್ಬರಿಗೂ ರೋಮಾಂಚವಾಗುವಂತಹ ಘೋರಯುದ್ಧವು ನಡೆಯಿತು.

ಬಹುಭಿಃ ಬಾಣಸಾಹಸ್ರೈಃ ಮೇಘಯೋರಿವ ವರ್ಷತೋಃ ।
ತತೋರ್ಧಚಂದ್ರಬಾಣೇನ ವಸುದೇವಃ ಸನಾತನಃ　　|| ೬೨ ||

ತಸ್ಯ ರಾಕ್ಷಸಮುಖ್ಯಸ್ಯ ಧನುಶ್ಚಿಚ್ಛೇದ ವೀರ್ಯವಾನ್ ।
ಸಸರ್ಜಾಸ್ತ್ರಂ ಮಹಾದಿವ್ಯಂ ನರಕಸ್ಯ ಮಹೋರಸಿ　　|| ೬೩ ||

ಸ ತೇನ ಭಿನ್ನಹೃದಯಃ ಪಪಾತೋರ್ವ್ಯಾಂ ಮಹಾಸುರಃ ।
ಶಕ್ರವಜ್ರೇಣ ನಿರ್ಭಿನ್ನೋ ಮಹಾಚಲ ಇವೋನ್ನದನ್　　|| ೬೪ ||

ಉಪಗಮ್ಯ ತತಃ ಕೃಷ್ಣಃ ಸಮೀಪಂ ತಸ್ಯ ರಕ್ಷಸಃ ।
ಭೂಮ್ಯಾ ಸಂಪ್ರಾರ್ಥಿತಃ ಪ್ರಾಹ ವರಂ ವೃಣೀಷ್ವೇತಿ ರಾಕ್ಷಸಂ ॥
ಸ ಚಾಹ ರಾಕ್ಷಸಃ ಕೃಷ್ಣಂ ಗರುಡೋಪರಿಸಂಸ್ಥಿತಂ　　|| ೬೫ ||

---

೬೨-೬೩. ಅವರಿಬ್ಬರೂ ಅನೇಕ ಸಾವಿರ ಬಾಣಗಳನ್ನು ಬಿಡುತ್ತ ಮಳೆ ಸುರಿಯುತ್ತಿರುವ ಎರಡು ಮೇಘಗಳಂತೆ ಯುದ್ಧಮಾಡಿದರು. ಆಗ ಆ ವಾಸುದೇವನು ಅರ್ಧಚಂದ್ರಾಕಾರದ ಬಾಣವನ್ನು ತೆಗೆದುಕೊಂಡು ಆ ನರಕನ ಧನುಸ್ಸನ್ನು ಕತ್ತರಿಸಿಬಿಟ್ಟನು. ಮತ್ತು ಅವನ ಮೇಲೆ ಅನೇಕ ಉತ್ತಮೋತ್ತಮವಾದ ಬಾಣಗಳನ್ನು ಬಿಟ್ಟನು.

೬೪. ಆ ಬಾಣಗಳಿಂದ ಎದೆಯು ಒಡೆದು ಇಂದ್ರನ ವಜ್ರಾಯುಧದಿಂದ ಕತ್ತರಿಸಲ್ಪಟ್ಟು ಕೆಳಗೆ ಬಿದ್ದ ದೊಡ್ಡ ಬೆಟ್ಟದಂತೆ ಬಿದ್ದು ಕೂಗುತ್ತಿದ್ದನು.

೬೫. ಆಗ ಕೃಷ್ಣನು ಭೂಮಿಯ ಪ್ರಾರ್ಥನೆಯಂತೆ ಆ ರಾಕ್ಷಸನಾದ ನರಕನ ಬಳಿಗೆ ಹೋಗಿ ನಿನಗೆ ಬೇಕಾದ ವರವನ್ನು ಕೇಳಿಕೋ ಎಂದನು. ಆಗ ಆ ರಾಕ್ಷಸನು ಗರುಡನ ಮೇಲೆ ಕುಳಿತಿರುವ ಈ ಕೃಷ್ಣನನ್ನು ಕುರಿತು ಇಂತೆಂದನು.

॥ ನರಕಾಸುರ ಉವಾಚ ॥

ನ ಮೇ ಕೃತ್ಯಂ ವರೇಣಾಸ್ತಿ ನರಕೋಽಹಂ ತಥಾಪಿ ಚ ।
ಅನ್ಯಲೋಕಹಿತಾರ್ಥಾಯ ವೃಣೇಹಂ ವರಮುತ್ತಮಂ ॥ ೬೬ ॥

ಮೃತಾಹನಿ ತು ಮೇ ಕೃಷ್ಣ ಸರ್ವಭೂತೇಶ್ವರೇಶ್ವರ ।
ಯೇ ನರಾ ಮಂಗಳಸ್ನಾನಂ ಕುರ್ವಂತಿ ಮಧುಸೂದನ ॥
ನ ತೇಷಾಂ ನಿರಯಪ್ರಾಪ್ತಿಃ ಭವತ್ವೇವಂ ಭಯಾಪಹ ॥ ೬೭ ॥

॥ ಮಹಾದೇವ ಉವಾಚ ॥

ಏವಮಸ್ತ್ವಿತಿ ಗೋವಿಂದೋ ದದೌ ತಸ್ಮೈ ವರಂ ಪ್ರಭುಃ ।
ತತಃ ಪಶ್ಯ ಹರೇಸ್ಸಾಕ್ಷಾತ್ ಶರದಂಬುಜಸನ್ನಿಭೌ ॥ ೬೮ ॥

ಚರಣೌ ವಜ್ರವೈಡೂರ್ಯನೂಪುರಾಭ್ಯಾಂ ವಿರಾಜಿತೌ ।
ಅರ್ಚಿತೌ ವಿಧಿರುದ್ರಾದ್ಯೈಃ ತ್ರಿದಶೈರ್ಮುನಿಭಿಸ್ತಥಾ ॥ ೬೯ ॥

---

೬೬. ನರಕಾಸುರನು ಹೇಳಿದನು—ಎಲೈ ಕೃಷ್ಣನೆ! ನನಗೆ ವರದಿಂದ ಆಗಬೇಕಾದುದೇನೂ ಇಲ್ಲ. ನಾನು ಮೊದಲೇ ನರಕನೆಂಬ ಹೆಸರಿನವನು. ಆದುದರಿಂದ ಪರಲೋಕದಲ್ಲಿ ಜನಗಳಿಗೆ ಒಳ್ಳೆಯದಾಗುವುದಕ್ಕೆ ಉತ್ತಮವಾದ ವರವನ್ನು ಕೇಳಿಕೊಳ್ಳುತ್ತೇನೆ.

೬೭. ಎಲೈ ಸರ್ವಭೂತೇಶ್ವರನಾದ ಕೃಷ್ಣನೇ! ನಾನು ಸತ್ತ ದಿನದಲ್ಲಿ ಯಾವ ಮನುಷ್ಯರು ಮಂಗಳಸ್ನಾನವನ್ನು ಮಾಡುತ್ತಾರೆಯೋ ಅವರಿಗೆ ನರಕದ ಪ್ರಾಪ್ತಿ ಇಲ್ಲದಿರಲಿ.

೬೮–೭೩. ಮಹಾದೇವನು ಹೇಳಿದನು—ಗೋವಿಂದನು ಹಾಗೆಯೇ ಆಗಲೆಂದು ವರವನ್ನು ಕೊಟ್ಟನು. ಅನಂತರ ಆ ನರಕನು ಕೆಂದಾವರೆಯಂತಿರುವ, ವಜ್ರ ವೈಡೂರ್ಯಗಳಿಂದ ಕೂಡಿದ, ಕಾಲು ಬಳೆಯುಳ್ಳ, ಬ್ರಹ್ಮರುದ್ರರಿಂದ

ತ್ಯಕ್ತ್ವಾ ಪ್ರಾಣಾನ್ ಮಹೀಪುತ್ರಃ ಸಾರೂಪ್ಯಮಗಮದ್ಧರೇಃ ।
ತತೋ ದೇವಗಣಾಸ್ಸರ್ವೇ ಹರ್ಷನಿರ್ಭರಮಾನಸಾಃ ॥ ೭೦ ॥

ವವೃಷುಃ ಪುಷ್ಪವರ್ಷಾಣಿ ತುಷ್ಟುವುಶ್ಚ ಮಹರ್ಷಯಃ ।
ಪ್ರವಿಶ್ಯ ನಗರಂ ತಸ್ಯ ಕೃಷ್ಣಃ ಕಮಲಲೋಚನಃ ॥ ೭೧ ॥

ಬಲಾತ್ತೇನ ಗೃಹೀತಾನಿ ಧನಾನಿ ತ್ರಿದಿವೌಕಸಾಂ ।
ಕುಂಡಲೇ ದೇವಮಾತುಶ್ಚ ತಥೈವೋಚ್ಚೈಶ್ಶ್ರವೋಹಯಂ ॥ ೭೨ ॥

ಐರಾವತಂ ಗಜಶ್ರೇಷ್ಠಂ ಪ್ರದೀಪ್ತಂ ಮಣಿಪರ್ವತಂ ।
ಸರ್ವಮೇತದ್ಯದುಶ್ರೇಷ್ಠೋ ದದೌ ಶಕ್ರಾಯ ವಜ್ರಿಣೇ ॥ ೭೩ ॥

ಪಾರ್ಥಿವಾನ್ ಸರ್ವರಾಷ್ಟ್ರೇಭ್ಯೋ ಜಿತ್ವಾ ऽ ಸೌ ನರಕೋ ಬಲೀ ।
ಕನ್ಯಾಷೋಡಶಸಾಹಸ್ರಂ ಹೃತವಾನ್ ಸ್ವೇನ ತೇಜಸಾ ॥ ೭೪ ॥

---

ಪೂಜಿತವಾದ, ಹರಿಯ ಚರಣಗಳನ್ನು ನೋಡುತ್ತಾ ಪ್ರಾಣವನ್ನು ಬಿಟ್ಟು ಹರಿಯ ಸಾರೂಪ್ಯವನ್ನು ಹೊಂದಿದನು. ಆಗ ದೇವತೆಗಳೆಲ್ಲರೂ ಹರ್ಷದಿಂದ ಕೂಡಿದ ಮನಸ್ಸುಳ್ಳವರಾಗಿ ಹೂಮಳೆಯನ್ನು ಸುರಿಸಿದರು ಮಹರ್ಷಿಗಳು ಹೊಗಳಿದರು. ಕೃಷ್ಣನು ಆ ನರಕಾಸುರನ ಪಟ್ಟಣಕ್ಕೆ ಹೋಗಿ ಆ ನರಕನು ದೇವತೆಗಳಿಂದ ತಂದಿದ್ದ ಧನವೆಲ್ಲವನ್ನೂ ಹಿಂದಕ್ಕೆ ಕೊಡಿಸಿಬಿಟ್ಟನು. ಆ ದೇವಮಾತೆಯಾದ ಅದಿತಿಯ ಓಲೆಗಳನ್ನೂ ಕೊಡಿಸಿಬಿಟ್ಟನು. ಉಚ್ಚೈಶ್ಶ್ರವಸ್ಸೆಂಬ ಕುದುರೆ ಐರಾವತವೆಂಬ ಆನೆ ಪ್ರಕಾಶಮಾನವಾದ ಮಣಿಪರ್ವತ ಇವೆಲ್ಲವನ್ನೂ ಇಂದ್ರನಿಗೆ ಕೊಡಿಸಿಬಿಟ್ಟನು.

೭೪-೭೯. ಈ ನರಕನು ಎಲ್ಲಾ ದೇಶದ ರಾಜರನ್ನೂ ಗೆದ್ದು ಅವರ ಮನೆಯಿಂದ ಬಲಾತ್ಕರಿಸಿ ತಂದು ಅಂತಃ ಪುರದಲ್ಲಿ ಸೆರೆಹಾಕಿದ್ದವರು ಹದಿನಾರು

ಸನ್ನಿರುದ್ಧಾಸ್ತು ತಾ ಸರ್ವಾ ನರಕಾಂತಃಪುರೇ ತದಾ ।
ದೃಷ್ಟ್ವಾ ಕೃಷ್ಣಂ ಮಹಾವೀರ್ಯಂ ಕಂದರ್ಪಶತಸನ್ನಿಭಂ ॥ ೭೫ ॥

ಭರ್ತಾರಂ ಚಕ್ರಿರೇ ಸರ್ವಾಃ ಪತಿಂ ವಿಶ್ವಸ್ಯ ಸರ್ವಗಂ ।
ಏಕಸ್ಮಿನ್ನೇವ ಲಗ್ನೇ ತು ಗೋವಿಂದೋಽನಂತರೂಪವಾನ್ ॥ ೭೬ ॥

ತಾಸಾಂ ಕರಗ್ರಹಂ ಚಕ್ರೇ ವಿಧಿನಾ ಪುರುಷೋತ್ತಮಃ ।
ನರಕಸ್ಯ ಸುತಾಸ್ಸರ್ವೇ ಪುರಸ್ಕೃತ್ಯ ಮಹೀಂ ತದಾ ॥ ೭೭ ॥

ಗೋವಿಂದಂ ಶರಣಂ ಜಗ್ಮುಸ್ತಾನರಕ್ಷತ್ ಕೃಪಾನಿಧಿಃ ।
ತದ್ರಾಜ್ಯೇ ಸ್ಥಾಪ್ಯ ತಾನ್ ಸರ್ವಾನ್ ಪೃಥಿವ್ಯಾ ವಾಕ್ಯಗೌರವಾತ್ ॥ ೭೮ ॥

ಐಂದ್ರಂ ವಿಮಾನಮಾರೋಪ್ಯ ತಾಶ್ಚ ಸರ್ವಾ ವರಸ್ತ್ರಿಯಃ ।
ದೇವದೂತೈರ್ಮಹಾಭಾಗೈಃ ದ್ವಾರವತ್ಯಾಂ ನ್ಯವೇಶಯತ್ ॥ ೭೯ ॥

ವೈನತೇಯಂ ಸಮಾರುಹ್ಯ ಸತ್ಯಯಾ ಸಹ ಕೇಶವಃ ।
ಸ್ವರ್ಲೋಕೇ ಪ್ರಯಯೌ ತೂರ್ಣಂ ದ್ರಷ್ಟುಂ ತಾಂ ದೇವಮಾತರಂ॥ ೮೦ ॥

---

ಸಾವಿರ ಜನ ಹೆಂಗಸರಿದ್ದರು. ಅವರೆಲ್ಲರೂ ಈ ಬಲಿಷ್ಠನೂ ಬಹು ಸುಂದರನೂ ಪ್ರಪಂಚಕ್ಕೆ ಒಡೆಯನೂ ಆದ ಕೃಷ್ಣನನ್ನು ಗಂಡವನ್ನಾಗಿ ವರಿಸಿದರು. ಬಹು ರೂಪಿಯಾದ ಆ ಕೃಷ್ಣನು ಒಂದೇ ಲಗ್ನದಲ್ಲಿ ಬಹುವಾದ ಆಕಾರವನ್ನು ಹೊಂದಿ ಆ ಹದಿನಾರು ಸಾವಿರ ಹೆಂಗಸರನ್ನು ಮದುವೆಯಾದನು. ನರಕಾಸುರನ ಮಕ್ಕಳೆಲ್ಲರೂ ಭೂದೇವಿಯನ್ನು ಮುಂದು ಮಾಡಿಕೊಂಡು ಗೋವಿಂದನನ್ನು ಶರಣುಹೊಕ್ಕರು. ದಯಾನಿಧಿಯಾದ ಆ ಗೋವಿಂದನು ಅವರನ್ನು ಕಾಪಾಡಿದನು. ಆ ಪೃಥಿವಿಯು ಮಾತಿನ ಗೌರವದಿಂದ ಆ ಮಕ್ಕಳೆಲ್ಲರನ್ನೂ ಆ ರಾಜ್ಯದಲ್ಲಿಯೇ ಇಟ್ಟನು. ತಾನು ಮದುವೆಯಾದ ಆ ಹೆಂಗಸರೆಲ್ಲರನ್ನೂ ಇಂದ್ರನ ವಿಮಾನದಲ್ಲಿ ಕೂರಿಸಿ ದೇವದೂತರನ್ನು ಜೊತೆಮಾಡಿ ದ್ವಾರವತಿಗೆ ಕಳುಹಿಸಿ ಅಲ್ಲಿರಿಸಿದನು.

೮೦. ಆ ಗರುಡನಮೇಲೆ ಕೃಷ್ಣನು ಕುಳಿತುಕೊಂಡು ಸತ್ಯಭಾಮೆಯನ್ನೂ ಕೂರಿಸಿಕೊಂಡು ದೇವಮಾತೆಯಾದ ಅದಿತಿಯನ್ನು ನೋಡಲು ದೇವಲೋಕಕ್ಕೆ ಹೋದನು

ಪ್ರವಿಶ್ಯ ನಗರೀಂ ತತ್ರ ದೇವರಾಜೋ ಜನಾರ್ದನಃ |
ಅವರುಹ್ಯ ದ್ವಿಜಶ್ರೇಷ್ಠಾತ್ ಪತ್ನ್ಯಾ ಸಹ ಮಹಾಬಲಃ ॥ ೮೧ ॥

ವವಂದೇ ಮಾತರಂ ತತ್ರ ವಂದ್ಯಾಂ ತಾಂ ತ್ರಿದಿವೌಕಸಾಂ |
ಸಂಪರಿಷ್ವಜ್ಯ ಬಾಹುಭ್ಯಾಮದಿತಿಃ ಪುತ್ರವತ್ಸಲಾ ॥ ೮೨ ॥

ನಿವೇಶ್ಯಾಸನಮುಖ್ಯೇ ತು ಪೂಜಯಾಮಾಸ ಭಕ್ತಿತಃ |
ಆದಿತ್ಯಾ ವಸವೋ ರುದ್ರಾಃ ಶತಕ್ರತುಪುರೋಗಮಾಃ ॥ ೮೩ ॥

ತತ್ರ ಸಂಪೂಜಯಾಮಾಸುರ್ಯಥಾರ್ಹಂ ಪರಮೇಶ್ವರಂ |
ಶಚೀಗೃಹಂ ಸಮಾಗಮ್ಯ ಸತ್ಯಭಾಮಾ ಯಶಸ್ವಿನೀ ॥ ೮೪ ॥

ತಯಾ ಸಮರ್ಚಿತಾ ದೇವ್ಯಾ ಸಮಾಸೀನಾ ಸುಖಾಸನೇ |
ತಸ್ಮಿನ್ ಕಾಲೇ ಸುಪುಷ್ಪಾಣಿ ಪಾರಿಜಾತಸ್ಯ ಕಿಂಕರಾಃ ॥ ೮೫ ॥

ಶಚ್ಯೈ ದೇವ್ಯೈ ದದುಃ ಪ್ರೀತ್ಯಾ ಸಹಸ್ರಾಕ್ಷೇಣ ಚೋದಿತಾಃ |
ಪ್ರಗೃಹ್ಯ ತಾನಿ ಪುಷ್ಪಾಣಿ ಶಚೀದೇವೀ ಸುಮಧ್ಯಮಾ ॥ ೮೬ ॥

---

೮೧. ಈ ದೇವಶ್ರೇಷ್ಠನಾದ ಜನಾರ್ದನನು ಅಮರಾವತಿಯನ್ನು ಪ್ರವೇಶಿಸಿ ಹೆಂಡತಿಯೊಡನೆ ಗರುಡನಿಂದ ಕೆಳಕ್ಕಿಳಿದು ದೇವಮಾತೆಯಾದ ಅದಿತಿಗೆ ನಮಸ್ಕರಿಸಿದನು.

೮೨-೮೮. ಪುತ್ರನಲ್ಲಿ ಪ್ರೀತಿಯುಳ್ಳ ಆ ಅದಿತಿಯು ತೋಳುಗಳಿಂದ ಈ ಕೃಷ್ಣನನ್ನು ಬಾಚಿತಬ್ಬಿಕೊಂಡು ಉತ್ತಮವಾದ ಆಸನದಲ್ಲಿ ಕೂರಿಸಿ ಭಕ್ತಿಯಿಂದ ಪೂಜಿಸಿದಳು. ಆದಿತ್ಯರು, ವಸುಗಳು, ರುದ್ರರು, ಇವರೇ ಮುಂತಾದವರು ಇಂದ್ರನನ್ನು ಮುಂದುಮಾಡಿಕೊಂಡು ತಮ್ಮ ಯೋಗ್ಯತೆಗೆ ತಕ್ಕಂತೆ ಆ ಪರಮ ಪುರುಷೋತ್ತಮನನ್ನು ಪೂಜಿಸಿದರು. ಆಗ ಯಶಸ್ವಿನಿಯಾದ ಸತ್ಯಭಾಮೆಯು ಶಚಿಯ ಮನೆಗೆ ಹೋದಳು. ಆ ಶಚೀದೇವಿಯು ಆ ಸತ್ಯಭಾಮೆಯನ್ನು ಒಳ್ಳೆಯ ಆಸನದಲ್ಲಿ ಕೂರಿಸಿ ಪೂಜಿಸಿದಳು. ಆಗ ಆಳುಗಳು ಇಂದ್ರನ ಮಾತಿನಂತೆ ಪಾರಿಜಾತದ ಹೂಗಳನ್ನು ಶಚೀದೇವಿಗೆ ಕೊಟ್ಟರು. ಸುಂದರಿಯಾದ ಶಚೀದೇವಿಯು ಆ ಹೂಗಳನ್ನು ತೆಗೆದುಕೊಂಡು ತನ್ನ ನಿರ್ಮಲವಾದ ಕಪ್ಪಾದ

ನೀಲನಿರ್ಮಲಕೇಶೇ ಚ ಬಬಂಧ ಸ್ವಸ್ಯ ಮೂರ್ಧನಿ ।
ಅವಮಾನ್ಯ ತದಾ ತತ್ರ ಸತ್ಯಭಾಮಾಂ ಯಶಸ್ವಿನೀಂ ॥ ೮೭ ॥

ಅನರ್ಹಾ ಮಾನುಷೀ ಚೇಯಂ ದೇವಾರ್ಹಂ ಕುಸುಮಂ ಶುಭಂ ।
ಇತಿ ಕೃತ್ವಾ ಮತಿಂ ತಸ್ಯೈ ನ ದದೌ ಕುಸುಮಾನಿ ಸಾ ॥ ೮೮ ॥

ವಿನಿಷ್ಕ್ರಮ್ಯ ಗೃಹಾತ್ತಸ್ಮಾತ್ಸತ್ಯಾ ಕೋಪಸಮನ್ವಿತಾ ।
ಸಮೇತ್ಯ ಕೃಷ್ಣಂ ಭರ್ತಾರಮುವಾಚ ಕಮಲೇಕ್ಷಣಾ ॥ ೮೯ ॥

॥ ಸತ್ಯೋವಾಚ ॥

ಏಷಾ ಶಚೀ ಯದುಶ್ರೇಷ್ಠ ಪಾರಿಜಾತೇನ ಗರ್ವಿತಾ ।
ಅದತ್ವಾ ಮಮ ಗೋವಿಂದ ದಧಾರ ಸ್ವಸ್ಯ ಮೂರ್ಧನಿ ॥ ೯೦ ॥

॥ ಮಹಾದೇವ ಉವಾಚ ॥

ಸ ತಯಾ ಭಾಷಿತಂ ಶ್ರುತ್ವಾ ವಾಸುದೇವೋ ಮಹಾಬಲಃ ।
ಉತ್ಪಾಟ್ಯ ಪಾರಿಜಾತಂ ತು ನಿವೇಶ್ಯ ಗರುಡೋಪರಿ ॥ ೯೧ ॥

---

ನುಣ್ಣಗೆ ಇರುವ ತಲೆಗೂದಲಿನಲ್ಲಿ ಮುಡಿದುಕೊಂಡಳು. ಈ ಸತ್ಯಭಾಮೆಯು ಮನುಷ್ಯೆಯು. ಈ ಉತ್ತಮವಾದ ದೇವತೆಗಳ ಹೂವನ್ನು ಮುಡಿದುಕೊಳ್ಳಲು ಅರ್ಹಳಲ್ಲ. ಎಂದು ಮನಸ್ಸುಮಾಡಿಕೊಂಡು ಆ ಹೂವನ್ನು ಸತ್ಯಭಾಮೆಯು ಅಲ್ಲಿಯೇ ಇದ್ದರೂ ಕೊಡದೆ ತಾನೇ ಮುಡಿದು ಕೊಂಡಳು.

೮೯. ಆಗ ಸತ್ಯಭಾಮೆಗೆ ಕೋಪಬಂದು ಆ ಶಚಿಯ ಮನೆಯಿಂದ ಹೊರಟು ಗಂಡನಾದ ಕೃಷ್ಣನ ಬಳಿಗೆ ಬಂದು ಇಂತೆಂದಳು.

೯೦. ಸತ್ಯೆಯು ಹೇಳಿದಳು—ಎಲೈ ಯದುಶ್ರೇಷ್ಠನಾದ ಕೃಷ್ಣನೆ! ಈ ಶಚೀದೇವಿಯು ಪಾರಿಜಾತದ ಹೂವಿನಿಂದ ಗರ್ವವನ್ನು ಹೊಂದಿದ್ದಾಳೆ. ಅಳು ನನ್ನೆದುರಿಗೆ ಅದನ್ನು ತಂದಾಗ ನನಗೆ ಕೊಡದೇನೆ ತನ್ನ ತಲೆಗೆ ಮುಡಿದು ಕೊಂಡಳು.

೯೧-೯೨. ಮಹಾದೇವನು ಹೇಳಿದನು—ಮಹಾಬಲಿಷ್ಠನಾದ ವಾಸುದೇವನು ಆ ಸತ್ಯೆಯು ಹೇಳಿದುದನ್ನು ಕೇಳಿ ಆ ಪಾರಿಜಾತ ಮರವನ್ನು ಕಿತ್ತು

ಆರುಹ್ಯ ಸತ್ಯಯಾ ತೂರ್ಣಂ ವೈನತೇಯಂ ಮಹಾಬಲಂ ।
ಪ್ರಯಯೌ ದ್ವಾರಕಾಂ ರಮ್ಯಾಂ ನಗರೀಂ ದೇವಕೀಸುತಃ ॥ ೯೨ ॥

ತತಃ ಕೋಪಸಮಾವಿಷ್ಟೋ ದೇವರಾಜಃ ಶತಕ್ರತುಃ ।
ರುದ್ರೈರ್ವಸುಭಿರಾದಿತ್ಯೈಃ ಸಾಧ್ಯೈಶ್ಚ ಮರುತಾಂ ಗಣೈಃ ॥ ೯೩ ॥

ಐರಾವತಂ ಸಮಾರುಹ್ಯ ಯಯೌ ಯುದ್ಧಾಯ ಕೇಶವಂ ।
ತತೋ ದೇವಗಣಾಸ್ಸರ್ವೇ ಪರಿವಾರ್ಯ ಜನಾರ್ದನಂ ॥ ೯೪ ॥

ವವೃಷುಃ ಶಸ್ತ್ರವರ್ಷಾಣಿ ಮೇಘಾ ಇವ ಮಹಾಚಲಂ ।
ಕೃಷ್ಣಶ್ಚಿಚ್ಛೇದ ಚಕ್ರೇಣ ತಾನ್ಯಸ್ತ್ರಾಣಿ ದಿವೌಕಸಾಂ ॥ ೯೫ ॥

ವೈನತೇಯಸ್ತು ಸಂಕ್ರುದ್ಧಃ ಪಕ್ಷವಾತೇನ ವೀರ್ಯವಾನ್ ।
ಪಾತಯಾಮಾಸ ತಾನ್ ದೇವಾನ್ ತಾಳಾನಿವ ಮಹಾನಿಲಃ ॥ ೯೬ ॥

---

ಗರುಡನ ಮೇಲೆ ಇಟ್ಟು ತಾನೂ ಹತ್ತಿಕೊಂಡು ಆ ಸತ್ಯೆಯನ್ನೂ ಹತ್ತಿಸಿ ಉತ್ತಮೋತ್ತಮವಾದ ದ್ವಾರಕೆಗೆ ಬಂದನು.

೯೩-೯೫. ಆಗ ದೇವರಾಜನಾದ ಇಂದ್ರನಿಗೆ ಕೋಪವು ಬಂದು ರುದ್ರರು, ವಸುಗಳು, ಆದಿತ್ಯರು, ಸಾಧ್ಯರು, ಮರುತ್ತುಗಳು, ಇವರಿಂದ ಕೂಡಿಕೊಂಡು ಐರಾವತದ ಮೇಲೆ ಕುಳಿತುಕೊಂಡು ಕೇಶವನೊಡನೆ ಯುದ್ಧಕ್ಕೆ ಬಂದನು. ಆಗ ದೇವತೆಗಳೆಲ್ಲರೂ ಜನಾರ್ದನನ್ನು ಸುತ್ತುವರಿದುಕೊಂಡು ಮೇಘಗಳು ದೊಡ್ಡ ಬೆಟ್ಟದ ಮೇಲೆ ಮಳೆಯನ್ನು ಸುರಿಸುವಂತೆ ಶಸ್ತ್ರಗಳನ್ನು ಸುರಿಸಿದರು ಕೃಷ್ಣನು ಅವನ್ನು ಸುಲಭವಾಗಿ ಕತ್ತರಿಸಿಬಿಟ್ಟನು.

೯೬. ಗರುಡನೂ ಕೂಡ ಕೋಪಗೊಂಡು ತನ್ನ ರೆಕ್ಕೆಯ ಗಾಳಿಯಿಂದಲೇ ಅನೇಕ ಜನ ದೇವತೆಗಳನ್ನು ಬಿರುಗಾಳಿಯು ತಾಳ ಫಲವನ್ನು ಬೀಳಿಸುವಂತೆ ಬೀಳಿಸಿದನು.

ತತಃ ಕ್ರುದ್ಧಸ್ಸಹಸ್ರಾಕ್ಷೋ ದೇವಾನಾಮೀಶ್ವರಃ ಪ್ರಭುಃ ।
ಮುಮೋಚ ಸಹಸಾ ದೀಪ್ತಂ ವಜ್ರಂ ಕೃಷ್ಣಜಿಘಾಂಸಯಾ ॥ ೯೭ ॥

ಜಗ್ರಾಹ ಕೃಷ್ಣಸ್ತದ್ವಜ್ರಂ ಹಸ್ತೇನೈಕೇನ ಲೀಲಯಾ ।
ತತೋ ಭೀತಃ ಸಹಸ್ರಾಕ್ಷೋ ನಾಗೇಂದ್ರಾದವರುಹ್ಯ ಸಃ ॥ ೯೮ ॥

ಪ್ರಾಂಜಲಿಃ ಪುರತಃ ಸ್ಥಿತ್ವಾ ನಮಸ್ಕೃತ್ಯ ಜನಾರ್ದನಂ ।
ಪ್ರಾಹ ಗದ್ಗದಯಾ ವಾಚಾ ಸ್ತುತ್ವಾ ಸ್ತುತಿಭಿರೇವ ಚ ॥ ೯೯ ॥

॥ ಇಂದ್ರ ಉವಾಚ ॥

ದೇವಯೋಗ್ಯೋ ಹ್ಯಯಂ ಕೃಷ್ಣ ಪಾರಿಜಾತಸ್ತ್ವಯಾ ಪುರಾ ।
ದತ್ತೋ ಮಮ ಸುರಾಣಾಂ ಚ ಕಥಂ ಸ್ಥಾಸ್ಯತಿ ಮಾನುಷೇ ॥ ೧೦೦ ॥

॥ ಮಹಾದೇವ ಉವಾಚ ॥

ತತಃ ಪ್ರೋವಾಚ ಭಗವಾನ್ ಸಹಸ್ರಾಕ್ಷಮುಪಸ್ಥಿತಂ ॥ ೧೦೧ ॥

---

೯೭–೯೯. ದೇವತೆಗಳ ಒಡೆಯನಾದ ಇಂದ್ರನು ಕೋಪಗೊಂಡು ಪ್ರಜ್ವಲಿಸುತ್ತಿರುವ ವಜ್ರಾಯುಧವನ್ನು ಕೃಷ್ಣನನ್ನು ಕೊಲ್ಲಲು ಬಿಟ್ಟನು. ಬಲಶಾಲಿಯಾದ ಕೃಷ್ಣನು ಒಂದೇ ಕೈಯ್ಯಿಂದ ಆ ವಜ್ರವನ್ನು ಹಿಡಿದುಕೊಂಡನು. ಆಗ ದೇವೇಂದ್ರನು ಹೆದರಿ ಐರಾವತದಿಂದ ಕೆಳಕ್ಕೆ ಇಳಿದು ಕೃಷ್ಣನಿಗೆ ನಮಸ್ಕರಿಸಿ ಕೈಮುಗಿದುಕೊಂಡು ಸ್ತುತಿಸುತ್ತಾ ಇಂತೆಂದನು.

೧೦೦. ಇಂದ್ರನು ಹೇಳಿದನು—ಎಲೈ ಕೃಷ್ಣನೆ! ಈ ಪಾರಿಜಾತವನ್ನು ದೇವತೆಗಳಿಗೆ ಮಾತ್ರವೆಂದು ನೀನು ಹಿಂದೆ ಕೊಟ್ಟಿದ್ದೀಯೆ. ಈಗ ಮನುಷ್ಯರಲ್ಲಿ ಅದು ಇರಲು ಸಾಧ್ಯವಾಗುತ್ತದೆಯೆ? ಅದಾಗುವುದಿಲ್ಲ.

೧೦೧. ಮಹಾದೇವನು ಹೇಳಿದನು—ಆಗ ಸ್ವಾಮಿಯಾದ ಕೃಷ್ಣನು ಎದುರಿಗಿರುವ ಇಂದ್ರನನ್ನು ಕುರಿತು ಇಂತೆಂದು ಹೇಳಿದನು.

॥ ಕೃಷ್ಣ ಉವಾಚ ॥

**ಶಚ್ಯಾವಮಾನಿತಾ ಸತ್ಯಾ ತವ ಗೇಹೇ ಸುರೇಶ್ವರ ।**
**ಅದತ್ವಾ ಪಾರಿಜಾತಾನಿ ಸತ್ಯಾಯೈ ಸಾ ಪುಲೋಮಜಾ ॥ ೧೦೨ ॥**

**ಸ್ವಯಮೇವ ಸ್ವಶಿರಸಿ ಧಾರಯಾಮಾಸ ತೇ ಪ್ರಿಯಾ ।**
**ಅಸ್ಯಾ ನಿಮಿತ್ತಂ ದೇವೇಂದ್ರ ಪಾರಿಜಾತೋ ಹೃತೋ ಮಯಾ ॥ ೧೦೩ ॥**

**ಅಸ್ಯೈ ಪ್ರತಿಶ್ರುತಂ ದತ್ತಂ ಮಯಾ ಸುರಗಣೇಶ್ವರ ।**
**ತವ ಗೇಹೇ ಪಾರಿಜಾತಂ ಸ್ಥಾಪಯಾಮೀತಿ ವಾಸವ ॥ ೧೦೪ ॥**

**ತಸ್ಮಾದದ್ಯ ನ ದಾತವ್ಯಃ ಪಾರಿಜಾತಃ ಸುರೇಶ್ವರ ।**
**ಮಾನವಾನಾಂ ಹಿತಾರ್ಥಾಯ ಪ್ರಾಪಯಿಷ್ಯಾಮಿ ಭೂತಲೇ ॥ ೧೦೫ ॥**

**ತಾವತ್ತಿಷ್ಠತು ದೇವೇಂದ್ರ ಪಾರಿಜಾತೋ ಮಮಾಲಯೇ ।**
**ಮಯಿ ಸ್ವರ್ಗಂ ಗತೇ ಶಕ್ರ ಗೃಹಾಣ ತ್ವಂ ಯಥೇಚ್ಛಯಾ ॥ ೧೦೬ ॥**

---

೧೦೨–೧೦೩. ಕೃಷ್ಣನು ಹೇಳಿದನು—ಎಲೈ ದೇವೇಂದ್ರನೆ! ಶಚಿಯು ನಿನ್ನ ಮನೆಯಲ್ಲಿ ನನ್ನ ಹೆಂಡತಿಯಾದ ಸತ್ಯಭಾಮೆಯನ್ನು ಅವಮಾನಗೊಳಿಸಿದಳು ಆ ಶಚಿಯು ನಿನ್ನ ಮನೆಗೆ ಸತ್ಯಭಾಮೆಯು ಬಂದಿದ್ದಾಗ ಆಕೆಗೆ ಪಾರಿಜಾತದ ಹೂವನ್ನು ಕೊಡದೆ ಅವಮಾನ ಪಡಿಸಿ ತಾನೇ ತಲೆಗೆ ಮುಡಿದುಕೊಂಡಳು. ಅದಕ್ಕೋಸ್ಕರವಾಗಿ ಈ ಪಾರಿಜಾತವನ್ನು ತೆಗೆದುಕೊಂಡು ಹೋಗುತ್ತಿದ್ದೇನೆ.

೧೦೪. ನಾನು ಆಕೆಗೆ ನಿನ್ನ ಮನೆಯಲ್ಲಿಯೇ ಆ ಪಾರಿಜಾತವನ್ನು ಸ್ಥಾಪಿಸುತ್ತೇನೆ ಎಂದು ಪ್ರತಿಜ್ಞೆಮಾಡಿ ಮಾತುಕೊಟ್ಟೆನು. ಅದಕ್ಕೋಸ್ಕರವಾಗಿ ಅದನ್ನು ತೆಗೆದುಕೊಂಡಿದ್ದೇನೆ.

೧೦೫. ಆದ್ದರಿಂದ ಆ ಪಾರಿಜಾತವನ್ನು ಈಗ ಕೊಡುವುದಿಲ್ಲ. ಅದನ್ನು ಮಾನವರ ಹಿತಕ್ಕೋಸ್ಕರವೇ ಭೂಮಿಗೆ ತೆಗೆದುಕೊಂಡು ಹೋಗುತ್ತೇನೆ.

೧೦೬. ಆದ್ದರಿಂದ ಈ ಪಾರಿಜಾತವು ಈಗ ನನ್ನ ಮನೆಯಲ್ಲಿರಲಿ. ನಾನು ಸ್ವರ್ಗಕ್ಕೆ ಹೋದಮೇಲೆ ಅದನ್ನು ನೀನು ತೆಗೆದುಕೊಂಡು ಹೋಗಬಹುದು.

|| ಮಹಾದೇವ ಉವಾಚ ||

ಏವಮುಕ್ತ್ವಾ ಯದುಶ್ರೇಷ್ಠಃ ತಸ್ಮೈ ವಜ್ರಂ ದದೌ ಸ್ವಯಂ ।
ಏವಮಸ್ತ್ವಿತಿ ಗೋವಿಂದಂ ನಮಸ್ಕೃತ್ಯ ಚ ವಜ್ರಭೃತ್ || ೧೦೭ ||

ಪ್ರಯಯೌ ಸ್ವಪುರಂ ದಿವ್ಯಂ ಸಹ ದೇವಗಣೈರ್ವೃತಃ ।
ಕೃಷ್ಣೋಽಪಿ ಸತ್ಯಯಾ ದೇವ್ಯಾ ಗರುಡೋಪರಿ ಸಂಸ್ಥಿತಃ || ೧೦೮ ||

ಸಂಸ್ತೂಯಮಾನೋ ಮುನಿಭಿಃ ದ್ವಾರವತ್ಯಾಂ ವಿವೇಶ ಹ ।
ಸತ್ಯಾಯಾ ನಿಕಟಂ ಸ್ಥಾಪ್ಯ ಪಾರಿಜಾತಂ ಸುರದ್ರುಮಂ || ೧೦೯ ||

ರಮಯಾಮಾಸ ಭಾರ್ಯಾಭಿಃ ಸರ್ವಾಭಿಸ್ಸರ್ವಗೋ ಹರಿಃ ।
ನಿಶಾಸು ತಾಸಾಂ ಸರ್ವಾಸಾಂ ಗೇಹೇಷು ಮಧುಸೂದನಃ
ವಿಶ್ವರೂಪಧರಃ ಶ್ರೀಮಾನ್ ಉವಾಸ ಸ ಸುಖಪ್ರದಃ || ೧೧೦ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ಕೃಷ್ಣ ಚರಿತೇ ವಾಸುದೇವ ವಿವಾಹಾದಿ ಚರಿತ ಕಥನಂ ನಾಮ ಷಟ್ಸಪ್ತತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೦೭–೧೧೦. ಮಹಾದೇವನು ಹೇಳಿದನು—ಈ ಕೃಷ್ಣನು ಹೀಗೆ ಹೇಳಿ ಅವನ ವಜ್ರಾಯುಧವನ್ನು ಹಿಂದಕ್ಕೆ ಕೊಟ್ಟುಬಿಟ್ಟನು. ದೇವೇಂದ್ರನೂ ಕೂಡ ಹಾಗೆಯೇ ಆಗಲೆಂದು ಹೇಳಿ ಆ ಕೃಷ್ಣನಿಗೆ ನಮಸ್ಕರಿಸಿ ದೇವತೆಗಳೊಡನೆ ಹೊರಟುಹೋದನು. ಶ್ರೀ ಕೃಷ್ಣನು ಸತ್ಯೆಯೊಡನೆ ಗರುಡನ ಮೇಲೆ ಕುಳಿತು ಕೊಂಡು ಮುನಿಗಳಿಂದ ಸ್ತುತಿಸಲ್ಪಡುತ್ತಾ ದ್ವಾರಕೆಗೆ ಬಂದನು. ಹರಿಯು ಆ ಪಾರಿಜಾತದ ಮರವನ್ನು ಸತ್ಯಭಾಮೆಯ ಹತ್ತಿರವಿಟ್ಟನು. ಮತ್ತು ಎಲ್ಲಾ ಕಡೆ ಯಲ್ಲಿಯೂ ತಾನಿರುತ್ತಾ ಎಲ್ಲಾ ಹೆಂಡರೊಡನೆಯೂ ಕ್ರೀಡಿಸುತ್ತಿದ್ದನು. ಕೃಷ್ಣನು ವಿಶ್ವರೂಪವನ್ನು ಹೊಂದಿ ಎಲ್ಲಾ ಹೆಂಡತಿಯರ ಮನೆಯಲ್ಲಿಯೂ ರಾತ್ರಿಯ ವೇಳೆಯಲ್ಲಿರುತ್ತಾ ಅವರೊಡನೆ ಸುಖಿಸುತ್ತಾ ಇದ್ದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀಕೃಷ್ಣಚರಿತ್ರೆಯಲ್ಲಿ ವಾಸುದೇವನ ವಿವಾಹವೇ ಮುಂತಾದ ಚರಿತ ಕಥನವೆಂಬ ಇನ್ನೂರ ಎಪ್ಪತ್ತಾರನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-x-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಸಪ್ತಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ||



|| ಶ್ರೀ ರುದ್ರ ಉವಾಚ ||

ರುಕ್ಮಿಣ್ಯಾಂ ಕೃಷ್ಣಸ್ಯ ಪ್ರದ್ಯುಮ್ನೋ ಮದನಾಂಶೇನ ಜಜ್ಞೀ || ೧ ||

ಅಸೌ ಮದನಸಂಭೂತೋ ಮಹಾಬಲಃ ಶಂಬರಂ ಜಘ್ನಿವಾನ್ || ೨ ||

ತಸ್ಯ ರುಕ್ಮಿಣಃ ಸುತಾಯಾಮನಿರುದ್ಧೋ ಜಜ್ಞೀ || ೩ ||

ಸೋಽಪಿ ಬಾಣಪುತ್ರೀಮುಷಾಂ ನಾಮ ಕನ್ಯಾಮುಪಯೇಮೇ || ೪ ||

---

## ಇನ್ನೂರ ಎಪ್ಪತ್ತೇಳನೆಯ ಅಧ್ಯಾಯವು



೧-೪. ಶ್ರೀ ರುದ್ರನು ಹೇಳಿದನು—ಕೃಷ್ಣನಿಗೆ ರುಕ್ಮಿಣಿಯಲ್ಲಿ ಮದನನ ಅಂಶದಿಂದ ಪ್ರದ್ಯುಮ್ನನೆಂಬ ಮಗನು ಹುಟ್ಟಿದನು. ಮದನನ ಅಂಶವಾದ ಈತನು ಬಹು ಬಲಿಷ್ಠನಾಗಿ ಶಂಬರಾಸುರನನ್ನು ಕೊಂದನು. ಆ ಪ್ರದ್ಯುಮ್ನನಿಗೆ ರುಕ್ಮಿಯ ಮಗಳಲ್ಲಿ ಅನಿರುದ್ಧನೆಂಬುವನು ಹುಟ್ಟಿದನು ಅವನು ಬಾಣಾಸುರನ ಮಗಳಾದ ಉಷೆಯನ್ನು ಮದುವೆಯಾದನು.

ಸಾ ತು ಸ್ವಪ್ನೇ ನೀಲೋತ್ಪಲದಳಶ್ಯಾಮಂ ಪುಂಡರೀಕನಿಭೇಕ್ಷಣಂ ಮಹಾಬಾಹುಂ ವಿಚಿತ್ರಾಭರಣೋಪೇತಂ ಷೋಡಶಸಮಾವಯಸ್ಕಂ ರಕ್ತಾರವಿಂದವಕ್ತ್ರಂ ಯಥಾವದುಪಭುಜ್ಯ ಪ್ರಬುಧ್ಯ ತಂ ಪುರತೋ ನ ದೃಷ್ಟ್ವಾ ಮದನೇನ ಪೀಡಿತಾ ಭ್ರಾನ್ತಚಿತ್ತಾ ಮಾಂ ತ್ಯಕ್ತ್ವಾ ಕ್ವಾಸಿ ಕ್ವಯಾಸೀತಿ ಬಹುಧಾ ವಿಲಲಾಪ ॥ ೫ ॥

ತತಸ್ತಸ್ಯಾಃ ಸಖೀ ಚಿತ್ರಲೇಖೇತಿ ನಾಮ ಕನ್ಯಾ ತಾದೃಶೀಮವಸ್ಥಾಂ ಗತಾಂ ವಿಲೋಕ್ಯ ಕಿಂ ನಿಮಿತ್ತಂ ಭ್ರಾನ್ತಚಿತ್ತಾಸೀತಿ ಪಪ್ರಚ್ಛ ॥ ೬ ॥

ಸಾಪಿ ಸ್ವಪ್ನಲಬ್ಧಂ ಪತಿಂ ಯಥಾವದಾಚಷ್ಟ ॥ ೭ ॥

ಸಾಪಿ ಸಕಲದೇವಮಾನುಷಾದಿಶ್ರೇಷ್ಠಾನ್ ಪಟೇ ವಿಲಖ್ಯ ತದಸ್ಯೈ ದರ್ಶಯಾಮಾಸ ॥ ೮ ॥

---

೫ ಆ ಉಷೆಯು ಒಂದುಸಾರಿ ನೀಲೋತ್ಪಲದಂತೆ ನೀಲಿಯ ಬಣ್ಣವುಳ್ಳ, ಪುಂಡರೀಕದಂತೆ ಕಣ್ಣುಗಳುಳ್ಳ, ಮಹಾಬಾಹುವಾದ, ಬಗೆಬಗೆಯ ಆಭರಣ ಗಳನ್ನು ತೊಟ್ಟಿರುವ, ಹದಿನಾರು ವರ್ಷ ವಯಸ್ಸುಳ್ಳ, ಕೆಂಪಾಗಿರುವ ಮುಖವುಳ್ಳ, ಒಬ್ಬ ಪುರುಷನನ್ನು ಸ್ವಪ್ನದಲ್ಲಿ ಅನುಭವಿಸಿ ಎಚ್ಚರಗೊಂಡು ನೋಡಲು ಅವನನ್ನು ಎದುರಿಗೆ ಕಾಣದೆ ಮನ್ಮಥ ಬಾಧೆಗೊಳಗಾಗಿ ಮನಸ್ಸಿನಲ್ಲಿ ಕಳವಳ ಹುಟ್ಟಿ ಎಲ್ಲಿ ದ್ದೀಯೆ? ಎಲ್ಲಿಗೆ ಹೋದೆ? ಎಂಬ ಇವೇ ಮೊದಲಾದ ಮಾತುಗಳನ್ನಾಡಲು ಮೊದಲುಮಾಡಿದಳು.

೬. ಆಗ ಆ ಉಷೆಯ ಸಖಿಯಾದ ಚಿತ್ರಲೇಖೆ ಎಂಬುವಳು ಆ ಉಷೆಯ ಆ ರೀತಿಯಾದ ಅವಸ್ಥೆಯನ್ನು ನೋಡಿ ನೀನು ಯಾತಕ್ಕೋಸ್ಕರ ಕಳವಳ ಪಡುತ್ತೀಯೆ? ಎಂಬುದಾಗಿ ಕೇಳಿದಳು

೭. ಆ ಉಷೆಯು ಸ್ವಪ್ನದಲ್ಲಿ ಕಂಡಿದ್ದ ಗಂಡನ ವಿಷಯವನ್ನು ತಾನು ನೋಡಿದಂತೆ ಸರಿಯಾಗಿ ಹೇಳಿದಳು.

೮. ಆ ಚಿತ್ರಲೇಖೆಯು ದೇವಶ್ರೇಷ್ಠ ಮನುಷ್ಯ ಶ್ರೇಷ್ಠರೇ ಮುಂತಾ ದವರನ್ನೆಲ್ಲಾ ಚಿತ್ರದಲ್ಲಿ ಬರೆದು ಆಕೆಗೆ ತೋರಿಸಿದಳು.

ಯದುವಂಶಸಂಭೂತಾನ್ ಕೃಷ್ಣಸಂಕರ್ಷಣಾದೀನ್ ಪ್ರದ್ಯುಮ್ನಾ ನಿರುದ್ಧಾದೀನಪಿ ಸಮ್ಯಜ್ಞೇವೇದಯಾಮಾಸ ‖ ೯ ‖

ಸಾ ತೇಷಾಂ ಕೃಷ್ಣಮನುಮಾಯ ಪ್ರದ್ಯುಮ್ನಾ ನಂತರಮನಿರುದ್ಧಂ ದೃಷ್ಟ್ವಾ ಸ ಇತ್ಯೇಷ ಇತ್ಯಾಲಿಲಿಂಗಂ ‖ ೧೦ ‖

ಅಥ ಚಿತ್ರಲೇಖಾ ಬಹ್ವೀಭಿರ್ಮಾಯಾವತೀಭಿಃ ದೈತ್ಯಸ್ತ್ರೀಭಿಃ ದ್ವಾರವತೀಂ ಗತ್ವಾ ರಾತ್ರಾವನ್ತಃಪುರೇ ಸುಷುಪ್ತಮನಿರುದ್ಧಂ ದೃಷ್ಟ್ವಾ ಗೃಹೀತ್ವಾ ಮೋಹಯಿತ್ವಾ ಬಾಣಸ್ಯಾಂತಃ ಪುರೇ ಚೈತ್ಯಪ್ರಾಸಾದೇ ತಸ್ಯಾ ಬಾಣಪುತ್ರ್ಯಾಃ ಶಯ್ಯಾಯಾಂ ಚಿಕ್ಷೇಪ ‖ ೧೧ ‖

ಸೋಽಪಿ ಪ್ರಬುದ್ಧೋಽತಿರಮ್ಯೇ ಶ್ಲಕ್ಷ್ಣಪರ್ಯಂಕೇ ಸಂಸ್ಥಿತಾಮುಷಾಂ ಸರ್ವಲಕ್ಷಣಲಕ್ಷಿತಾಂ ವಿಚಿತ್ರಾಭರಣವಾಸೋಗಂಧಮಾಲ್ಯಾಲಂಕೃತಾಂ

---

೯. ಅನಂತರ ಯದುವಂಶದವರಾದ ಕೃಷ್ಣ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧನೇ ಮುಂತಾದವರನ್ನು ಬರೆದು ತೋರಿಸಿದಳು.

೧೦. ಆಕೆಯು ಕೃಷ್ಣನನ್ನು ನೋಡಿ ಇವನೇ ಇರಬಹುದೆಂದು ಸಂದೇಹಿಸಿ ಅನಂತರ ಪ್ರದ್ಯುಮ್ನನನ್ನು ನೋಡಿ ಆಮೇಲೆ ಅನಿರುದ್ಧನನ್ನು ನೋಡಿ ಅವನೇ ಇವನೆಂದು ಆಲಂಗಿಸಿಕೊಂಡಳು.

೧೧. ಅನಂತರ ಚಿತ್ರಲೇಖೆಯು ಅನೇಕ ಜನ ಮಾಯಾವತಿಯರನ್ನು ಕರೆದುಕೊಂಡು ದ್ವಾರಕೆಗೆ ಹೋಗಿ ರಾತ್ರಿಯಲ್ಲಿ ಅಂತಃಪುರದಲ್ಲಿ ಮಲಗಿದ್ದ ಅನಿರುದ್ಧನನ್ನು ನೋಡಿ ಅವನಿಗೆ ಮೋಹಬರುವಂತೆ (ಜ್ಞಾನವಿಲ್ಲದಿರುವಂತೆ) ಮಾಡಿ ಬಾಣನ ಅಂತಃಪುರದಲ್ಲಿ ಚೈತ್ಯವೆಂಬ ಮಹಡಿಯಲ್ಲಿ ಮಲಗಿರುವ ಉಷೆಯ ಹಾಸಿಗೆಯಲ್ಲಿ ತಂದಿಟ್ಟಳು.

೧೨. ಆ ಅನಿರುದ್ಧನು ಎಚ್ಚೆತ್ತು ಮನೋಹರವಾಗಿರುವ ಹಾಸಿಗೆಯಲ್ಲಿ ಮಲಗಿರುವ, ಎಲ್ಲಾ ಲಕ್ಷಣಗಳಿಂದಲೂ ಕೂಡಿರುವ, ಅನೇಕ ಬಗೆಯ ಆಭರಣಗಳನ್ನು ಧರಿಸಿರುವ, ಗಂಧವನ್ನು ಪೂಸಿಕೊಂಡಿರುವ, ಹೂವನ್ನು ಮುಡಿದಿರುವ,

ಕಾಂಚನವರ್ಣಾಂ ಸುಕೇಶೀಂ ಸುಜಾತಸ್ತನೀಂ ದೃಷ್ಟ್ವಾ ಗಾಢಮಾಲಿಂಗ್ಯ ಕರಿಣೀಂ ಗಂಧಹಸ್ತೀವ ತಾಮತಿಪ್ರೀತಿಸಂಯುಕ್ತಾಂ ಯಥಾಸುಖಂ ರಮಯಾಮಾಸ ॥ ೧೨ ॥

ಏವಂ ಮಾಸಮಾತ್ರಂ ನಿರಂತರಂ ತಯಾನಿರುದ್ಧಂ ರಮಮಾಣಂ ಕದಾಚಿದಂತಃಪುರನಿವಾಸಿನ್ಯೋ ದೈತ್ಯವೃದ್ಧಾಃ ಸ್ತ್ರಿಯೋ ಜ್ಞಾತ್ವಾ ರಾಜ್ಞೇ ನಿವೇದಯಾಮಾಸುಃ ॥ ೧೩ ॥

ಸ ರಾಜಾ ಕ್ರೋಧತಾಮ್ರಾಕ್ಷಃ ಪರಂ ವಿಸ್ಮಯಂ ಗತ್ವಾ ತಮಿಹಾನಯ ತೇತ್ಯುಕ್ತ್ವಾ ಸ್ವಕಿಂಕರಾನ್ ಪ್ರೇಷಯಾಮಾಸ ॥ ೧೪ ॥

ತೇಪಿ ತೂರ್ಣಂ ನೃಪಪ್ರಾಸಾದಮಾರುಹ್ಯ ರಾಜಪುತ್ರ್ಯಾಃ ಶಯನೇ ಸಂಸ್ಥಿತಮನಿರುದ್ಧಂ ನಿಗ್ರಹೀತುಮಾಜಗ್ಮುಃ ॥ ೧೫ ॥

---

ಚಿನ್ನದ ಬಣ್ಣಕ್ಕಿರುವ, ಚೆನ್ನಾಗಿರುವ ಕೂದಲುಗಳುಳ್ಳ, ಮನೋಹರವಾದ ಸ್ತನಗಳುಳ್ಳ, ಉಷೆಯನ್ನು ನೋಡಿ ಗಾಢವಾಗಿ ಆಲಂಗಿಸಿಕೊಂಡು ಮದ್ದಾನೆಯು ಹೆಣ್ಣಾನೆಯೊಡನೆ ರಮಿಸುವಂತೆ ಸುಖವಾಗಿ ರಮಿಸಿದನು.

೧೩. ಈ ರೀತಿಯಾಗಿ ಅನಿರುದ್ಧನು ಒಂದುತಿಂಗಳವರೆಗೂ ಯಾವ ಆತಂಕವೂ ಇಲ್ಲದೆ ಅವಳೊಡನೆ ರಮಿಸುತ್ತಿದ್ದನು ಅನಂತರ ಅಂತಃಪುರದಲ್ಲಿ ರುವ ದೈತ್ಯಮುದುಕಿಯರು ಅವನನ್ನು ಒಂದು ಸಾರಿ ನೋಡಿ ಅದನ್ನು ತಿಳಿದು ರಾಜನಿಗೆ ಹೇಳಿದರು.

೧೪. ಆ ರಾಜನು ಕೋಪಗೊಂಡು ಆಶ್ಚರ್ಯಪಡುತ್ತ ಆಳುಗಳನ್ನು ಕುರಿತು ನೀವು ಹೋಗಿ ಅವನನ್ನು ಎಳೆದುಕೊಂಡು ಬನ್ನಿರಿ ಎಂದು ಅಪ್ಪಣೆಮಾಡಿದನು.

೧೫. ಆ ಆಳುಗಳು ರಾಜನ ಅರಮನೆಯ ಮಹಡಿಯನ್ನು ಹತ್ತಿ ಅಲ್ಲಿಗೆ ಹೋಗಿ ರಾಜಪುತ್ರಿಯ ಹಾಸಿಗೆಯಲ್ಲಿರುವ ಅನಿರುದ್ಧನನ್ನು ಹಿಡಿಯಲು ಬಂದರು.

ಸ ತಾನ್ ಸಮಾರಬ್ಧಾನ್ ದೃಷ್ಟ್ವಾ ಪ್ರಾಸಾದಸ್ತಂಭಮೇಕಂ ಹೇಲಯೋತ್ಪಾಟ್ಯ ನಿಯುತಸಂಖ್ಯಾಕಾನ್ ಕಿಂಕರಾನ್ ಮುಹೂರ್ತಮಾತ್ರೇಣೈವ ಸ್ತಂಭೇನ ಚೂರ್ಣಿತಗಾತ್ರಾನ್ ಚಕಾರ ॥ ೧೬ ॥

ಅಥ ದೈತ್ಯಪತಿರ್ನಿಹತಾನ್ ಸ್ವಕಿಂಕರಾನ್ ದೃಷ್ಟ್ವಾ ಕೌತೂಹಲಂ ಗತ್ವಾಸೌ ಶ್ರೀಕೃಷ್ಣಪೌತ್ರ ಇತಿ ದೇವರ್ಷಿಣಾ ಪ್ರೋಕ್ತೋ ಧನುರಾದಾಯ ಸ್ವಯಮೇವ ಅನಿರುದ್ಧಂ ಗ್ರಹೀತುಂ ತತ್ಸಮೀಪಮಾಜಗಾಮ ॥ ೧೭ ॥

ಅನಿರುದ್ಧೋಽಪಿ ಯೋದ್ಧುಮಾಯಾಂತಂ ಸಹಸ್ರಬಾಹುಂ ರಾಜಾನಂ ದೃಷ್ಟ್ವಾ ತತ್ಪರಿಘಂ ಭ್ರಾಮಯಿತ್ವಾ ಬಾಣಸ್ಯೋಪರಿಚಿಕ್ಷೇಪ ॥ ೧೮ ॥

ಅಥನಿರ್ಮುಕ್ತೇನ ಬಾಣೇನ ತಂ ಪರಿಘಂ ಚಿಚ್ಛೇದ ॥ ೧೯ ॥

---

೧೬. ಆ ಅನಿರುದ್ಧನು ಹಾಗೆ ಹಿಡಿಯುವುದಕ್ಕೆ ಆಳುಗಳು ಬಂದುದನ್ನು ನೋಡಿ ಅಲ್ಲಿರುವ ಮಹಡಿಯ ಕಂಬವೊಂದನ್ನು ಬಹು ಸರಾಗವಾಗಿಯೇ ಕಿತ್ತು ಕೊಂಡು ಸಾವಿರಾರು ಜನ ಆಳುಗಳನ್ನು ಒಂದು ಮುಹೂರ್ತದೊಳಗೆ ಅದರಿಂದ ಕೊಂದುಹಾಕಿದನು.

೧೭. ಆಗ ಬಾಣಾಸುರನು ತನ್ನ ಸೈನಿಕರನ್ನು ಆತನು ಕೊಂದುದನ್ನು ನೋಡಿ ಆಶ್ಚರ್ಯಪಡುತ್ತಿರಲು ನಾರದರು ಈತನು ಶ್ರೀ ಕೃಷ್ಣನ ಮೊಮ್ಮಗನೆಂದು ಹೇಳಲು ಆಗ ಧನುಸ್ಸನ್ನು ತೆಗೆದುಕೊಂಡು ತಾನೇ ಆತನನ್ನು ಹಿಡಿಯಲು ಅವನ ಬಳಿಗೆ ಹೋದನು.

೧೮. ಅನಿರುದ್ಧನೂ ಕೂಡ ಯುದ್ಧಮಾಡಲು ಬರುತ್ತಿರುವ, ಸಾವಿರ ತೋಳುಗಳುಳ್ಳ, ಆ ಬಾಣನನ್ನು ನೋಡಿ ತನ್ನ ಕೈಯ್ಯಲ್ಲಿದ್ದ ಪರಿಘವನ್ನು ಸುತ್ತಿಸಿ ಬಾಣನ ಮೇಲೆ ಎಸೆದನು.

೧೯. ಬಾಣನು ಬಾಣವನ್ನು ಬಿಟ್ಟು ಆ ಪರಿಘವನ್ನು ಕತ್ತರಿಸಿದನು.

ಅನಂತರಮುರಗಾಸ್ತ್ರೇಣಾನಿರುದ್ಧಂ ನಿಬಿಡಂ ಬದ್ಧ್ವಾ ಸ್ವಾಂತಃಪುರೇ ನಿವೇಶಯಾಮಾಸ || ೨೦ ||

ಅಥ ಕೃಷ್ಣೋಽಸ್ಯೈವಂವಿಧಮೇವ ದೇವರ್ಷಿಣಾ ಜ್ಞಾತ್ವಾ ಬಲದೇವ ಪ್ರದ್ಯುಮ್ನಸಹಿತಃ ಸ್ವಸೇನಯಾ ವಿಹಂಗಮೇಂದ್ರಮಾರುಹ್ಯ ತಸ್ಯ ಬಾಣಸ್ಯ ಭುಜವನಂ ಛೇತ್ತುಮಾಜಗಾಮ || ೨೧ ||

ಪುರಾ ಬಲಿಪುತ್ರೇಣ ಶಂಕರೋಽರ್ಚಿತಃ ಪ್ರಸನ್ನೋ ವರಂ ವೃಣೀಷ್ವೇತ್ಯುವಾಚ || ೨೨ ||

ತಮೀಶ್ವರಂ ಬಾಣೋ ಮಮ ಪುರದ್ವಾರಿ ರಕ್ಷಾರ್ಥಂ ಸರ್ವದೋಪವಿಶ್ಯ ಸಮಾಗತಂ ಪರಸೈನ್ಯಂ ಜಹೀತ್ಯೇವಂ ವರಮಯಾಚತ || ೨೩ ||

---

೨೦. ಅನಂತರ ಸರ್ಪಾಸ್ತ್ರದಿಂದ ಅನಿರುದ್ಧನನ್ನು ಬಲವಾಗಿ ಅಂಕಟ್ಟಿ ಅಂತಃಪುರದಲ್ಲಿಯೇ ಕಟ್ಟಿ ಸೆರೆಯಿಟ್ಟನು.

೨೧. ತ್ರಿಲೋಕ ಸಂಚಾರಿಯಾದ ನಾರದನು ಈ ಬಂಧನದ ವಿಷಯವನ್ನು ಕೃಷ್ಣನಿಗೆ ಹೇಳಲು ಕೃಷ್ಣನು ಬಲರಾಮ, ಪ್ರದ್ಯುಮ್ನರನ್ನು ಕರೆದುಕೊಂಡು ಸೇನೆಯನ್ನು ಹೊರಡಿಸಿಕೊಂಡು ತಾನು ಗರುಡನ ಮೇಲೆ ಕುಳಿತು ಆ ಬಾಣನ ಸಾವಿರಾರು ತೋಳುಗಳ ರೂಪವಾದ ಆ ವನವನ್ನು ಕತ್ತರಿಸಲು ಹೊರಟನು.

೨೨. ಈ ಬಲಿಪುತ್ರನಾದ ಬಾಣನು ಹಿಂದೆ ಈಶ್ವರನನ್ನು ಪೂಜಿಸಲು ಅವನು ಸಂತೋಷಪಟ್ಟು ವರವನ್ನು ಕೇಳಿಕೊ ಎಂದನು.

೨೩. ಬಾಣನು ಆ ಈಶ್ವರನನ್ನು ಕುರಿತು ಹಾಗಾದರೆ ನೀನು ನನ್ನ ಪಟ್ಟಣದ ಬಾಗಿಲಿನಲ್ಲಿದ್ದುಕೊಂಡು ನನ್ನ ಪಟ್ಟಣವನ್ನು ರಕ್ಷಿಸುತ್ತಾ ಅಲ್ಲಿಗೆ ಬಂದ ಶತ್ರುಸೈನ್ಯವನ್ನು ನಾಶಮಾಡು, ಎಂದು ವರವನ್ನು ಕೇಳಿಕೊಂಡನು.

ತಂ ತಥೇತ್ಯುಕ್ತ್ವಾ ಶಂಕರೋಽಪಿ ತಸ್ಯ ಪುರದ್ವಾರಿ ಸಾಯುಧಃ ಸಪುತ್ರಸ್ಸಗಣಃ ಸಮಾಸೀನಸ್ತಸ್ಮಿನ್ನೇವ ಕಾಲೇ ಬಹುಯಾದವಸೇನಯಾ ಸಮಾಗತಂ ವಾಸುದೇವಂ ದೃಷ್ಟ್ವಾ ವೃಷಮಾರುಹ್ಯ ಸರ್ವಾಯುಧೋಪೇತಃ ಸ್ವಪುತ್ರಗಣಸಂವೃತೋ ಯೋದ್ಧುಂ ನಿಶ್ಚಕ್ರಾಮ ॥ ೨೪ ॥

ಕೃಷ್ಣೋಽಪಿ ತಂ ಭೂತಪತಿಂ ಗಜಚರ್ಮಕಪಾಲಭಸ್ಮಧರಂ ಜ್ವಲಿತೋರಗಕಲ್ಪಂ ಪಿಂಗಲಂ ತ್ರಿಲೋಚನಂ ತ್ರಿಶೂಲಧರಂ ಸರ್ವಭೂತ ಗಣಸಂಹತಿಕರ್ತಾರಂ ಸರ್ವಭೂತಭಯಾವಹಂ ಸಂವರ್ತಾಗ್ನಿಪ್ರಭಂ ಪುತ್ರ ದ್ವಯಸಮನ್ವಿತಂ ಸಮಸ್ತಗಣಾವೃತಂ ತ್ರಿಪುರಾಂತಕಂ ದೃಷ್ಟ್ವಾ ಸೇನಾಂ ಸುದೂರೇ ಪೃಷ್ಠತೋ ನಿವೇಶ್ಯ ಬಲಭದ್ರಪ್ರದ್ಯುಮ್ನಸಹಿತಸ್ತೇನ ರುದ್ರೇಣ ಸಹ ಪ್ರಹಸನ್ನಿವ ಯೋದ್ಧುಮಾರೇಭೇ ॥ ೨೫ ॥

---

೨೪. ಶಂಕರನು ಬಾಣನಿಗೆ ಹಾಗೆಯೇ ಆಗಲೆಂದು ಹೇಳಿ ಆತನ ಪಟ್ಟಣದ ಬಾಗಿಲಿನಲ್ಲಿ ತನ್ನ ಮಕ್ಕಳು ಗಣ ಇವುಗಳೊಡನೆ ಇರುತ್ತ ಆ ಕಾಲದಲ್ಲಿ ಯುದ್ಧ ಕ್ಕೋಸ್ಕರ ಯಾದವ ಸೇನೆಯೊಡನೆ ಬಂದ ವಾಸುದೇವನನ್ನು ನೋಡಿ ತಾನು ಬಸವನ ಮೇಲೆ ಕುಳಿತು ಎಲ್ಲಾ ಆಯುಧಗಳನ್ನೂ ತೆಗೆದುಕೊಂಡು ಯುದ್ಧ ಮಾಡಲು ಹೊರಟನು.

೨೫. ಕೃಷ್ಣನು ಭೂತಗಳಿಗೆ ಒಡೆಯನಾದ, ಆನೆಯ ಚರ್ಮ ಕಪಾಲ ಭಸ್ಮಗಳನ್ನು ಧರಿಸಿರುವ, ಕೋಪಗೊಂಡ ಸರ್ಪದಂತಿರುವ, ಹೊಂಬಣ್ಣವುಳ್ಳ ಮೂರು ಕಣ್ಣುಗಳುಳ್ಳ, ತ್ರಿಶೂಲವನ್ನು ಧರಿಸಿರುವ, ಎಲ್ಲಾ ಪ್ರಾಣಿಗಳನ್ನೂ ನಾಶಮಾಡುವುದರಲ್ಲಿ ಮುಂದಾಳಾದ, ಎಲ್ಲಾ ಪ್ರಾಣಿಗಳಿಗೂ ಭಯಂಕರನಾದ, ಪ್ರಳಯ ಕಾಲದ ಅಗ್ನಿಯಂತೆ ತೇಜಸ್ಸುಳ್ಳ, ಗಣಪತಿ, ಮಹಾಸೇನರೆಂಬ ಇಬ್ಬರು ಮಕ್ಕಳುಗಳೊಡನೆ ಕೂಡಿದ, ಎಲ್ಲಾ ಗಣಗಳಿಂದ ಸುತ್ತುವರಿಯಲ್ಪಟ್ಟ, ತ್ರಿಪುರ ಗಳನ್ನು ನಾಶಮಾಡಿದ, ಆ ಶಂಕರನನ್ನು ನೋಡಿ ಸೇನೆಯನ್ನು ಹಿಂದೆಯೇ ದೂರ ದಲ್ಲಿ ನಿಲ್ಲಿಸಿ ಬಲರಾಮ ಪ್ರದ್ಯುಮ್ನರನ್ನು ಜೊತೆಯಲ್ಲಿ ಕರೆದುಕೊಂಡು ಆ ರುದ್ರ ನೊಡನೆ ನಗುತ್ತ ಯುದ್ಧಮಾಡಲು ಮೊದಲುಮಾಡಿದನು.

ಪ್ರಧನಂ ತದಭೂದ್ಘೋರಂ ಕೃಷ್ಣಶಂಕರಯೋಸ್ತದಾ ।
ಪಿನಾಕಶಾರ್ಙ್ಗನಿರ್ಮುಕ್ತೈರ್ಬಾಣೈಃ ಸಂವರ್ತಕೋಪಮೈಃ ॥ ೨೬ ॥

ರಾಮೋಽಪಿ ಗಜವಕ್ತ್ರೇಣ ಪ್ರದ್ಯುಮ್ನಃ ಷಣ್ಮುಖೇನ ಚ ।
ಯುಯುಧಾತೇ ಮಹಾವೀರ್ಯೌ ಸಿಂಹಾವಿವ ಬಲೋತ್ಕಟೌ ॥ ೨೭ ॥

ವಿನಾಯಕಃ ಸ್ವದಂತೇನ ಜಘಾನೋರಸಿ ಯಾದವಂ ।
ರಾಮೋ ಮುಸಲಮಾದಾಯ ತಸ್ಯ ದಂತಮತಾಡಯತ್ ॥ ೨೮ ॥

ನಿರ್ಭಿನ್ನದಂತಸ್ಸಹಸಾ ಪ್ರದುದ್ರಾವಾಖುವಾಹನಃ ।
ತದಾಪ್ರಭೃತಿ ಲೋಕೇಽಸ್ಮಿನ್ ದಂತಭಗ್ನೋ ಗಣೇಶ್ವರಃ ॥ ೨೯ ॥

ದೇವದಾನವಗಂಧರ್ವೈರೇಕದಂತ ಇತೀರಿತಃ ।
ಪ್ರದ್ಯುಮ್ನೇನ ಸಮಂ ಯುದ್ಧಂ ಚಕಾರ ಶಿಖಿವಾಹನಃ ॥ ೩೦ ॥

---

೨೬. ಆಗ ಆ ಕೃಷ್ಣ ಶಂಕರರು ಪಿನಾಕ ಶಾರ್ಙ್ಗಗಳಿಂದ ಪ್ರಳಯಕಾಲದ ಅಗ್ನಿಯಂತಿರುವ ಬಾಣಗಳನ್ನು ಬಿಡುತ್ತ ಘೋರವಾದ ಯುದ್ಧವನ್ನು ಮಾಡಿದರು.

೨೭. ಪರಶುರಾಮನು ಗಣಪತಿಯೊಡನೆಯೂ ಪ್ರದ್ಯುಮ್ನನು ಷಣ್ಮುಖನೊಡನೆಯೂ ಬಲವಾದ ಮದಿಸಿರುವ ಸಿಂಹಗಳಂತೆ ಯುದ್ಧಮಾಡಿದರು.

೨೮. ವಿನಾಯಕನು ತನ್ನ ದಂತದಿಂದ ಆ ಬಲರಾಮನ ಎದೆಗೆ ಬಲವಾಗಿ ಚುಚ್ಚಿದನು. ಆ ರಾಮನು ಮುಸಲಾಯುಧವನ್ನು ತೆಗೆದುಕೊಂಡು ಆ ದಂತಗಳಿಗೆ ಹೊಡೆದನು.

೨೯. ಆ ಇಲಿಯ ಮೇಲೆ ಕುಳಿತಿದ್ದ ಗಣಪತಿಯು ಹಲ್ಲು ಮುರಿದು ಹೋಗಲು ಅವನು ಓಡಿದನು. ಆಗಿನಿಂದ ಅವನಿಗೆ ಭಗ್ನದಂತ (ಹಲ್ಲು ಮುರಿದವ) ಎಂದು ಹೆಸರಾಯಿತು.

೩೦-೩೧. ಅದು ಮೊದಲುಗೊಂಡು ದೇವದಾನವ ಗಂಧರ್ವರು ಆ ಗಣಪತಿಯನ್ನು ಏಕದಂತನೆಂದು ಕರೆಯುತ್ತಾರೆ. ಪ್ರದ್ಯುಮ್ನನು ಷಣ್ಮುಖನೊಡನೆ

**ಗಣಾನ್ನಿದ್ರಾವಯಾಮಾಸ ಮುಸಲೇನ ಹಲಾಯುಧಃ |**
**ಕೃಷ್ಣೇನ ಸುಚಿರಂ ಕಾಲಂ ಯುದ್ಧ್ವಾಸೌ ನೀಲಲೋಹಿತಃ || ೩೧ ||**

**ತಾಪಜ್ವರಂ ಮಹಾದೀಪ್ತಂ ತಸ್ಮಿನ್ ಸಂಯೋಜ್ಯ ಸಾಯಕೇ |**
**ಕೋಪಾನ್ಮುಮೋಚ ತಮಸೌ ಭೃಶಸಂರಕ್ತಲೋಚನಃ || ೩೨ ||**

**ತದಸ್ತ್ರಂ ವಾರಯಾಮಾಸ ಕೃಷ್ಣಃ ಶೀತಜ್ವರೇಣ ತು |**
**ತಾಭ್ಯಾಂ ಹರಿಹರಾಭ್ಯಾಂ ತು ವಿಸೃಷ್ಟೌ ತಾವಿಮೌ ಜ್ವರೌ || ೩೩ ||**

**ಜಗ್ಮತುರ್ಮಾನುಷೇ ಲೋಕೇ ತಯೋರೇವಾಜ್ಞಯಾ ಭೃಶಂ**
**ಹರಿಶಂಕರಯೋರ್ಯುದ್ಧಂ ಯೇ ತು ಶೃಣ್ವಂತಿ ಮಾನವಾಃ || ೩೪ ||**

**ತೇ ಸರ್ವೇ ಜ್ವರನಿರ್ಮುಕ್ತಾಃ ಪ್ರಾಪ್ನುವಂತಿ ನಿರಾಮಯಂ |**
**ತತಃ ಸ ತು ಹೃಷೀಕೇಶೋ ಮೋಹನಾಸ್ತ್ರಂ ದುರಾಸದಂ || ೩೫ ||**

**ನಿಯುಜ್ಯ ಬಾಣೇ ಭೂತೇಶೇ ಮುಮೋಚ ಮಧುಸೂದನಃ |**
**ಮುಹುರ್ಮುಹುಃ ಪ್ರಯೋಗೇಣ ತೇನಾಸ್ತ್ರೇಣ ವಿಮೋಹಿತಃ || ೩೬ ||**

---

ಯುದ್ಧಮಾಡಿದನು. ಆಗ ಬಲರಾಮನು ಮುಸಲಾಯುಧದಿಂದ ಗಣಗಳನ್ನು ಓಡಿಸಿದನು. ಶಂಕರನು ಕೃಷ್ಣನೊಡನೆ ಬಹುಕಾಲ ಯುದ್ಧಮಾಡಿ ಕಡೆಗೆ ತಾಪಜ್ವರದಿಂದ ಮಂತ್ರಿಸಿದ ಬಾಣವನ್ನು ಧನುಸ್ಸಿನಲ್ಲಿ ಹೂಡಿ ಕೋಪದಿಂದ ಕಣ್ಣುಗಳನ್ನು ಕೆಂಪಗೆ ಮಾಡಿಕೊಂಡು ಕೃಷ್ಣನಮೇಲೆ ಬಿಟ್ಟನು.

೩೩-೩೮. ಆ ತಾಪಜ್ವರಾಸ್ತ್ರವನ್ನು ಕೃಷ್ಣನು ಶೀತಜ್ವರ ಬಾಣದಿಂದ ತಡೆದನು ಆ ಹರಿಹರರಿಂದ ಬಿಟ್ಟ ಈ ಎರಡು ಜ್ವರಗಳೂ ಅವರಿಬ್ಬರ ಆಜ್ಞೆಯಂತೆ ಮನುಷ್ಯಲೋಕಕ್ಕೆ ಬಂದುವು. ಹರಿಶಂಕರರ ಈ ಯುದ್ಧವನ್ನು ಕೇಳಿದವರು ಎಲ್ಲರೂ ಅವರಿಗೆ ಜ್ವರಗಳು ಬಾರದೆ ರೋಗರಹಿತರಾಗಿರುತ್ತಾರೆ ಆಗ ಕೃಷ್ಣನು ಬಹು ಉಗ್ರವಾದ ಮೋಹನಾಸ್ತ್ರವನ್ನು ಬಾಣದಲ್ಲಿ ಹೂಡಿ ಆ ಶಂಕರನ ಮೇಲೆ ಬಿಟ್ಟನು ಆ ಕೃಷ್ಣನು ಮತ್ತೆ ಮತ್ತೆ ಬಾಣಗಳನ್ನು

ಪಪಾತ ಮೂರ್ಛಿತೋ ಭೂಮೌ ಶಂಕರಸ್ತ್ರಿದಶೇಶ್ವರಃ ।
ಪಿತರಂ ಮೋಹಿತಂ ದೃಷ್ಟ್ವಾ ಶಕ್ತಿಮುದ್ಯಮ್ಯ ವೀರ್ಯವಾನ್ ॥ ೩೭ ॥

ಯೋದ್ಧುಮಭ್ಯಾಯಯೌ ಕೃಷ್ಣಂ ಷಣ್ಮುಖಃ ಶಿಖಿವಾಹನಃ ।
ಹುಂಕಾರೇಣೈವ ತಂ ಕೃಷ್ಣಃ ಚಕಾರಾತ್ರಪರಾಙ್ಮುಖಂ ॥ ೩೮ ॥

ಏವಂ ಜಿತ್ವಾ ಯದುಶ್ರೇಷ್ಠಃ ಶೂಲಪಾಣಿಂ ತ್ರಿಲೋಚನಂ ।
ಮಹಾಸ್ವನಂ ಪಾಂಚಜನ್ಯಂ ಶಂಖಂ ದದ್ಮೌ ಪ್ರತಾಪವಾನ್ ॥ ೩೯ ॥

ಕೃಷ್ಣೇನ ನಿರ್ಜಿತಂ ಶ್ರುತ್ವಾ ಸಾತ್ಮಜಂ ಶಂಕರಂ ತದಾ ।
ಬಾಣಃ ಸ್ಯಂದನಮಾಸ್ಥಾಯ ಯಯೌ ಯುದ್ಧಾಯ ಕೇಶವಂ ॥ ೪೦ ॥

ಸ ದೃಷ್ಟ್ವಾ ಸಹಸಾ ಕೃಷ್ಣಂ ಗರುಡೋಪರಿಸಂಸ್ಥಿತಂ ।
ಛಾದಯಾಮಾಸ ಗೋವಿಂದಂ ಬಹುಶಸ್ತ್ರಾಸ್ತ್ರವೃಷ್ಟಿಭಿಃ ॥ ೪೧ ॥

---

ಬಿಡುತ್ತಿದ್ದುದರಿಂದ ಈ ಶಂಕರನು ಮೋಹಗೊಂಡು ಜ್ಞಾನತಪ್ಪಿ ನೆಲದಮೇಲೆ ಬಿದ್ದನು. ತಂದೆಯು ಮೂರ್ಛೆ ಹೋದುದನ್ನು ನೋಡಿ ಷಣ್ಮುಖನು ನವಿಲಿನ ಮೇಲೆ ಕುಳಿತು ಕೃಷ್ಣನೊಡನೆ ಯುದ್ಧಮಾಡಲು ಬಂದನು. ಕೃಷ್ಣನು ಹುಂಕಾರ ಮಾಡಿದ ಮಾತ್ರದಿಂದಲೇ ಆತನು ಹಿಂದಿರುಗಿ ಹೊರಟುಹೋದನು

೩೯. ಶೂಲಪಾಣಿಯಾದ ತ್ರಿಲೋಚನನನ್ನು ಶ್ರೀಕೃಷ್ಣನು ಹೀಗೆ ಗೆದ್ದು ಪಾಂಚಜನ್ಯವನ್ನು ಹಿಡಿದು ಗಟ್ಟಿಯಾಗಿ ಊದಿದನು.

೪೦. ಕೃಷ್ಣನು ಶಂಕರನನ್ನೂ ಅವನ ಮಕ್ಕಳನ್ನೂ ಜಯಿಸಿದುದನ್ನು ಬಾಣನು ಕೇಳಿ ರಥದಮೇಲೆ ಕುಳಿತು ಕೇಶವನೊಡನೆ ಯುದ್ಧಕ್ಕೆ ಬಂದನು.

೪೧. ಆ ಬಾಣನು ಗರುಡನ ಮೇಲೆ ಕುಳಿತಿರುವ ಕೃಷ್ಣನನ್ನು ನೋಡಿ ಬಹುವಾದ ಶಸ್ತ್ರಾಸ್ತ್ರಗಳನ್ನು ಬಿಡುತ್ತ ಅವನನ್ನು ಮುಚ್ಚಿದನು.

ಗದಾಭಿಃ ಪರಿಘೈಃ ಶೂಲೈಃ ಶಕ್ತಿಭಿಸ್ತೋಮರೈರಪಿ ।
ಭಿಂದಿಪಾಲೈಶ್ಚ ಖಡ್ಗೈಶ್ಚ ಚಕ್ರೈರ್ಬಾಣೈರ್ನಿರಂತರಂ　　॥ ೪೨ ॥

ತಾನಿ ಸರ್ವಾಣಿ ಚಿಚ್ಛೇದ ಚಕ್ರೇಣೈವ ಜನಾರ್ದನಃ ।
ಸಸರ್ಜ ತಸ್ಯ ಬಾಹುನಾಂ ಛೇದನಾರ್ಥಂ ಸುದರ್ಶನಂ　　॥ ೪೩ ॥

ಮುಕ್ತಂ ದನಜರಾಜಸ್ಯ ಸಹಸ್ರಾರಂ ಸುದರ್ಶನಂ ।
ತದ್ಬಾಹುಕಾನನಂ ತೂರ್ಣಂ ಛಿನ್ನಂ ಚಕ್ರೇ ಸಹಸ್ರಧಾ　　॥ ೪೪ ॥

ಏತಸ್ಮಿನ್ನಂತರೇ ದೇವಿ ಪಾರ್ವತೀಶಂ ಪಿತವ್ರತಾ ।
ಹರೇಃ ಸಮೀಪಮಾಗತ್ಯ ಕೃತಾಂಜಲಿರಭಾಷತ　　॥ ೪೫ ॥

॥ ಪಾರ್ವತ್ಯುವಾಚ ॥

ಕೃಷ್ಣ ಕೃಷ್ಣ ಜಗನ್ನಾಥ ನಾರಾಯಣ ದಯಾನಿಧೇ ।
ದಾಸ್ಯಸ್ಮಿ ತವ ದೇವೇಶ ಪೂರ್ವಭಾವೇ ಯದೂತ್ತಮ　　॥ ೪೬ ॥

---

೪೨. ಗದೆ, ಪರಿಘ, ಶೂಲ, ಶಕ್ತಿ, ತೋಮರ, ಭಿಂದಿಪಾಲ, ಖಡ್ಗ, ಬಾಣ, ಎಲ್ಲವನ್ನೂ ಬಿಡುತ್ತಾ ಕೃಷ್ಣನನ್ನು ಮುಚ್ಚಿದನು.

೪೩. ಆ ಬಾಣಗಳೆಲ್ಲವನ್ನೂ ಕೂಡ ಕೃಷ್ಣನು ಚಕ್ರದಿಂದಲೇ ಕತ್ತರಿಸಿದನು. ಮತ್ತು ಅವನ ತೋಳುಗಳನ್ನೆಲ್ಲಾ ಕತ್ತರಿಸಬೇಕೆಂದು ಚಕ್ರವನ್ನು ಬಿಟ್ಟನು.

೪೪. ಆ ಸಹಸ್ರಹಾರೆಕಾಲುಗಳುಳ್ಳ ಆ ಚಕ್ರವನ್ನು ಕೃಷ್ಣನು ಬಿಡಲು ಅದು ಅವನ ಕೈಗಳನ್ನೆಲ್ಲಾ ಸಾವಿರ ಚೂರಾಗುವಂತೆ ಕತ್ತರಿಸಿತು.

೪೫. ಇಷ್ಟರೊಳಗೆ ಪತಿವ್ರತೆಯಾದ ಪಾರ್ವತಿದೇವಿಯು ಹರಿಯ ಬಳಿಗೆ ಬಂದು ಕೈಮುಗಿದುಕೊಂಡು ಇಂತೆಂದಳು.

೪೬. ಪಾರ್ವತಿಯು ಹೇಳಿದಳು–ಕೃಷ್ಣ ! ಕೃಷ್ಣ ! ಜಗನ್ನಾಥನೆ ! ದಯಾನಿಧಿಯೇ ! ದೇವೇಶನೇ ! ಸ್ವಾಮಿ ! ನಿನಗೆ ಹಿಂದಿನ ಜನ್ಮದ ರೀತಿಯಿಂದ ನಾನು ದಾಸಿಯಾಗಿದ್ದೇನೆ.

ತ್ವಯಾ ದತ್ತಂ ವರಂ ಮಹ್ಯಂ ತದಾ ಕೌಶಲಪರ್ವತೇ ।
ಸೌಭಾಗ್ಯಂ ಶಾಶ್ವತಂ ಸೌಮ್ಯ ಪ್ರಸನ್ನೇನ ಮಹಾತ್ಮನಾ ॥ ೪೭ ॥

ತವ ಮುಖ್ಯಂ ಸಹಸ್ರಸ್ಯ ನಾಮ್ನಾಮನ್ಯತಮಂ ವಿಭೋ ।
ಗೌರೀಸೌಭಾಗ್ಯದಾತೇತಿ ಮುನಿಭಿಃ ಪರಿಕೀರ್ತಿತಂ ॥ ೪೮ ॥

ತತ್ಸತ್ಯಂ ಕುರು ಗೋವಿಂದ ಗರುಡಾರೂಢ ಶಾಶ್ವತ ।
ತಸ್ಮಾನ್ಮಮ ಪತಿಂ ದೇವ ತ್ವಂ ಜೀವಯಿತುಮರ್ಹಸಿ ॥ ೪೯ ॥

॥ ರುದ್ರ ಉವಾಚ ॥

ಏವಮುಕ್ತಸ್ತತೋ ದೇವ್ಯಾ ಕೃಷ್ಣಃ ಕಮಲಲೋಚನಃ ।
ಅಸ್ತ್ರಂ ಸಂಹಾರಯಾಮಾಸ ಯೇನಾಸೌ ಮೋಹಿತಃ ಪತಿಃ ॥ ೫೦ ॥

ಕೃಷ್ಣಾಸ್ತ್ರೇಣ ವಿನಿರ್ಮುಕ್ತಃ ಸರ್ವಭೂತಪತಿಃ ಶಿವಃ ।
ಉತ್ಥಾಯ ಪ್ರಾಂಜಲಿರ್ಭೂತ್ವಾ ತುಷ್ಟಾವ ಜಗತಾಂ ಪತಿಂ ॥ ೫೧ ॥

---

೪೭. ಹಿಂದೆ ಕೌಶಲ ಪರ್ವತದಲ್ಲಿ ನಾನು ತಪಸ್ಸನ್ನು ಮಾಡಿದಾಗ ನೀನು ನನಗೆ ಶಾಶ್ವತವಾದ ಸೌಭಾಗ್ಯವಿರಲೆಂದು ವರವನ್ನು ಕೊಟ್ಟಿದ್ದೀಯೆ.

೪೮. ನಿನ್ನ ಸಹಸ್ರನಾಮಗಳೊಳಗೆ ಗೌರಿಸೌಭಾಗ್ಯದಾತಾ ಎಂಬುದು ಬಹು ಮುಖ್ಯವಾದ ನಾಮವೆಂದು ಮುನಿಗಳು ಹೇಳುತ್ತಾರೆ.

೪೯. ಎಲೈ ಗರುಡಗಾಮಿಯಾದ ಸ್ವಾಮಿಯೆ ! ಆ ನಾಮವನ್ನು ಅರ್ಥವುಳ್ಳದ್ದನ್ನಾಗಿ ಮಾಡು. ಆದ್ದರಿಂದ ನನ್ನ ಗಂಡನನ್ನು ಬದುಕಿಸು.

೫೦. ರುದ್ರನು ಹೇಳಿದನು–ಪಾರ್ವತಿಯು ಹೀಗೆ ಹೇಳಲು ಆ ಕಮಲಲೋಚನನಾದ ಕೃಷ್ಣನು ಆ ಶಿವನನ್ನು ಮೋಹಬೀಳುವಂತೆ ಮಾಡಿರುವ ಮೋಹನಾಸ್ತ್ರವನ್ನು ಉಪಸಂಹರಿಸಿ ಹಿಂದಕ್ಕೆ ತೆಗೆದುಕೊಂಡನು.

೫೧. ಸರ್ವಭೂತಪತಿಯಾದ ಶಿವನು ಕೃಷ್ಣಾಸ್ತ್ರದಿಂದ ಮುಕ್ತನಾಗಿ ಮೇಲಕ್ಕೆದ್ದು ಕೈಮುಗಿದುಕೊಂಡು ಆ ಕೃಷ್ಣನನ್ನು ಸ್ತುತಿಸಿದನು.

॥ ಶಂಕರ ಉವಾಚ ॥

ಕೃಷ್ಣ ಕೃಷ್ಣ ಜಗನ್ನಾಥ ಭಗವನ್ ಪುರುಷೋತ್ತಮ ।
ಪರೇಶ ಪರಮೇಶಾನ ಅನಾದಿನಿಧನಾವ್ಯಯ ॥ ೫೨ ॥

ತೀವ್ರವೀರ್ಯ ಮನುಷ್ಯೇಷು ಶರೀರಗ್ರಹಣಾತ್ಮಿಕಾ ।
ಲೀಲೇಯಂ ಸೃಷ್ಟಸರ್ವಸ್ಯ ತವ ಚೇಷ್ಟೋಪಲಕ್ಷಣಂ ॥ ೫೩ ॥

ಪ್ರಸೀದ ಮೇ ನಮಸ್ತುಭ್ಯಂ ಪ್ರಸೀದ ಮಮ ಶಾಶ್ವತ ।
ಪ್ರಸೀದ ಮೇ ಜಗತ್‌ಸ್ವಾಮಿನ್ ಪ್ರಸೀದಾಚ್ಯುತ ಕೇಶವ ॥ ೫೪ ॥

ತ್ವಮೇವ ಜಗತಾಂ ಸ್ರಷ್ಟಾ ಧಾತಾ ಹರ್ತಾ ಜಗದ್ಗುರುಃ ।
ತ್ವಮೇವ ಚಿದಚಿದ್ವಸ್ತು ರೂಪಂ ಬ್ರಹ್ಮ ಸುರೇಶ್ವರ ॥ ೫೫ ॥

ತ್ವಮಾದಿಸ್ತ್ವಮನಾದಿಸ್ತ್ವಮೀಶ್ವರಸ್ಯೇಶ ಏವ ಚ ।
ತ್ವಂ ಮಹತ್ವಂ ಪರಂ ಬ್ರಹ್ಮ ಪ್ರತ್ಯಗಾತ್ಮಾ ತ್ವಮೇವ ಚ ॥ ೫೬ ॥

---

೫೨-೫೩. ಶಂಕರನು ಹೇಳಿದನು–ಕೃಷ್ಣನೆ ! ಕೃಷ್ಣನೆ ! ಜಗನ್ನಾಥನೆ ! ಪುರುಷೋತ್ತಮನೆ ! ಪರೇಶನೆ ! ಪರಮೇಶ್ವರನೆ ! ಆದ್ಯಂತರಹಿತನೆ ! ನಾಶರಹಿತನೆ ! ಬಹು ಪರಾಕ್ರಮವುಳ್ಳವನೆ ! ಮನುಷ್ಯರಲ್ಲಿ ಶರೀರವನ್ನು ಹೊಂದಿರುವ ಈ ಲೀಲೆಯು ಜಗತ್ತನ್ನೇ ಸೃಷ್ಟಿಸಿರುವ ನಿನಗೆ ಒಂದು ಲೀಲೆಯು. ಇದು ಒಂದು ಚೇಷ್ಟೆಗೆ ಗುರುತೂ ಆಗಿದೆ.

೫೪-೫೫. ನಿನಗೆ ನಮಸ್ಕಾರವು. ನನಗೆ ಪ್ರಸನ್ನನಾಗು. ಎಲೈ ಶಾಶ್ವತನೆ ! ನನಗೆ ಪ್ರಸನ್ನನಾಗು ನೀನೇಯೇ ಜಗತ್ತಿಗೆಲ್ಲಾ. ಸೃಷ್ಟಿಕರ್ತೃವು. ಪೋಷಕನು. ಮತ್ತು ನಾಶಕನು. ನೀನೇ ಜಗದ್ಗುರುವು. ನೀನೇ ಚಿದಚಿದ್ವಸ್ತುವು. ಪರಬ್ರಹ್ಮವು. ಇಂತಹ ಸ್ವಾಮಿಯಾದ ನೀನು ನನಗೆ ಪ್ರಸನ್ನನಾಗು

೫೬-೫೭. ನೀನೇ ಆದಿಪುರುಷನು. ನಿನಗೆ ಆದಿಯಾದವರು ಯಾರೂ ಇಲ್ಲ. ನೀನು ಈಶ್ವರರಿಗೆಲ್ಲಾ ಈಶ್ವರನು. ನೀನೇ ಮಹತ್ತು. ನೀನೇ ಪರಬ್ರಹ್ಮವು.

ಸಮಸ್ತಾಮರವರ್ಯಸ್ತ್ವಮಮರ್ತ್ಯಸ್ತ್ವಂ ಸುರೇಶ್ವರ ।
ತ್ವಂ ಮರ್ತ್ಯೇಶಃ ಸ್ವಯೋನಿಸ್ತ್ವಂ ಸೌಶೀಲ್ಯೇನ ತವ ಪ್ರಭೋ ॥ ೫೭ ॥

ತವ ಶ್ವಾಸಾತ್ಸಮುತ್ಪನ್ನೌ ಪರಜೀವೌ ಸನಾತನೌ ।
ತಥಾ ಪಂಚಾಪಿ ಭೂತಾನಿ ತವ ವಾತ್ಸಲ್ಯಗೌರವಾತ್ ॥ ೫೮ ॥

ಕ್ಷರಾಽಕ್ಷರೇ ಪರೇ ಧಾಮ್ನಿ ಋಚೋ ನಿತ್ಯಂ ಸುರಾಶ್ರಯೇ ।
ಅಧಿವಿಶ್ವೇ ನಿಷೇದುಸ್ತ್ವದ್ದಾಸ್ಯಕರ್ಮಣಿ ನಾನ್ಯಥಾ ॥ ೫೯ ॥

ಯಸ್ತ್ವಾಂ ನ ವೇದಲೋಕೇಽಸ್ಮಿನ್ ಸ ಮೂಢಃ ಕಿಂ ಕರಿಷ್ಯತಿ ।
ಯೇ ವೈ ತ್ವತ್ಪರಮಂ ಧಾಮ ವಿದುರ್ದಾಸ್ಯೇ ಮನೀಷಿಣ ॥ ೬೦ ॥

---

ನೀನು ಅವ್ಯಕ್ತನು. ನೀನು ದೇವತಾಶ್ರೇಷ್ಠನು. ನಿನಗೆ ಸಾವಿಲ್ಲ. ನೀನು ಮನುಷ್ಯರಿಗೆ ಒಡೆಯನು. ನಿನ್ನಿಂದ ನೀನೇ ಹುಟ್ಟಿದ್ದೀಯೆ. ಒಳ್ಳೆಯ ಗುಣವುಳ್ಳವನು.

೫೮–೫೯. ಎಲೈ ಪರಮಾತ್ಮನೇ ! ಪರಮಾತ್ಮಜೀವಾತ್ಮಗಳು ನಿನ್ನ ಶ್ವಾಸದಿಂದ ಉತ್ಪನ್ನವಾಗಿ ಸನಾತನವಾಗಿವೆ. ಅಂತೆಯೇ ನಿನ್ನಲ್ಲಿನ ಕೃಪೆಯಿಂದಲೇ ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶರೂಪವಾದ ಪಂಚಭೂತಗಳು ಉತ್ಪನ್ನವಾಗಿವೆ. ಮತ್ತು ನಿನ್ನನ್ನು ಹೊಗಳತಕ್ಕ ಋಕ್ಕುಗಳು (ವೇದಗಳು) ಯಾವಾಗಲೂ ನಿನ್ನನ್ನೇ ಹೊಗಳುತ್ತಾ ಸ್ವರ್ಗವನ್ನು ಬೋಧಿಸುತ್ತಾ ದೇವತೆಗಳಿಗೆ ಆಶ್ರಯವಾಗಿ ಅವರಿಗೂ ಕೇಳಿದುದನ್ನು ಕೊಡುವಂತೆ ಮಾಡುತ್ತಾ ದೇವಾದಿದೇವನಾದ ನಿನ್ನನ್ನೇ ಕೊನೆಯ ಪುರುಷನೆಂದು ಹೊಗಳುತ್ತಾ ನಿನ್ನ ಸೇವೆಯನ್ನೇ ಉತ್ಕೃಷ್ಟವೆಂದು ಹೇಳುತ್ತಿರುತ್ತವೆ. ಮತ್ತು ಆ ವೇದಗಳು ನಶ್ವರವಾದ ಈ ಲೋಕದಲ್ಲಿಯೂ ಎಲ್ಲಾ ಕಡೆಯಲ್ಲಿಯೂ ನಿನ್ನನ್ನು ಹೊಗಳುತ್ತ ನಿನಗೆ ಸೇವೆಯನ್ನು ಸಲ್ಲಿಸುತ್ತಿವೆ.

೬೦–೬೧. ಎಲೈ ಸ್ವಾಮಿಯೇ ! ಈ ಲೋಕದಲ್ಲಿ ನಿನ್ನನ್ನು ತಿಳಿಯದವನು ಮೂಢನು. ಅವನು ಈ ಲೋಕದಲ್ಲಿ ಏನುಮಾಡಬಲ್ಲನು ? ಯಾರು ನಿನ್ನಲ್ಲಿ ದಾಸ್ಯವೃತ್ತಿಯಿಂದಿದ್ದುಕೊಂಡು ನಿನ್ನ ಉತ್ತಮೋತ್ತಮವಾದ ತೇಜಸ್ಸನ್ನಾಗಲಿ

ತೇ ವೈ ಸಮಾಸತೇ ಯುಕ್ತಾಃ ತ್ವತ್ಪದೇ ತ್ರಿದಶೈಸ್ಸಮಂ ।
ಸಾಮಾನ್ಯೋ ಭಜತೇ ದೂರೇ ನ ತು ನಿತ್ಯಂ ಪದಂ ತವ ॥ ೬೧ ॥

ತಸ್ಯ ತುರ್ಯಾ ಚಾರುಕೇಶೀ ಚಾವಸ್ಥಾ ಘಟಿತೇ ತವ ।
ಮಿಥುನಾನಿ ತವಾಧ್ಯಕ್ಷ ಬ್ರುವತೇ ಯದುಶಾಶ್ವತ ॥ ೬೨ ॥

ತವ ನಾಮಾನಿ ಕರ್ಮಾಣಿ ಗುಣಾನಿ ಶಾಶ್ವತಾನಿ ಚ ।
ಐಶ್ವರ್ಯಾಣಿ ಗುಣಾತೀತಿ ಗುಣಿನೋ ಬ್ರುವತೇ ಇಮೇ ॥ ೬೩ ॥

ಕರ್ಮಜ್ಞಾನಮಯೇ ರೂಪೇ ಇಮೇ ಪೂರ್ವೋತರೇ ಶ್ರುತೇ ।
ಸ್ವಸಾರೌ ಯುವತೀ ಪ್ರೋಕ್ತೇ ಸ್ತೋತಾರೌ ತವ ಕೇಶವ ॥ ೬೪ ॥

---

ಜಾಗವನ್ನಾಗಲಿ ತಿಳಿಯುತ್ತಾರೆಯೋ ಅವರು ನಿನ್ನೊಡನೆಯೂ ದೇವತೆಗಳೊಡನೆಯೂ ಬಹುಕಾಲ ಸುಖಿಸುತ್ತಾರೆ. ಯಾವನು ನಿನ್ನನ್ನು ಸರಿಯಾಗಿ ತಿಳಿಯದೆ ದೂರದಲ್ಲಿಯೇ ಭಜಿಸುವನೋ ಅವನಿಗೆ ಶಾಶ್ವತಪದವಿಯು ಸಿಕ್ಕದೆ ಅಲ್ಪವಾದ ಸ್ವರ್ಗಾದಿಗಳು ಸಿಕ್ಕುತ್ತವೆ.

೬೨-೬೪. ದೂರದಲ್ಲಿ ಭಜಿಸುವ ಆ ಪ್ರಾಣಿಯು ಕಿನ್ನರನಾಗಿ ಹುಟ್ಟುತ್ತಾನೆ. ಕಿನ್ನರರ ಮಿಥುನವು ಯಾವಾಗಲೂ ನಿನ್ನ ಹೆಸರುಗಳನ್ನೂ ನಿನ್ನ ಕರ್ಮಗಳನ್ನೂ ಶಾಶ್ವತವಾದ ಗುಣಗಳನ್ನೂ ಹೊಗಳುತ್ತಿರುತ್ತವೆ. ಗುಣವನ್ನು ಬಲ್ಲವರು ನಿನ್ನ ಐಶ್ವರ್ಯಗಳನ್ನೇ ಗುಣಿಸುವುದರಿಂದ ಅದನ್ನು ಗುಣಗಳೆಂದೆನ್ನುತ್ತಾರೆ. ನಿನ್ನ ರೂಪಗಳಲ್ಲಿ ಒಂದು ಕರ್ಮಮಯವಾದುದು ಒಂದು ಜ್ಞಾನಮಯವಾದುದು. ಕರ್ಮಕಾಂಡವು ಮೊದಲನೆಯದು ಅದಾದನಂತರ ಅದರಿಂದ ಜ್ಞಾನವನ್ನು ಸಂಪಾದಿಸುವುದು ಎರಡನೆಯದು. ಈ ನಿನ್ನ ರೂಪಗಳಲ್ಲಿ ಕರ್ಮರೂಪವು ಮೊದಲನೆಯದು. ಪ್ರಾಣಿಯು ಮೊದಲು ಆಚರಿಸತಕ್ಕದು. ಜ್ಞಾನಮಯವಾದುದು ಎರಡನೆಯದು. ಅದನ್ನು ಕರ್ಮವಾದಮೇಲೆ ತಿಳಿಯತಕ್ಕದ್ದು. ಇವೆರಡೂ ಕೂಡ ಸಹೋದರಿಯರು. ಅವುಗಳು ಎಂದರೆ ಕರ್ಮಕಾಂಡ ಜ್ಞಾನಕಾಂಡಗಳೆರಡೂ ನಿನ್ನನ್ನೇ ಹೇಳುತ್ತವೆ.

ತ್ವಂ ಪ್ರಜ್ಞಾನಂ ಪರಂ ಬ್ರಹ್ಮ ತ್ವಯಾ ಪ್ರಜ್ಞೇನ ಶಾಶ್ವತ |
ಜೀವಯ್ಯೈತೇನ ಪ್ರಜ್ಞೇನ ಪರೇಣೈವಾತ್ಮನಾ ತ್ವಯಾ || ೬೫ ||

ತಸ್ಮಾಚ್ಛರೀರಾದುತ್ಕ್ರಮ್ಯ ಕೃಪಯಾ ತವ ಕೇವಲಂ |
ಆಮುಷ್ಮಿಕೇ ಪರೇ ಸ್ವರ್ಗೇ ತ್ವಯಾ ದತ್ತಾತ್ಮಬೋಧವಾ‌ || ೬೬ ||

ಪ್ರಜ್ಞಾನಂ ಚೈವ ವಿಜ್ಞಾನಂ ಮೇಧಾಂ ದೃಷ್ಟಿಂ ತಥಾ ಧೃತಿಂ |
ಸರ್ವಾನ್ಕಾಮಾನವಾಪ್ನೋತಿ ಅಮೃತಂ ಸ ಭವೇತ್ತದಾ || ೬೭ ||

ಏತತ್ಸಂಜ್ಞಾನಮಾಜ್ಞಾನಂ ಯದೇತದ್ಧೃದಯಂ ಮನಃ |
ಮನೀಷಾ ಚೈವ ಯುಕ್ತಿಶ್ಚ ಸ್ಮೃತಿಃ ಸಂಕಲ್ಪ ಏವ ಚ || ೬೮ ||

ತಪಶ್ಚ ಕ್ರತವಃ ಕಾಮೋ ವಶ ಇತ್ಯಾದಿ ತೇ ಪ್ರಭೋ |
ಭವಂತಿ ನಾಮಧೇಯಾನಿ ಪ್ರಜ್ಞಾನಸ ಘೃಣಾನಿಧೇಃ || ೬೯ ||

---

೬೫. ನೀನೇ ಉತ್ತಮ ಜ್ಞಾನರೂಪನು. ಪರಬ್ರಹ್ಮನು. ಪರಮನು. ಮತ್ತೊಬ್ಬನನ್ನು ಜೀವಿಸುವಂತೆ ಮಾಡುವ ಬಗೆಯಲ್ಲಿ ಆ ಪ್ರಜ್ಞಾನದಿಂದ ನನ್ನನ್ನು ಜೀವಿಸು (ಜ್ಞಾನವನ್ನು ಬೋಧಿಸು)

೬೬–೬೭ ಆ ಆತ್ಮಬೋಧೆಯುಂಟಾದವನು ಈ ಶರೀರವನ್ನು ಬಿಟ್ಟನಂತರ ನಿನ್ನ ದಯೆಯಿಂದಲೇ ಉತ್ತಮವಾದ ಸ್ವರ್ಗವನ್ನು ಹೊಂದುತ್ತಾನೆ. ಅಲ್ಲಿಯೂ ಬೋಧೆಯು ಚೆನ್ನಾಗಿ ಆಗಿ ಪ್ರಜ್ಞಾನ, ವಿಜ್ಞಾನ, ಮೇಧ, ದೃಷ್ಟಿ, ಧೃತಿಗಳನ್ನೂ ಎಲ್ಲಾ ಇಚ್ಛೆಗಳನ್ನೂ ಹೊಂದುತ್ತಾನೆ. ಆಗ ಅವನು ನಿನ್ನ ಸಮೀಪವನ್ನು ಹೊಂದಿ ಶಾಶ್ವತನಾಗಿದ್ದುಬಿಡುತ್ತಾನೆ.

೬೮-೬೯. ನಿನ್ನ ಹೃದಯ ಅಥವಾ ಮನಸ್ಸೇ ಸಂಜ್ಞಾನ ಆಜ್ಞಾನಗಳೆಂದೆನಿಸುಕೊಳ್ಳುತ್ತವೆ. ಸಂಜ್ಞಾನ, ಆಜ್ಞಾನ, ಹೃದಯ (ಮನಸ್ಸು) ಮನೀಷಾ, ಯುಕ್ತಿ, ಸ್ಮೃತಿ, ಸಂಕಲ್ಪ, ತಪಸ್ಸು, ಕ್ರತು, ಕಾಮ, ವಶ ಇವೇ ಮುಂತಾದುವು ದಯಾನಿಧಿಯಾದ ನಿನ್ನ ಹೆಸರುಗಳೇ ಆಗಿರುತ್ತವೆ.

ಏಷ ತ್ವಂ ಪರಮಂ ಬ್ರಹ್ಮ ಏಷ ತ್ವಂ ವೈ ಪ್ರಜಾಪತಿಃ ।
ಏಷ ತ್ವಮಿಂದ್ರೋ ರುದ್ರಶ್ಚ ಏಷ ತ್ವಂ ಸರ್ವದೇವತಾಃ ॥ ೭೦ ॥

ಏತಾನಿ ಸರ್ವಭೂತಾನಿ ತ್ವಮೇವ ಪರಮೇಶ್ವರ ।
ಸುತಮಿತ್ರಾಣಿ ಜಿವಾಯುಸ್ತಥಾನ್ಯಾನಿ ಸನಾತನ ॥ ೭೧ ॥

ಜರಾಯುಜಾಂಡಜಾತಾನಿ ಸ್ವೇದಜಾನ್ಯುದ್ಭಿದಾನಿ ಚ ।
ಅಶ್ವಾ ಗಾವಶ್ಚ ಪುರುಷಾ ಹಸ್ತಿನಶ್ಚೇತರಾಣಿ ಚ ॥ ೭೨ ॥

ಯತ್ಕಿಂಚಿತ್ ಪ್ರಾಣಿಜಾತಂ ಚ ಜಂಗಮಾಶ್ಚೈವ ಜಂತವಃ ।
ಸ್ಥಾವರಾ ಯೇ ಚ ವೈ ನಾಥ ಸರ್ವೇ ತ್ವತ್ತೋ ಭವಂತಿ ಹಿ ॥ ೭೩ ॥

---

೭೦–೭೨. ಎಲೈ ಪರಮೇಶ್ವರನೆ ! ನೀನೇ ಪರಬ್ರಹ್ಮನು. ನೀನೇ ಪ್ರಜಾಪತಿಯು. ನೀನೇ ಇಂದ್ರನು. ನೀನೇ ರುದ್ರನು. ನೀನೇ ಎಲ್ಲಾ ದೇವತೆಗಳು. ಈ ಭೂತಗಳೆಲ್ಲವೂ ಕೂಡ ನೀನೇ ಆಗಿದ್ದೀಯೆ. ಪ್ರಾಣಿಗಳಿಗೆ ಮಕ್ಕಳು, ಮಿತ್ರರು, ಜೀವ, ಆಯುಸ್ಸು, ಇನ್ನೂ ಏನೇನು ಇವೆಯೋ ಅವೆಲ್ಲವೂ ನೀನಾಗಿದ್ದೀಯೆ. ಜರಾಯುಜಗಳು ಎಂದರೆ ಜರಾಯುವೆಂಬ ನಾಳವನ್ನು ಸುತ್ತಿಕೊಂಡು ಹುಟ್ಟುವ ಮನುಷ್ಯರು ಪಶು ಮುಂತಾದುವು. ಅಂಡಜವೆಂದರೆ ಮೊಟ್ಟೆಯಿಂದ ಹುಟ್ಟುವ ಪಕ್ಷಿ ಮುಂತಾದುವು. ಸ್ವೇದಜವೆಂದರೆ ಬೆವರಿನಿಂದ ಹುಟ್ಟುವ ಹೇನು ಮುಂತಾದುವು. ಉದ್ಭಿಜವೆಂದರೆ ಕಾಳಿನಿಂದ ಹುಟ್ಟುವ ಪದಾರ್ಥಗಳು ಇವೂ ಹಸು, ಕುದುರೆ, ಪುರುಷರು, ಆನೆ, ಇನ್ನೂ ಉಳಿದ ಪ್ರಾಣಿಗಳೆಲ್ಲವೂ ನೀನೇ ಆಗಿದ್ದೀಯೆ.

೭೩. ಮತ್ತು ಸ್ಥಾವರ ಜಂಗಮ ರೂಪವಾದ ಪ್ರಾಣಿಗಳೆಲ್ಲವೂ ಕೂಡ ನೀನೇ ಆಗಿದ್ದೀಯೆ. ಅಲ್ಲದೆ ಚರಾಚರಾತ್ಮಕವಾದ ಪ್ರಾಣಿಗಳೆಲ್ಲವೂ ನಿನ್ನಿಂದಲೇ ಹುಟ್ಟಿದುವು.

ತ್ವಾಂ ಹಿ ಸರ್ವಗತಂ ಚೇತ್ಥಂ ವದಂತಿ ಶ್ರುತಯೋ ಹರೇ ।
ತ್ವಯೈವ ಪ್ರೇರಿತಾ ಲೋಕಾಶ್ಚೇಷ್ಟಂತೇ ಸಾಧ್ವಸಾಧುಷು ॥ ೭೪ ॥

ತಸ್ಮಾನ್ಮಯಾ ಕೃತಂ ಯಚ್ಚ ಅಪರಾದ್ಧಮಿದಂ ಪ್ರಭೋ ।
ಕ್ಷಮಸ್ವ ಕರುಣಾಸಿಂಧೋ ಗುಣೈಶ್ಚಾಭತಮೈಸ್ತವ ॥ ೭೫ ॥

ನಮಸ್ತೇ ಪುಂಡರೀಕಾಕ್ಷ ಗೋವಿಂದಾಚ್ಯುತ ಮಾಧವ ।
ವಾಸುದೇವ ಜಗದ್ವಂದ್ಯ ನಾರಾಯಣ ನಮೋಽಸ್ತು ತೇ ॥ ೭೬ ॥

ನಮಸ್ಯಾಮಿ ಜಗತ್ ಸ್ವಾಮಿನ್ ನೃಸಿಂಹ ಕರುಣಾಕರ ।
ಶ್ರೀಶ ಸರ್ವಗತ ಶ್ರೀಮಾನ್ ಪರಮಾತ್ಮನ್ನಮೋಽಸ್ತು ತೇ ॥ ೭೭ ॥

ನಿಜಾವಸಥ ವೈಕುಂಠ ನಿತ್ಯಮುಕ್ತಾರ್ಚಿತ ಪ್ರಭೋ ।
ಶ್ರಿಯಾನಾಥ ನಮಸ್ತುಭ್ಯಂ ರಾಮ ರಾಜೀವಲೋಚನ ॥ ೭೮ ॥

---

೭೪. ಎಲೈ ಹರಿಯೆ ! ನಿನ್ನನ್ನೇ ಎಲ್ಲ ಪದಾರ್ಥಗಳಲ್ಲಿಯೂ ಇರುವವನನ್ನಾಗಿ ಶ್ರುತಿಗಳು ಹೇಳುತ್ತವೆ. ಎಲ್ಲಾ ಪ್ರಾಣಿಗಳೂ ಒಳ್ಳೆಯ ಅಥವಾ ಕೆಟ್ಟಕೆಲಸಗಳಲ್ಲಿ ನಿನ್ನಿಂದಲೇ ಪ್ರೇರಿತವಾಗಿ ಅದರಂತೆ ನಡೆಯುತ್ತವೆ.

೭೫ ಆದ್ದರಿಂದ ನಾನು ಮಾಡಿದ ಈ ಅಪರಾಧವನ್ನು ಕರಣಾನಿಧಿಯಾದ ನೀನು ನಿನ್ನ ಉತ್ತಮವಾದ ಗುಣಗಳನ್ನು ಮುಂದುಮಾಡಿಕೊಂಡು ಕ್ಷಮಿಸು.

೭೬-೭೭. ಎಲೈ ಪುಂಡರೀಕಾಕ್ಷನೆ! ನಿನಗೆ ನಮಸ್ಕಾರವು. ಎಲೈ ನಾರಾಯಣನೇ ! ನಿನಗೆ ನಮಸ್ಕಾರವು. ಗೋವಿಂದ ! ಅಚ್ಯುತ ! ಮಾಧವ ! ವಾಸುದೇವ ! ಜಗದ್ವಂದ್ಯ ! ನಿನಗೆ ನಮಸ್ಕಾರವು. ನಾರಾಯಣನೇ ! ನಿನಗೆ ನಮಸ್ಕಾರವು. ಶ್ರೀಶನೇ ! ಎಲ್ಲರಲ್ಲಿಯೂ ಇರುವವನೇ ! ಶ್ರೀಮಂತನೇ ! ಪರಮಾತ್ಮನೇ ! ನಿನಗೆ ನಮಸ್ಕಾರವು.

೭೮. ವೈಕುಂಠವೇ ಸ್ಥಾನವಾಗಿ ಉಳ್ಳವನೇ ! ನಿತ್ಯಮುಕ್ತರಿಂದ ಪೂಜಿತನೆ ! ಅಚ್ಯುತನೇ ! ವೇದಗಳಿಗೆ ಒಡೆಯನೇ ! ನಿನಗೆ ನಮಸ್ಕಾರವು. ರಾಜೀವದಂತೆ ಕಣ್ಣುಳ್ಳವನೇ ! ರಾಮನೇ ! ನಿನಗೆ ನಮಸ್ಕಾರವು.

ಭೂಭಾರಕವಿನಾಶಾಯ ಕೃಷ್ಣಾನಂದಸ್ವರೂಪಿಣೇ ।
ವಿಷ್ಣವೇ ಜಿಷ್ಣವೇ ತುಭ್ಯಂ ನಮಸ್ತೇ ಯದುನಂದನ ॥ ೭೯ ॥

॥ ಮಹಾದೇವ ಉವಾಚ ॥

ಏವಂ ಸ್ತುತ್ವಾಥ ಗೋವಿಂದಂ ಪ್ರಣಿಪತ್ಯ ಉಮಾಪತಿಃ ।
ಪ್ರಾಂಜಲಿಃ ಪ್ರಾಹ ಭೂತೇಶೋ ವಾಕ್ಯಂ ಗಂಭೀರಯಾ ಗಿರಾ ॥ ೮೦ ॥

॥ ಶ್ರೀರುದ್ರ ಉವಾಚ ॥

ಮಯಾ ದತ್ತವರೋ ಹ್ಯೇಷಃ ಬಾಣೋ ಬಲಿಸುತಃ ಪ್ರಭೋ ।
ಅಹಂ ಚ ದತ್ತವಾನಸ್ಮೈ ಪುರಾನೇನಾರ್ಥಿತೋ ವರಂ ॥ ೮೧ ॥

ಅಮರತ್ವಂ ಯದುಶ್ರೇಷ್ಠ ಸರ್ವಂ ಕರ್ತುಂ ತ್ವಮರ್ಹಸಿ ।
ತಸ್ಮಾದೇನಂ ಬಲಿಸುತಂ ಕ್ಷಂತುಮರ್ಹಸಿ ಮೇ ಪ್ರಿಯಂ ॥ ೮೨ ॥

---

೭೯. ಭೂಭಾರವನ್ನು ನಾಶಮಾಡುವುದಕ್ಕೋಸ್ಕರ ಕೃಷ್ಣಾವತಾರವನ್ನು ಮಾಡಿರುವ ಆನಂದರೂಪಿಯಾದ ನಿನಗೆ ನಮಸ್ಕಾರವು. ವಿಷ್ಣುವೆ ! ಜಿಷ್ಣುವೆ ! ಯದುನಂದನನೆ ! ನಿನಗೆ ನಮಸ್ಕಾರವು.

೮೦. ಮಹಾದೇವನು ಹೇಳಿದನು–ಶಿವನು ಈ ರೀತಿಯಾಗಿ ಆ ಸ್ವಾಮಿಯನ್ನು ಸ್ತುತಿಸಿ ನಮಸ್ಕರಿಸಿ ಮತ್ತೆ ಕೈಮುಗಿದುಕೊಂಡು ಗಂಭೀರವಾದ ಮಾತಿನಿಂದ ಇಂತೆಂದನು.

೮೧. ಶ್ರೀರುದ್ರನು ಹೇಳಿದನು–ಈ ಬಲಿಸುತನಾದ ಬಾಣನು ಪೂರ್ವದಲ್ಲಿ ನನ್ನನ್ನು ಪೂಜಿಸಿ ವರವನ್ನು ಕೇಳಲು ನಾನು ಅವನಿಗೆ ವರವನ್ನು ಕೊಟ್ಟಿದ್ದೇನೆ.

೮೨. ಅವನಿಗೆ ಅಮರತ್ವವನ್ನು ಕೊಟ್ಟಿರುವೆನು. ಆದ್ದರಿಂದ ನಾನು ಮಾತುಕೊಟ್ಟಿರುವಂತೆ ನೀನು ಮಾಡಬೇಕು. ನನಗೆ ಪ್ರೀತಿಪಾತ್ರನಾದ ಈ ಬಲಿಸುತನನ್ನು ನೀನು ಕ್ಷಮಿಸು.

|| ಮಹಾದೇವ ಉವಾಚ ||

ತಥೇತ್ಯುಕ್ತ್ವಾ ಚ ಭಗವಾನ್ ಬಾಣಂ ಬಲಿಸುತಂ ತದಾ ।
ಪ್ರಾಣಸಂಶಯಮಾಪನ್ನಂ ಛಿನ್ನಬಾಹುಮಸೃಕ್‌ಚಿತಂ || ೮೩ ||

ಸಂಹೃತ್ಯ ಚಕ್ರಂ ಗೋವಿಂದೋ ಮುಮೋಚ ಕರುಣಾನಿಧಿಃ ।
ಮೋಚಯಿತ್ವಾ ಬಲಿಸುತಂ ಶಂಕರಃ ಸಂಶಿತವ್ರತಃ || ೮೪ ||

ವೃಷಭೇಂದ್ರಂ ಸಮಾರುಹ್ಯ ಪಾರ್ವತ್ಯಾ ಸಹಿತಃ ಪ್ರಭುಃ ।
ಯಯೌ ಚ ವಸತಿಸ್ಥಾನಂ ಕೈಲಾಸಂ ಧರಣೀಧರಂ || ೮೫ ||

ಸ ತು ಬಾಣೋ ನಮಸ್ಕೃತ್ಯ ರಾಮಕೃಷ್ಣೌ ಮಹಾಬಲೌ ।
ತಾಭ್ಯಾಂ ವೈ ನಗರೀಂ ಗತ್ವಾ ಮುಮೋಚ ಮದನಾತ್ಮಜಂ || ೮೬ ||

ವಸ್ತ್ರೈರಾಭರಣೈರ್ದಿವ್ಯೈಃ ಪೂಜಯಿತ್ವಾ ಯಥಾರ್ಹತಃ ।
ಉಷಾಂ ಸಂಪ್ರದದೌ ತಸ್ಮೈ ಕೃಷ್ಣಪೌತ್ರಾಯ ಶೌರಯೇ || ೮೭ ||

---

೮೩-೮೫. ಮಹಾದೇವನು ಹೇಳಿದನು-ಆ ಕೃಷ್ಣನು ಹಾಗೆಯೇ ಆಗಲೆಂದು ಹೇಳಿ ತನ್ನ ಚಕ್ರವನ್ನು ಉಪಸಂಹರಿಸಿ ತೆಗೆದುಕೊಂಡು ರಕ್ತದಿಂದ ನೆನೆದು ಪ್ರಾಣದ ವಿಷಯದಲ್ಲಿ ಸಂಶಯವನ್ನು ಹೊಂದಿರುವ ಆ ಬಾಣನನ್ನು ಬದುಕಿಸಿದನು. ಶಂಕರನು ಬಲಿಸುತನಾದ ಬಾಣನನ್ನು ಬಿಡಿಸಿ ಪಾರ್ವತಿಯೊಡನೆ ಬಸವನ ಮೇಲೆ ಕುಳಿತುಕೊಂಡು ತನ್ನ ವಾಸಸ್ಥಾನವಾದ ಕೈಲಾಸ ಪರ್ವತಕ್ಕೆ ಹೊರಟುಹೋದನು.

೮೬. ಅನಂತರ ಬಾಣನು ಆ ರಾಮಕೃಷ್ಣರಿಗೆ ನಮಸ್ಕರಿಸಿ ಅವರನ್ನು ತನ್ನ ಊರಿಗೆ ಕರೆದುಕೊಂಡು ಹೋಗಿ ಆ ಅನಿರುದ್ಧನನ್ನು ಬಿಡಿಸಿದನು.

೮೭. ಆಗ ಬಟ್ಟೆ ಒಡವೆ ಮುಂತಾದುವುಗಳಿಂದ ತನ್ನ ಯೋಗ್ಯತೆಗೆ ಸರಿಯಾಗಿ ಗೌರವಿಸಿ ಉಷೆಯನ್ನು ಆ ಕೃಷ್ಣನ ಮಮ್ಮಗನಾದ ಆ ಅನಿರುದ್ಧನಿಗೆ ಮದುವೆಮಾಡಿ ಕೊಟ್ಟನು.

ಉದ್ವಾಹ್ಯ ರಾಮಕೃಷ್ಣೌ ತಮನಿರುದ್ಧಂ ಯಥಾವಿಧಿ ।
ಬಾಣೇನ ಪೂಜಿತೌ ತತ್ರ ಪ್ರದ್ಯುಮ್ನಸಹಿತೌ ತದಾ　　॥ ೮೮ ॥

ಉಷಯಾ ಸಹಿತಂ ತತ್ರಾನಿರುದ್ಧಂ ವೈ ಜನಾರ್ದನಃ ।
ಆರೋಪ್ಯ ಸ್ಯಂದನೇ ದಿವ್ಯೇ ಯಯೌ ದ್ವಾರವತೀಂ ತದಾ　　॥ ೮೯ ॥

ರಾಮಪ್ರದ್ಯುಮ್ನಸಹಿತಃ ಸೇನಯಾ ಸಹಿತೋ ಹರಿಃ ।
ಪ್ರವಿವೇಶ ಪುರೀಂ ರಮ್ಯಾಂ ತ್ರಿದಶೈರ್ಮಘವಾನಿವ　　॥ ೯೦ ॥

ಅನಿರುದ್ಧೋ ಬಾಣಪುತ್ರ್ಯಾ ನಾನಾರತ್ನಮಯೇಗೃಹೇ ।
ಅನಿಶಂ ರಮಯಾಮಾಸ ನಾನಾಭೋಗೈರ್ಮುದಾನ್ವಿತಃ　　॥ ೯೧ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ಕೃಷ್ಣಚರಿತೇ ಬಾಣಾಸುರ ಸಂಗ್ರಾಮ ವರ್ಣನಂ ನಾಮ ಸಪ್ತಸಪ್ತತ್ಯಧಿಕದ್ವಿಶತತಮೋಧ್ಯಾಯಃ

---

೮೮–೮೯. ಆ ರಾಮಕೃಷ್ಣರು ಅನಿರುದ್ಧನಿಗೆ ಆ ಉಷೆಯನ್ನು ಮದುವೆ ಮಾಡಿಕೊಂಡು ಬಾಣನಿಂದ ಗೌರವಿತರಾಗಿ ಉಷೆಯನ್ನೂ ಅನಿರುದ್ಧನನ್ನೂ ರಥದಲ್ಲಿ ಕುಳ್ಳಿರಿಸಿಕೊಂಡು ಪ್ರದ್ಯುಮ್ನನೊಡನೆ ದ್ವಾರಕೆಗೆ ಹೊರಟರು.

೯೦. ಆ ಕೃಷ್ಣನು ಬಲರಾಮ ಪ್ರದ್ಯುಮ್ನರನ್ನು ಕರೆದುಕೊಂಡು ಸೇನೆಯೊಡನೆ ಆ ದೇವೇಂದ್ರನು ದೇವತೆಗಳೊಡಗೂಡಿ ಹೊರಡುವಂತೆ ಹೊರಟು ತನ್ನ ರಮ್ಯವಾದ ದ್ವಾರಕೆಯನ್ನು ಹೊಂದಿದನು.

೯೧. ಇತ್ತ ಅನಿರುದ್ಧನು ಉತ್ತಮೋತ್ತಮವಾದ, ರತ್ನದಿಂದ ಪ್ರಕಾಶಮಾನವಾದ ಮನೆಯಲ್ಲಿ ಬಹು ಭೋಗಗಳನ್ನು ಭೋಗಿಸುತ್ತ ಉಷೆಯೊಡನೆ ರಮಿಸುತ್ತಿದ್ದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀ ಕೃಷ್ಣ ಚರಿತ್ರೆಯಲ್ಲಿ ಬಾಣಾಸುರ ಸಂಗ್ರಾಮ ಕಥನವೆಂಬ ಇನ್ನೂರ ಎಪ್ಪತ್ತೇಳನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

-x-

## ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಷ್ಟಸಪ್ತತ್ಯಧಿಕದ್ವಿಶತತಮೋಽಧ್ಯಾಯಃ ||



**|| ರುದ್ರ ಉವಾಚ ||**

**ಅಥ ಪೌಂಡ್ರಕವಾಸುದೇವಃ ಕಾಶೀರಾಜೋ ವಾರಣಸ್ಯಾಂ ವಿವಿಕ್ತೇ ದ್ವಾದಶವರ್ಷಂ ಮಹೇಶಮರ್ಚಯನ್ ನಿರಾಹಾರಃ ಪಂಚಾಕ್ಷರಂ ಜಜಾಪ || ೧ ||**

**ಪೌರಶ್ಚರಣಕಾಲೇ ಶಂಕರಂ ಸ್ವನೇತ್ರಕಮಲೇನ ಪೂಜಯಾಮಾಸ || ೨ ||**

**ತತಃ ಶೂಲಪಾಣಿರುಮಾಪತಿಃ ಪ್ರಸನ್ನೋ ವರಂ ವೃಣೀಷ್ವೇತಿ ತಮಾಹ || ೩ ||**

---

### ಇನ್ನೂರ ಎಪ್ಪತ್ತೆಂಟನೆಯ ಅಧ್ಯಾಯವು



೧. ರುದ್ರನು ಹೇಳಿದನು—ಒಂದು ಸಾರಿ ಪೌಂಡ್ರಕವಾಸುದೇವನೆಂದು ಹೆಸರುಳ್ಳ ಕಾಶಿರಾಜನು ನಿರ್ಜನವಾದ ಪ್ರದೇಶದಲ್ಲಿ ಕಾಶಿಯಲ್ಲಿ ಹನ್ನೆರಡು ವರ್ಷಗಳ ಕಾಲದವರೆಗೂ ಈಶ್ವರನನ್ನು ಪೂಜಿಸುತ್ತ ನಿರಾಹಾರವಾಗಿದ್ದುಕೊಂಡು ಶಿವಪಂಚಾಕ್ಷರೀ ಜಪವನ್ನು ಜಪಿಸುತ್ತಿದ್ದನು.

೨. ಈ ಪೌಂಡ್ರಕವಾಸುದೇವನು ತಾನು ಮಂತ್ರವನ್ನು ಪುನಶ್ಚರಣ ಮಾಡುವಾಗ ಆ ಶಂಕರನನ್ನು ತನ್ನ ಕಣ್ಣೆಂಬ ಕಮಲವನ್ನು ಕಿತ್ತು ಪೂಜೆ ಮಾಡಿದನು.

೩. ಆಗ ಶೂಲಪಾಣಿಯಾದ ಶಿವನು ಪ್ರಸನ್ನನಾಗಿ ವರವನ್ನು ಕೇಳಿಕೋ ಎಂಬುದಾಗಿ ಅವನಿಗೆ ಹೇಳಿದನು.

**ಅಸೌ ಪಂಚವಕ್ತ್ರಂ ಸರ್ವಭೂತಪತಿಂ ಶಿವಂ ಪ್ರಸನ್ನಂ ವರದಂ ಮಮ ವಾಸುದೇವಸಮಾನರೂಪಂ ಪ್ರಯಚ್ಛೇತ್ಯುವಾಚ ॥ ೪ ॥**

**ಶಿವಸ್ತಸ್ಮೈ ಶಂಖಚಕ್ರಗದಾಪದ್ಮಯುತಚತುರ್ಭುಜಂ ಪುಂಡರೀಕ ದಳನಿಭಲೋಚನಂ ಕಿರೀಟಮಣಿಕುಂಡಲಪೀತವಸ್ತ್ರಕೌಸ್ತುಭಾಭರಣಾದಿ ಚಿಹ್ನಾನ್ಯಪಿ ದದೌ ॥ ೫ ॥**

**ಸ ತು ವಾಸುದೇವೋಽಹಮಿತಿ ಸರ್ವಲೋಕಾನ್ ಮೋಹಯಾಮಾಸ ॥ ೬ ॥**

**ಕದಾಚಿನ್ಮದಬಲೋತ್ಕಟಂ ತಂ ಕಾಶಿಪತಿಂ ನಾರದೋಽಭ್ಯೇತ್ಯ ಮೂಢ ವಸುದೇವಸುತಂ ಕೃಷ್ಣಮಜಿತ್ವಾ ತವ ವಾಸುದೇವತ್ವಂ ನ ವಿದ್ಯತೇ ಇತ್ಯುವಾಚ ॥ ೭ ॥**

---

೪. ಈ ಕಾಶೀರಾಜನು ಐದು ಮುಖವುಳ್ಳ, ಸರ್ವಭೂತಪತಿಯಾದ, ಶಿವನನ್ನು ಕುರಿತು ಅವನು ಪ್ರಸನ್ನನಾಗಿರುವುದನ್ನು ತಿಳಿದು ಎಲೈ! ವರದನೆ! ನನಗೆ ವಾಸುದೇವನಿಗೆ ಸಮವಾದ ರೂಪವನ್ನು ಕೊಡು ಎಂದನು.

೫. ಶಿವನು ಆತನಿಗೆ ಶಂಖಚಕ್ರಗದಾಪದ್ಮಗಳಿಂದ ಕೂಡಿಕೊಂಡು ಇರುವ ನಾಲ್ಕು ತೋಳುಗಳನ್ನೂ ಪುಂಡರೀಕದಂತೆ ಇರುವ ಕಣ್ಣುಗಳನ್ನೂ ಕಿರೀಟ ಕೌಸ್ತುಭಮಣಿ ಕುಂಡಲ ಹೊಂಬಣ್ಣದ ಬಟ್ಟೆ ಮಣಿಗಳು ಮತ್ತು ಆಭರಣಗಳು ಇವುಗಳ ಚಿಹ್ನೆಯನ್ನೂ ಕೊಟ್ಟನು.

೬. ಆ ಕಾಶೀರಾಜನು ನಾನು ವಾಸುದೇವನು ಎಂಬದಾಗಿ ಎಲ್ಲರನ್ನೂ ಭ್ರಾಂತಿಪಡಿಸಿದನು. (ಮೋಸಮಾಡಿದನು.)

೭. ಮದದಿಂದಲೂ ಬಲದಿಂದಲೂ ಕೂಡಿರುವ ಈ ಕಾಶೀಪತಿಯನ್ನು ಒಂದು ಸಾರಿ ನಾರದನು ನೋಡಿ ಅವನ ಬಳಿಗೆ ಬಂದು ಎಲೈ ದಡ್ಡನೆ! ನೀನು ವಸುದೇವನ ಮಗನಾದ ಕೃಷ್ಣನನ್ನು ಜಯಿಸದೆ ಇರುವಾಗ ನಿನಗೆ ವಾಸುದೇವತನವು ಎಲ್ಲಿಂದ ಬಂದೀತು? ಎಂಬದಾಗಿ ಕೇಳಿದನು.

ಸ ತು ತಸ್ಮಿನ್ನೇವ ಕ್ಷಣೇ ಕೃಷ್ಣಂ ಜೇತುಂ ಗರುಡಪಾತಾಕಾಯುತಂ ರಥಮಾರುಹ್ಯ ತುರಂಗಾಕ್ಷೌಹಿಣೀಬಲೇನ ದ್ವಾರಕಾಮುವಾಪ ॥ ೮ ॥

ತತ್ರ ಪುರದ್ವಾರಿ ಸ್ವರ್ಣಯಾನೇ ಸಂಸ್ಥಿತೋ ವಾಸುದೇವೋಽಹಂ ಯುದ್ಧಾರ್ಥಂ ಸಂಪ್ರಾಪ್ತೋಽಸ್ಮಿ ಮಾಮಜಿತ್ವಾ ತವ ವಾಸುದೇವತ್ವಂ ನಾಸ್ತೀತಿ ದೂತಂ ಪ್ರೇಷಯಾಮಾಸ ॥ ೯ ॥

ಕೃಷ್ಣೋಽಪಿ ತಚ್ಛ್ರುತ್ವಾ ವೈನತೇಯಮಾರುಹ್ಯ ಪೌಂಡ್ರಕೇಣ ಯೋದ್ಧುಂ ಪುರದ್ವಾರಿ ವಿನಿಷ್ಕ್ರಮ್ಯಾಕ್ಷೌಹಿಣೀಬಲೇನ ಸ್ಯಂದನೇ ಸಮಾಸೀನಂ ಶಂಖಚಕ್ರಗದಾಪದ್ಮಹಸ್ತಂ ಪೌಂಡ್ರಕಂ ದದರ್ಶ ॥ ೧೦ ॥

---

೮. ಆ ಪೌಂಡ್ರಕನು ಒಡನೆಯೇ ಆ ಕೃಷ್ಣನನ್ನು ಜಯಿಸಲು ಗರುಡನ ಪತಾಕೆಯಿಂದ ಕೂಡಿರುವ ರಥವನ್ನು ಹತ್ತಿಕೊಂಡು ಅಕ್ಷೌಹಿಣೀಸಂಖ್ಯೆಯ ಕುದುರೆಯ ಸೈನ್ಯವನ್ನು ತೆಗೆದುಕೊಂಡು ದ್ವಾರಕೆಗೆ ಹೋದನು.

೯. ಆ ದ್ವಾರಕಾ ಪಟ್ಟಣದ ಬಾಗಿಲಿನಲ್ಲಿ ಚಿನ್ನದ ರಥದಲ್ಲಿಯೇ ಕುಳಿತುಕೊಂಡು ದೂತನನ್ನು ಕರೆದು "ವಾಸುದೇವನು ಯುದ್ಧಕ್ಕೋಸ್ಕರವಾಗಿ ಬಂದಿದ್ದೇನೆ. ನನ್ನನ್ನು ಜಯಿಸಿದರೆ ನೀನು ವಾಸುದೇವನೆಂದು ಹೆಸರನ್ನು ಇಟ್ಟುಕೊಂಡಿರಬಹುದು. ಇಲ್ಲದಿದ್ದರೆ ಕೂಡದು" ಎಂದು ಹೇಳೆಂಬುದಾಗಿ ಹೇಳಿ ಕಳುಹಿಸಿದನು

೧೦. ದೂತನು ಬಂದು ಕೃಷ್ಣನಿಗೆ ಹೇಳಲು ಅದನ್ನು ಕೇಳಿದ ಕೃಷ್ಣನು ಗರುಡನ ಮೇಲೆ ಕುಳಿತು ಪೌಂಡ್ರಕನೊಡನೆ ಯುದ್ಧಮಾಡಲು ಹೊರಟನು. ಹೋಗಿ ಅಕ್ಷೌಹಿಣೀ ಸೈನ್ಯದೊಡನೆ ಬಾಗಿಲಿನಲ್ಲಿ ರಥದಲ್ಲಿ ಕುಳಿತುಕೊಂಡಿರುವ ಶಂಖಚಕ್ರ ಗದಾ ಹಸ್ತಗಳುಳ್ಳ ಪೌಂಡ್ರಕನನ್ನು ನೋಡಿದನು.

ಅಥ ಶಾರ್ಙ್ಗಮಾದಾಯ ಸಂವರ್ತಾಗ್ನಿಪ್ರಖ್ಯೈರ್ಬಾಣೈಸ್ತಸ್ಯ ರಥಾಶ್ವ ಗಜಪದಾತಿಯುತಂ ಮಹದಕ್ಷೌಹಿಣೀಬಲಂ ಮುಹೂರ್ತಮಾತ್ರೇಣ ನಿಶ್ಶೇಶಂ ದದಾಹ ॥ ೧೧ ॥

ಶರೇಣೈಕೇನ ತಸ್ಯ ಹಸ್ತಾವಸಕ್ತಶಂಖಚಕ್ರಗದಾಹೇತೀರಪಿ ಲೀಲಯೈವ ಚಿಚ್ಛೇದ ॥ ೧೨ ॥

ಪವಿತ್ರೇಣ ಸುದರ್ಶನೇನ ಕಿರೀಟಕುಂಡಲಯುತಂ ತಸ್ಯ ಶಿರಃಕಮಲಂ ಛಿತ್ವಾ ವಾರಾಣಸ್ಯಾಮನ್ತಃಪುರೇ ನಿಪಾತಯಾಮಾಸ ॥ ೧೩ ॥

ತದ್ದೃಷ್ಟ್ವಾ ಸರ್ವೇ ಕಾಶೀನಿವಾಸಿನಃ ಕಿಮೇತದಿತ್ಯಾಶಂಕ್ಯ ವಿಸ್ಮಿತಾ ಬಭೂವುಃ ॥ ೧೪ ॥

---

೧೧. ಒಡನೆಯೇ ಕೃಷ್ಣನು ಶಾರ್ಙ್ಗವೆಂಬ ಧನುಸ್ಸನ್ನು ತೆಗೆದುಕೊಂಡು ಪ್ರಳಯಕಾಲದ ಅಗ್ನಿಯಂತೆ ಜ್ವಲಿಸುತ್ತಿರುವ ಬಾಣಗಳನ್ನು ಬಿಟ್ಟು ಅವನ ಅಕ್ಷೌಹಿಣೀ ಸೈನ್ಯವನ್ನು ಪೂರ್ತಿಯಾಗಿ ನಾಶಮಾಡಿದನು.

೧೨. ಒಂದು ಬಾಣವನ್ನು ಬಿಟ್ಟು ಅವನ ಕೈಯ್ಯಲ್ಲಿದ್ದ ಶಂಖ ಚಕ್ರ ಗದೆಗಳನ್ನೂ ಬಾಣಗಳನ್ನೂ ಬಹು ಸುಲಭವಾಗಿಯೇ ಕತ್ತರಿಸಿದನು.

೧೩. ಕೃಷ್ಣನು ಪವಿತ್ರವಾದ ತನ್ನ ಸುದರ್ಶನದಿಂದ ಕಿರೀಟ ಕುಂಡಲಗಳೊಡನೆ ಕೂಡಿದ ಅವನ ತಲೆಯನ್ನು ಕತ್ತರಿಸಿ ವಾರಾಣಸಿಯಲ್ಲಿರುವ ಅವನ ಅರಮನೆಯ ಅಂತಃಪುರದಲ್ಲಿ ಬೀಳುವಂತೆ ಮಾಡಿದನು.

೧೪. ಅದನ್ನು ನೋಡಿದ ಕಾಶಿಯ ಪಟ್ಟಣಿಗರೆಲ್ಲರೂ ಇದೇನೆಂಬುದಾಗಿ ಆಶ್ಚರ್ಯಗೊಂಡರು.

ತಸ್ಯ ಪೌಂಡ್ರಕಸ್ಯ ಸುತೋ ದಂಡಪಾಣಿರಿತೀರಿತೋ ವಾಸುದೇವೇನ ಭಗವತಾ ನಿಹತಂ ಸ್ವಪಿತರಂ ಶ್ರುತ್ವಾ ಮಾತ್ರಾ ಮೃತ್ಯುನಾ ಸಮಾದಿಷ್ಟಃ ಸ್ವಪುರೋಹಿತೇನಾಭಿಯುಕ್ತೋ ಮಾಹೇಶ್ವರೇಣ ಕ್ರತುನಾ ಶಂಕರಮಿಯಾಜ ॥ ೧೫ ॥

ಸ ತು ಪ್ರಸನ್ನಃ ಕೃಷ್ಣಜಿಘಾಂಸಯಾ ಸಮರ್ಥಾಂ ಮಾಹೇಶ್ವರೀಂ ಕೃತ್ಯಾಂ ತಸ್ಮೈ ಸಂಪ್ರೀತ್ಯಾ ದತ್ತವಾನ್ ॥ ೧೬ ॥

ಸ ಕಾಶಿರಾಜಸ್ತಾಂ ಮಾಹೇಶ್ವರೀಂ ಜ್ವಾಲಾಕುಲೋಪಚಿತವಿಗ್ರಹಾಂ ಸಂದೀಪ್ತಸಟಾಕಲಾಪಾಂ ಪಿಂಗಳನೇತ್ರಾಂ ಜ್ವಲತ್ಕರಾಳವದನಾಂ ತ್ರಿಶೂಲಹಸ್ತಾಂ ಭಸ್ಮಾಂಗರಾಗಲಿಪ್ತಾಂ ನರಶಿರೋಮಾಲಾವಿಭೂಷಿತಾಂ

---

೧೫. ಆ ಪೌಂಡ್ರಕನ ಮಗನಾದ ದಂಡಪಾಣಿಯೆಂಬುವನು ವಾಸುದೇವನು ತನ್ನ ತಂದೆಯನ್ನು ಕೊಂದ ವಿಷಯವನ್ನು ಕೇಳಿ ಮೃತ್ಯುರೂಪಳಾದ ತನ್ನ ತಾಯಿಯ ಅಪ್ಪಣೆಯಿಂದ ಪ್ರೇರಿಸಲ್ಪಟ್ಟವನಾಗಿ ತನ್ನ ಪುರೋಹಿತನ ಹೇಳಿಕೆಯಂತೆ ಒಂದು ಮಾಹೇಶ್ವರ ಯಾಗವನ್ನು ಮಾಡಿ ಶಂಕರನನ್ನು ತೃಪ್ತಿಪಡಿಸಿದನು.

೧೬. ಆ ಶಂಕರನು ಪ್ರಸನ್ನನಾಗಿ ಕೃಷ್ಣನನ್ನು ಕೊಲ್ಲುವುದರಲ್ಲಿ ಸಮರ್ಥವಾದ ಮಾಹೇಶ್ವರೀ ಕೃತ್ಯೆ (ಮಹೇಶ್ವರನು ಕೊಟ್ಟ ಮಾಟದ ಮಸಣಿ) ಯನ್ನು ಪ್ರೀತಿಯಿಂದ ಕೊಟ್ಟನು.

೧೭. ಆ ಮಾಹೇಶ್ವರೀ ಶಕ್ತಿಯು ಜ್ವಾಲೆಯಿಂದ ಕೂಡಿದ ಮೈಯುಳ್ಳದ್ದಾಗಿಯೂ, ಪ್ರಕಾಶಮಾನವಾದ ಜಟೆಗಳುಳ್ಳದ್ದಾಗಿಯೂ, ಕೆಂಚಗಿರುವ ಕಣ್ಣುಳ್ಳದ್ದಾಗಿಯೂ, ಉರಿಯುತ್ತಿರುವಂತೆ ಕಾಣುವ ಭಯಂಕರವಾದ ಮುಖವುಳ್ಳದ್ದಾಗಿಯೂ, ತ್ರಿಶೂಲವನ್ನು ಹಿಡಿದುಕೊಂಡೂ ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡೂ, ನರರ ತಲೆಬುರುಡೆಯ ಮಾಲೆಯನ್ನು ಕತ್ತಿಗೆ ಹಾಕಿಕೊಂಡೂ,

ಸರ್ವದೇವಭಯಂಕರೀಂ ರುದ್ರದತ್ತಾಂ ಸಮೀಕ್ಷ್ಯ ಸಪುತ್ರದಾರಬಾಂಧವ ಸಹಿತಂ ಕೃಷ್ಣಂ ಜಹೀತಿ ಪ್ರೇರಯಾಮಾಸ ॥ ೧೭ ॥

ಸಾ ತು ಸರ್ವಲೋಕಭಯಾವಹಾ ಸರ್ವಾಂ ಪೃಥ್ವೀಂ ಸ್ವತೇಜಸಾ ನಿರ್ದಹಂತೀ ಪ್ರಲಯಾಶನಿನಿರ್ಭರಸ್ವನಂ ನಿನದಂತೀ ದ್ವಾರಕಾಮವಾಪ ॥ ೧೮ ॥

ತತ್ರಸ್ಥಾಸ್ಸರ್ವೇ ಜನಾಸ್ತಾಂ ದೃಷ್ಟ್ವಾ ಮಹಾಪ್ರಲಯಮಿತಿ ಮತ್ವಾ ಹಾಹಾಕಾರಂ ಕುರ್ವಂತಃ ಕೃಷ್ಣಂ ನಿವೇದಯಾಮಾಸುಃ ॥ ೧೯ ॥

ಕೃಷ್ಣೋಽಪಿ ತಾನ್ ಸರ್ವಾನ್ ನ ಭೇತವ್ಯಮಿತ್ಯುಕ್ತ್ವಾ ಪುರಪ್ರಾಕಾರ ತೋರಣೇ ಸ್ಥಿತಾಂ ಮಹಾರೌದ್ರಾಂ ಕೃತ್ಯಾಂ ತಥಾವಿಧಾಂ ದೃಷ್ಟ್ವಾ ಸಕಲ ಶಸ್ತ್ರಾಸ್ತ್ರನಿವಾರಣಸಮರ್ಥಂ ಸಹಸ್ರಾರಂ ಸುದರ್ಶನಂ ತಸ್ಯಾಂ ಕೃತ್ಯಾಯಾಂ ಸಹಸಾ ಮುಮೋಚ ॥ ೨೦ ॥

---

ಎಲ್ಲಾ ದೇವತೆಗಳಿಗೂ ಭಯವನ್ನುಂಟುಮಾಡುವುದಾಗಿಯೂ ಇದ್ದಿತು. ರುದ್ರನು ಕೊಟ್ಟ ಇಂತಹ ಶಕ್ತಿಯನ್ನು ಆ ಕಾಶೀರಾಜನು ನೋಡಿ ಕೃಷ್ಣನನ್ನೂ ಅವನ ಹೆಂಡಿರು ಮಕ್ಕಳನ್ನೂ ಕೊಲ್ಲುವಂತೆ ಹೇಳಿಕಳುಹಿಸಿದನು.

೧೮. ಆ ಮಾಹೇಶ್ವರೀ ಶಕ್ತಿಯು ಎಲ್ಲಾ ಲೋಕಕ್ಕೂ ಭಯವನ್ನುಂಟು ಮಾಡುತ್ತಾ ಭೂಮಿಯನ್ನೆಲ್ಲಾ ತನ್ನ ಕಾಂತಿಯಿಂದಲೇ ಸುಡುತ್ತಾ ಪ್ರಳಯ ಕಾಲದ ಸಿಡಿಲಿನಂತೆ ಭಯಂಕರವಾಗಿ ಧ್ವನಿಯನ್ನು ಮಾಡುತ್ತಾ ದ್ವಾರಕೆಗೆ ಬಂದಿತು.

೧೯. ಆ ದ್ವಾರವತಿಯ ಜನರೆಲ್ಲರೂ ಈ ಶಕ್ತಿಯನ್ನು ನೋಡಿ ಇದು ಮಹಾ ಪ್ರಲಯವನ್ನುಂಟುಮಾಡತಕ್ಕುದೆಂದು ತಿಳಿದು ಹಾಹಾ ಎಂದು ಕೂಗುತ್ತಾ ಕೃಷ್ಣನಿಗೆ ಹೋಗಿ ಹೇಳಿದರು.

೨೦. ಕೃಷ್ಣನು ಅವರನ್ನು ನೋಡಿ ಹೆದರಬೇಡಿರೆಂದು ಹೇಳುತ್ತಾ ಪಟ್ಟಣದ ಕೋಟೆಯ ಗೋಡೆಯ ಮೇಲೆ ಕುಳಿತಿರುವ ಬಹು ಭಯಂಕರವಾದ ಆ ಕೃತ್ಯೆಯನ್ನು ನೋಡಿ ಶಸ್ತ್ರ ಅಸ್ತ್ರ ಮತ್ತೆ ಯಾವುದಿದ್ದರೂ ಅವನ್ನೆಲ್ಲಾ ನಿವಾರಣೆ ಮಾಡಲು ಸಮರ್ಥವಾದ ಸಾವಿರ ಹಾರೆ ಕಾಲುಗಳುಳ್ಳ ಸುದರ್ಶನ ಚಕ್ರವನ್ನು ಆ ಕೃತ್ಯೆಯ ಮೇಲೆ ಬಿಟ್ಟನು.

ಸಾ ತು ಕಲ್ಪಾಂತಾರ್ಕಕೋಟಿಸಮಂ ವರ್ಚಸಾ ಶತಯೋಜನೋಚ್ಛ್ರಿತಂ ಸಕಲದೀಪ್ತಾಸ್ತ್ರಯುತಂ ಹಿರಣ್ಮಯಂ ಪ್ರಭಾಪೂರ್ಣಂ ಸಕಲಜಗತ್ಪ್ರಳಯಸ್ಥಿತಿಸಮರ್ಥಂ ಸಹಸ್ರಾರಂ ಸರ್ವದೇವನಮಸ್ಕೃತಂ ಜಗಚ್ಛರಣಭೂತಂ ಮಹಾಸುದರ್ಶನಂ ವಿಲೋಕ್ಯ ವಿನಷ್ಟತೇಜಾ ಭಯಾರ್ತಾ ಕ್ರೋಶಂತೀ ವಾರಾಣಸೀಂ ಪ್ರತಿ ದುದ್ರಾವ ॥ ೨೧ ॥

ಸುದರ್ಶನಮಪಿ ತಾಂ ಕೃತ್ಯಾಂ ಭೃಶಮನ್ವಗಾತ್ ॥ ೨೨ ॥

ಸಾಪಿ ಭಯಾರ್ತಾ ಕ್ರೋಶಂತೀ ಕಾಶಿಪತೇಸ್ತಸ್ಯಾಂತಃಪುರಂ ಪ್ರವಿವೇಶ ॥ ೨೩ ॥

ಸುದರ್ಶನೋಽಪಿ ತಾಂ ವಾರಾಣಸೀಂ ಪುರೀಂ ಪ್ರಾಪ್ಯ ಸಭೃತ್ಯಬಲವಾಹನಂ ಪೌಂಡ್ರಕಸುತಂ ದಂಡಪಾಣಿಂ ನಾಮ ಕಾಶಿರಾಜಂ

---

೨೧. ಆ ಕೃತ್ಯೆಯು ಕಲ್ಪಾಂತದಲ್ಲಿರುವ ಸೂರ್ಯರ ಕೋಟಿಯಷ್ಟು ತೇಜಸ್ಸುಳ್ಳ ನೂರು ಯೋಜನಗಳಷ್ಟು ಎತ್ತರವಿರುವ, ಪ್ರಕಾಶಮಾನವಾದ ಹಾರೆ ಕಾಲುಗಳುಳ್ಳ, ಚಿನ್ನದಿಂದ ಮಾಡಿರುವ, ಬಹು ಪ್ರಭೆಯಿಂದ ಕೂಡಿದ, ಎಲ್ಲಾ ಪ್ರಪಂಚವನ್ನೂ ನಾಶಮಾಡುವುದರಲ್ಲಿ ಸಮರ್ಥವಾದ, ಸಾವಿರ ಹಾರೆ ಕಾಲುಗಳಿಂದ ಕೂಡಿದ, ಜಗತ್ತಿಗೆ ರಕ್ಷಕವಾದ, ಆ ದೊಡ್ಡ ಸುದರ್ಶನವನ್ನು ನೋಡಿ ತನ್ನ ತೇಜಸ್ಸನ್ನು ಕಳೆದುಕೊಂಡು ಗೋಳಿಡುತ್ತಾ ಮತ್ತೆ ಕಾಶಿಗೆ ಓಡಿಹೋಯಿತು.

೨೨. ಈ ಸುದರ್ಶನ ಚಕ್ರವೂ ಕೂಡ ಆ ಕೃತ್ಯೆಯನ್ನು ಓಡಿಸಿಕೊಂಡು ಹೋಯಿತು.

೨೩. ಆ ಕೃತ್ಯೆಯು ಹೆದರಿಕೊಂಡು ಗೋಳಿಡುತ್ತಾ ಆ ಕಾಶೀರಾಜನ ಅಂತಃಪುರದೊಳಕ್ಕೆ ನುಗ್ಗಿತು.

೨೪. ಸುದರ್ಶನ ಚಕ್ರವು ಆ ವಾರಾಣಸಿಗೆ ಹೋಗಿ ಆ ದಂಡಪಾಣಿ ಯೆಂಬ ಕಾಶಿ ರಾಜನನ್ನೂ ಅವನ ಮಕ್ಕಳು ಬಂಧುಗಳು ಆಳುಗಳು ಸೈನ್ಯಗಳು

ಬಹುಪ್ರಾಸಾದಹರ್ಮ್ಯಮಾಲಿನೀಂ ಪುರೀಂ ಮಾಹೇಶ್ವರೀಮಪಿ
ಭಸ್ಮಾವಶೇಷಂ ದಗ್ಧ್ವಾ ಸಕಲದೇವಮಹರ್ಷಿಭಿಃ ಪೂಜ್ಯಮಾನಃ ಪುನರೇವ
ದ್ವಾರವತ್ಯಾಂ ಕೃಷ್ಣಹಸ್ತಂ ಸುಸೌಮ್ಯಂ ತಲ್ಪಮಿವ ಆವಿವೇಶ || ೨೪ ||

|| ಅತ್ರ ಚ ಶ್ಲೋಕಾ ಗೀಯಂತೇ ||

ಶಸ್ತ್ರಾಸ್ತ್ರಮೋಕ್ಷಮಜರಂ ದಗ್ಧ್ವಾ ತದ್ಬಲಮೋಜಸಾ |
ಕೃತ್ಯಾಂ ಭಸ್ಮಾವಶೇಷಾಂ ರೌಂ ತತೋ ವಾರಾಣಸೀಂ ಪುರೀಂ || ೨೫ ||

ಪ್ರಭೂತರಥಮಾತಂಗಾಂ ಸಾಶ್ವಾಂ ಪುಂಸ್ತ್ರೀಸಮನ್ವಿತಾಂ |
ಸಾಶೇಷಕೋಶಕೋಷ್ಠಾಂ ತಾಂ ದುರ್ನಿರೀಕ್ಷ್ಯಾಂ ಸುರೈರಪಿ || ೨೬ ||

ದ್ವಾರೋಪಲಕ್ಷಿತಾಶೇಷಗೃಹಪ್ರಾಕಾರಚತ್ವರಾಂ |
ಪ್ರದದಾಹ ಹರೇಶ್ಚಕ್ರಂ ಸಕಲಾಮೇವ ತಾಂ ಪುರೀಂ || ೨೭ ||

---

ಎಲ್ಲವನ್ನೂ ಮತ್ತು ದೊಡ್ಡ ದೊಡ್ಡ ಮನೆಗಳಿಂದ ಕೂಡಿದ ಆ ಕಾಶೀಪಟ್ಟಣ ವನ್ನೂ ಈಶ್ವರನದಾದರೂ ಕೂಡ ಬಿಡದೆ ಸುಟ್ಟು ಬೂದಿಮಾಡಿ ದೇವತೆಗಳಿಂದಲೂ ಮಹರ್ಷಿಗಳಿಂದಲೂ ಹೊಗಳಿಸಿಕೊಳ್ಳುತ್ತಾ ಮತ್ತೆ ದ್ವಾರಕೆಗೆ ಬಂದು ಕೃಷ್ಣನ ಕೈಯ್ಯನ್ನು ಸೌಮ್ಯವಾದ ಹಾಸಿಗೆಯನ್ನೋ ಎಂಬಂತೆ ಹೊಂದಿತು.

೨೫. ಈ ವಿಷಯದಲ್ಲಿ ಈ ಶ್ಲೋಕಗಳು ಹೇಳಲ್ಪಟ್ಟಿವೆ– ಆ ಚಕ್ರವು ಶಸ್ತ್ರ ಗಳಿಂದಲೂ ಅಸ್ತ್ರಗಳಿಂದಲೂ ಪರಿಪೂರ್ಣವಾಗಿದ್ದ, ಮೋಕ್ಷವನ್ನು ಕೊಡುವ, ಯಾವಾಗಲೂ ನಾಶವಾಗದ, ಆ ಕಾಶಿಯನ್ನೂ ಆ ಕಾಶಿರಾಜನ ಸೈನ್ಯವನ್ನೂ ನಾಶಪಡಿಸಿ ಆ ಕೃತ್ಯೆಯನ್ನು ಸುಟ್ಟು ನಾಶಪಡಿಸಿತು.

೨೬–೨೭. ಮತ್ತೆ ಆ ಚಕ್ರವು ಆನೆ ಕುದುರೆ ರಥಗಳುಳ್ಳ, ಹೆಂಗಸರು ಗಂಡಸರುಗಳಿಂದ ಕೂಡಿದ, ಬಹುವಾದ ಧನವುಳ್ಳ ಬೊಕ್ಕಸಗಳಿಂದ ಕೂಡಿದ, ದೇವತೆಗಳಿಂದಲೂ ನೋಡಲಸಾಧ್ಯವಾದ, ಬಾಗಿಲಿನಲ್ಲಿ ನಿಂತರೇ ಕಾಣುತ್ತಿರುವ ಸಾಲಿನ ಮನೆಗಳೂ ಪ್ರಾಕಾರಗಳೂ ರಾಜಬೀದಿಗಳೂ ಉಳ್ಳ, ಆ ಪಟ್ಟಣವನ್ನೆಲ್ಲಾ ಸುಟ್ಟುಹಾಕಿತು.

ಅಕ್ಷೀಣಗತಿಸಾಮರ್ಥ್ಯಮಸಾಧ್ಯಕರಸಾಧನಂ ।
ತಚ್ಚಕ್ರಂ ಪ್ರಸ್ರವದ್ದೀಪ್ತಿ ವಿಷ್ಣೋರಭ್ಯಾಯಯೌ ಕರಂ ॥ ೨೮ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ಕೃಷ್ಣ ಚರಿತೇ ಪೌಂಡ್ರಕಪುತ್ರಕೃತ್ಯಾವಿಧ್ವಂಸನಂ ನಾಮ ಅಷ್ಟಸಪ್ತತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೨೮. ಅನಂತರ ಬಹುವಾದ ಗಮನ ಶಕ್ತಿಯುಳ್ಳ, ಬಹು ಉತ್ತಮೋತ್ತಮವಾದ ಆಯುಧ ರೂಪವಾದ, ಕಾಂತಿಯನ್ನು ಸುರಿಸುತ್ತಿರುವ, ಆ ಸುದರ್ಶನ ಚಕ್ರವು ವಿಷ್ಣುವಿನ ಕೈಗೆ ಮತ್ತೆ ಬಂದು ಸೇರಿತು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀ ಕೃಷ್ಣ ಚರಿತ್ರೆಯಲ್ಲಿ ಪೌಂಡ್ರಕ ಪುತ್ರನು ಕಳುಹಿಸಿದ ಕೃತ್ಯಾ ವಿಧ್ವಂಸನವೆಂಬ ಇನ್ನೂರ ಎಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಊನಾಶೀತಿದ್ವಿಶತತಮೋಽಧ್ಯಾಯಃ ||



**|| ಶ್ರೀ ರುದ್ರ ಉವಾಚ ||**

**ಅಥ ಮಗಧಾಧಿಪಃ ಕಂಸವಧಾನಂತರಂ ದ್ವಿಷನ್ನೇವ ಯಾದವಾ ಸಂಪೀಡಯಾಮಾಸ ॥ ತೇ ದುಃಖಿತಾಃ ಕೃಷ್ಣಮೂಚುಃ || ೧ ||**

**ಸ ಚ ಭೀಮಾರ್ಜುನಾವಾಹೂಯ ಮಂತ್ರಯಾಮಾಸ ॥ ಕೃಷ್ಣೋ ನೇನ ರುದ್ರಃ ಪೂಜಿತಸ್ತತ್ಪ್ರಸಾದಾಚ್ಛಸ್ತ್ರೈರವಧ್ಯಃ ॥ ಪರಂ ಕೇನಾಪಿ ಪ್ರಕಾರೇಣ ಹಂತವ್ಯ ಇತಿ || ೨ ||**

---

## ಇನ್ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯವು



೧. ಶ್ರೀ ರುದ್ರನು ಹೇಳಿದನು—ಅನಂತರ ಮಗಧದೇಶದ ರಾಜನಾದ ಜರಾಸಂಧನು ಕೃಷ್ಣನು ಕಂಸನನ್ನು ಕೊಂದಮೇಲೆ ದ್ವೇಷದಿಂದ ಯಾದವರನ್ನು ಪೀಡಿಸುತ್ತಿದ್ದನು. ಇದರಿಂದ ಅವರು ದುಃಖಗೊಂಡು ಕೃಷ್ಣನಿಗೆ ಹೇಳಿದರು.

೨. ಆಗ ಕೃಷ್ಣನು ಭೀಮಾರ್ಜುನರನ್ನು ಕರೆದು ಅವರೊಡನೆ ಜರಾಸಂಧನು ರುದ್ರನನ್ನು ಪೂಜಿಸಿರುವನು. ಅವನ ಅನುಗ್ರಹದಿಂದ ಅವನನ್ನು ಶಸ್ತ್ರಗಳಿಂದ ಕೊಲ್ಲಲು ಸಾಧ್ಯವಿಲ್ಲ. ಆದರೆ ಮತ್ತಾವುದಾದರೂ ಉಪಾಯದಿಂದ ಕೊಲ್ಲಲೇಬೇಕು. ಎಂದು ಮಂತ್ರಾಲೋಚನೆ ಮಾಡಿದನು.

ಅಥ ವಿಚಾರ್ಯ ಭೀಮಮುವಾಹ ॥ ಏನಂ ಪ್ರತಿ ಮಲ್ಲಯುದ್ಧಂ ಕುರು ॥
ತತ್ತೇನ ಪ್ರತಿಜ್ಞಾತಂ ॥ ೩ ॥

ಅಥ ಸಕಲಚರಾಚರಜಗದ್ವಂದ್ಯೋ ವಾಸುದೇವೋ ಭೀಮಾರ್ಜುನ ಸಹಿತೋ ಜರಾಸಂಧಸ್ಯ ಪುರೀಂ ಗತ್ವಾ ವಿಪ್ರವೇಷೇಣ ತಸ್ಯ ಅಂತಃಪುರಮವಾಪ ॥ ೪ ॥

ಸೋಽಪಿ ಮಹಾವೀರ್ಯಾನ್ ಕ್ಷತ್ರಿಯಾನ್ ಯುದ್ಧೇ ನಿರ್ಜಿತ್ಯ ಬಲಾದ್ಗೃಹೀತ್ವಾ ಸ್ವವೇಶ್ಮನಿ ನಿರುಧ್ಯ ಮಾಸಿ ಮಾಸಿ ಕೃಷ್ಣಚತುರ್ದಶ್ಯಾಮೇಕೈಕಂ ಹತ್ವಾ ತದ್ರಕ್ತೇನೈವ ಬಲಿಂ ಭೈರವಾಯ ಅಕರೋತ್ ॥ ೫ ॥

ಏವಂವಿಧಸಕಲರಾಷ್ಟ್ರಜನಪದಪಾರ್ಥಿವವಧದೀಕ್ಷಾಂ ಕುರ್ವತೋ ಜರಾಸಂಧಸ್ಯ ಗೃಹಂ ವಿಪ್ರವೇಷೇಣೈವ ಪ್ರವಿವೇಶ ॥ ೬ ॥

---

೩. ಆಗ ಯೋಚಿಸುತ್ತಾ ಭೀಮನನ್ನು ಕುರಿತು ನೀನು ಆ ಜರಾಸಂಧನೊಡನೆ ಮಲ್ಲಯುದ್ಧವನ್ನು ಮಾಡು ಎಂದು ಹೇಳಿದನು. ಭೀಮನು ಹಾಗೆಯೇ ಆಗಲೆಂದು ಪ್ರತಿಜ್ಞೆಮಾಡಿದನು.

೪. ಆಮೇಲೆ ಚರಾಚರ ಜಗದ್ವಂದ್ಯನಾದ ವಾಸುದೇವನು ಭೀಮಾರ್ಜುನರೊಡನೆ ಜರಾಸಂಧನ ಪಟ್ಟಣಕ್ಕೆ ಹೋಗಿ ಬ್ರಾಹ್ಮಣ ವೇಷದಿಂದ ಅವನ ಅಂತಃಪುರಕ್ಕೆ ಹೋದನು.

೫. ಆ ಜರಾಸಂಧನು ಬಹುಬಲಿಷ್ಠರಾದ ಕ್ಷತ್ರಿಯರನ್ನು ಗೆದ್ದು ಬಲಾತ್ಕಾರದಿಂದ ಅವರನ್ನು ಹಿಡಿದು ತಂದು ತನ್ನ ಮನೆಯಲ್ಲಿ ಸೆರೆಯಿಟ್ಟು ಪ್ರತಿ ತಿಂಗಳಿನಲ್ಲಿಯೂ ಕೃಷ್ಣಪಕ್ಷದ ಚತುರ್ದಶಿಯ ದಿವಸ ಒಬ್ಬೊಬ್ಬನನ್ನು ಕೊಂದು ಅವನ ರಕ್ತದಿಂದ ಭೈರವನಿಗೆ ಪೂಜೆಮಾಡಿ ಬಲಿಯನ್ನು ಹಾಕುತ್ತಿದ್ದನು.

೬. ಈ ರೀತಿಯಾಗಿ ಎಲ್ಲಾ ದೇಶದ ರಾಜರನ್ನೂ ಕೊಲ್ಲುವುದಕ್ಕೆ ದೀಕ್ಷೆಯನ್ನು ಮಾಡಿಕೊಂಡಿರುವ ಆ ಜರಾಸಂಧನ ಮನೆಯನ್ನು ಭೀಮಾರ್ಜುನರೊಡನೆ ಬ್ರಾಹ್ಮಣವೇಷದಿಂದ ಪ್ರವೇಶಿಸಿದನು.

ಸ ತು ತಾನ್ ದೃಷ್ಟ್ವಾ ದಂಡವತ್ಪ್ರಣತೋ ಭೂತ್ವಾ ಯಥೋಚಿತಾಸನೇಷು ನಿವೇಶ್ಯ ಮಧುಪರ್ಕವಿಧಾನೇನ ಸಂಪೂಜ್ಯ ಧನ್ಯೋಽಸ್ಮಿ ಕೃತಕೃತ್ಯೋಽಸ್ಮಿ ಕಿಮರ್ಥಂ ಭವಂತೋ ಮೇ ಸಮೀಪಮಾಗತಾಸ್ತದ್ವಕ್ತವ್ಯಮಹಂ ತತ್ಸರ್ವಂ ಭವದ್ಭ್ಯೋ ದಾಸ್ಯಾಮೀತ್ಯುವಾಚ　　　　|| ೭ ||

ತೇಷಾಂ ವಾಸುದೇವಃ ಪ್ರಹರ್ಸ್ಯ ಪಾರ್ಥಿವಂ ತಮುವಾಚ । ಕೃಷ್ಣಭೀಮಾರ್ಜುನಾ ಯುದ್ಧಾರ್ಥಮಾಗತಾಃ ಸ್ಮಃ । ಅಸ್ಮಾಕಮನ್ಯತಮಂ ದ್ವಂದ್ವಯುದ್ಧಾರ್ಥಂ ವೃಣೀಷ್ವೇತ್ಯವದತ್　　　　|| ೮ ||

ಸೋಽಪಿ ತಥೇತ್ಯವದತ್ । ತತೋ ದ್ವಂದ್ವಯುದ್ಧಾಯ ಮಾರುತಿಂ ವರಯಾಮಾಸ । ತಯೋರ್ಭೀಮಜರಾಸಂಧಯೋರಭಿತೋ ಭಯಂಕರಂ ಮಲ್ಲಯುದ್ಧಂ ಪಂಚವಿಂಶತಿವಾಸರಮಭೂತ್　　　　|| ೯ ||

---

೭. ಜರಾಸಂಧನು ಅವರನ್ನು ನೋಡಿ ದೀರ್ಘದಂಡನಮಸ್ಕಾರವನ್ನು ಮಾಡಿ ಯೋಗ್ಯವಾದ ಆಸನದಲ್ಲಿ ಕುಳ್ಳಿರಿಸಿ ಮಧುಪರ್ಕ ವಿಧಿಯಿಂದ ಪೂಜಿಸಿ, ಧನ್ಯನಾದೆನು. ಕೃತಕೃತ್ಯನಾದೆನು. ನೀವೇತಕ್ಕೆ ನನ್ನ ಸಮೀಪಕ್ಕೆ ಬಂದಿರಿ ? ಅದನ್ನು ಹೇಳಿರಿ. ನೀವು ಕೇಳಿದುದೆಲ್ಲವನ್ನೂ ಕೊಡುತ್ತೇನೆಂದನು.

೮. ಆಗ ಅವರೊಳಗೆ ವಾಸುದೇವನು ನಾವು ಕೃಷ್ಣಭೀಮಾರ್ಜುನರು. ಯುದ್ಧಕ್ಕೋಸ್ಕರ ಬಂದಿದ್ದೇವೆ. ನಮ್ಮಲ್ಲಿ ಯಾರೊಡನೆ ಬೇಕಾದರೂ ದ್ವಂದ್ವಯುದ್ಧವನ್ನು ನಿನಗೆ ಬಲವಿದ್ದರೆ ಬೇಗಮಾಡು. ಅದೇ ನಾವು ಕೇಳತಕ್ಕುದ್ದು. ಎಂದರು.

೯. ಆ ಜರಾಸಂಧನು ಹಾಗೆಯೇ ಆಗಲೆಂದು ಹೇಳಿದನು. ಆಗ ಆ ಮೂವರನ್ನೂ ನೋಡಿ ಭೀಮನನ್ನು ಯುದ್ಧಕ್ಕೆ ಬರುವಂತೆ ಹೇಳಿದನು. ಆಗ ಭೀಮ ಜರಾಸಂಧರಿಗೆ ಭಯಂಕರವಾದ ಮಲ್ಲಯುದ್ಧವು ನಡೆಯಿತು. ಹೀಗೆ ನಡೆಯುತ್ತಾ ಇಪ್ಪತ್ತೈದು ದಿನಗಳವರೆಗೂ ನಡೆಯಿತು.

ಕತಃ ಕೃಷ್ಣೇನೈವ ಸಂಚೋದಿತೋ ವಾಯುಸೂನುಸ್ತಸ್ಯ ಶರೀರಂ ದ್ವಿಧಾಕೃತ್ಯ ಭೂಮೌ ನಿಪಾತಯಾಮಾಸ ॥ ಏವಂ ಜರಾಸಂಧಂ ಪಾಂಡುಪುತ್ರೇಣ ಹತ್ವಾ ತಾನ್ ಜರಾಸಂಧನಿರೋಧಿತಾನ್ ವಾಸುದೇವೋಽಪಿ ಪಾರ್ಥಿವಾನ್ ಮೋಚಯಾಮಾಸ ॥ ೧೦ ॥

॥ ಅತ್ರ ಶ್ಲೋಕೋ ಗೀಯತೇ ॥

ನಿಹತ್ಯ ವಾಯುಪುತ್ರೇಣ ಜರಾಸಂಧಂ ಯದೂದ್ವಹಃ
ತದ್ಗೃಹೇ ಸನ್ನಿರುದ್ಧಾಂಸ್ತು ಮೋಚಯಾಮಾಸ ಪಾರ್ಥಿವಾನ್ ॥ ೧೧ ॥

ತೇ ಚ ನಮಸ್ಕೃತ್ವಾ ಸ್ತುತ್ವಾ ಚ ಮಧುಸೂದನಂ
ಸ್ವಾನ್ ಸ್ವಾನ್ ಜನಪದಾನ್ ಸರ್ವೇ ಜಗ್ಮುಃ ಕೃಷ್ಣೇನ ರಕ್ಷಿತಾಃ ॥ ೧೨ ॥

ಅಥ ತಾಭ್ಯಾಮಿಂದ್ರಪ್ರಸ್ಥಂ ಗತ್ವಾ ವಾಸುದೇವಸ್ತತ್ರಮಹಾಕ್ರತುಂ
ರಾಜಸೂಯಂ ಯುಧಿಷ್ಠಿರಂ ಕಾರಯಾಮಾಸ ॥ ೧೩ ॥

---

೧೦. ಅನಂತರ ಕೃಷ್ಣನಿಂದ ಸಂಜ್ಞೆಮಾಡಲ್ಪಟ್ಟು ಅದನ್ನು ತಿಳಿದುಕೊಂಡ ಭೀಮನು ಆ ಜರಾಸಂಧನ ಶರೀರವನ್ನು ಎರಡು ಭಾಗವಾಗಿ ಸೀಳಿ ನೆಲದಮೇಲೆ ಬಿಸುಟನು. ಈ ರೀತಿಯಾಗಿ ಶ್ರೀ ಕೃಷ್ಣನು ಭೀಮನ ಕೈಯ್ಯಿಂದ ಜರಾಸಂಧನನ್ನು ಕೊಲ್ಲಿಸಿ ಜರಾಸಂಧನು ಸೆರೆಯಿಟ್ಟಿದ್ದ ರಾಜರನ್ನೆಲ್ಲಾ ಬಿಡಿಸಿಬಿಟ್ಟನು.

೧೧. ಈ ವಿಷಯದಲ್ಲಿ ಈ ಶ್ಲೋಕವು ಹೇಳಲ್ಪಟ್ಟಿದೆ– ಶ್ರೀ ಕೃಷ್ಣನು ಭೀಮನ ಕೈಯ್ಯಿಂದ ಜರಾಸಂಧನನ್ನು ಕೊಲ್ಲಿಸಿ ಅವನ ಮನೆಯಲ್ಲಿ ಬಂಧಿತರಾಗಿದ್ದ ರಾಜರನ್ನೆಲ್ಲಾ ಬಿಡಿಸಿದನು.

೧೨. ಅವರೆಲ್ಲರೂ ಆ ಕೃಷ್ಣನಿಗೆ ನಮಸ್ಕರಿಸಿ ಅನೇಕ ವಿಧವಾಗಿ ಸ್ತುತಿಸಿ ಕೃಷ್ಣನಿಂದ ಬೀಳ್ಕೊಂಡವರಾಗಿ ತಮ್ಮ ತಮ್ಮ ದೇಶಗಳಿಗೆ ಹೊರಟುಹೋದರು.

೧೩. ಆಮೇಲೆ ಆ ಭೀಮಾರ್ಜುನರ ಜೊತೆಯಲ್ಲಿ ಇಂದ್ರಪ್ರಸ್ಥಕ್ಕೆ ಹೋಗಿ ವಾಸುದೇವನು ಯುಧಿಷ್ಠಿರನ ಕೈಯ್ಯಲ್ಲಿ ರಾಜಸೂಯವೆಂಬ ದೊಡ್ಡ ಯಾಗವನ್ನು ಮಾಡಿಸಿದನು.

ತತ್ರ ಸಮಾಪ್ತೇ ಕ್ರತಾವಗ್ರಪೂಜಾಂ ಭೀಷ್ಮಾನುಮತೇನ ಕೃಷ್ಣಾಯ ದತ್ತವಾನ್ ॥ ೧೪ ॥

ತತ್ರ ಶಿಶುಪಾಲಃ ಕೃಷ್ಣಂ ಬಹೂನ್ಯಾಕ್ಷೇಪವಾಕ್ಯಾನಿ ಉಕ್ತವಾನ್ ॥ ೧೫ ॥

ಕೃಷ್ಣೋಽಪಿ ಸುದರ್ಶನೇನ ತಸ್ಯ ಶಿರಃ ಚಿಚ್ಛೇದ ॥ ೧೬ ॥

ಅಸೌ ಜನ್ಮತ್ರಯಾವಸಾನೇ ಹರೇಸ್ಸಾರೂಪ್ಯಮಗಮತ್ ॥ ೧೭ ॥

ಅಥ ಶಿಶುಪಾಲಂ ನಿಹತಂ ಶ್ರುತ್ವಾ ದಂತವಕ್ತ್ರಃ ಕೃಷ್ಣೇನ ಯೋದ್ಧುಂ ಮಥುರಾಂ ಜಗಾಮ ॥ ೧೮ ॥

ಕೃಷ್ಣಸ್ತು ತಚ್ಛ್ರುತ್ವಾ ರಥಮಾರುಹ್ಯ ತೇನ ಯೋದ್ಧುಂ ಮಥುರಾ ಮಾಯಯೌ ॥ ೧೯ ॥

---

೧೪. ಆ ಯಾಗವು ಮುಗಿದನಂತರ ಭೀಷ್ಮನ ಒಪ್ಪಿಗೆಯಂತೆಯೂ ಅವನ ಮಾತಿನಂತೆಯೂ ಕೃಷ್ಣನಿಗೆ ಅಗ್ರಪೂಜೆಯನ್ನು ಧರ್ಮರಾಜನು ಕೊಟ್ಟನು.

೧೫. ಅಲ್ಲಿ ಶಿಶುಪಾಲನು ಕೃಷ್ಣನನ್ನು ಕುರಿತು ಬಹು ಆಕ್ಷೇಪಕರವಾದ ಮಾತುಗಳನ್ನಾಡಿದನು.

೧೬. ಕೃಷ್ಣನು ತನ್ನ ಸುದರ್ಶನಚಕ್ರದಿಂದ ಅವನ ತಲೆಯನ್ನು ಕತ್ತರಿಸಿದನು.

೧೭. ಈ ಶಿಶುಪಾಲನು ಮೂರು ಜನ್ಮವನ್ನು ಎತ್ತಿಯಾದಮೇಲೆ ಆ ಹರಿಯ ಸಾರೂಪ್ಯವನ್ನು ಹೊಂದಿದನು.

೧೮. ದಂತವಕ್ತ್ರನು ಶಿಶುಪಾಲನು ಕೊಲ್ಲಲ್ಪಟ್ಟದ್ದನ್ನು ಕೇಳಿ ಕೃಷ್ಣನೊಡನೆ ಯುದ್ಧಮಾಡುವುದಕ್ಕೆ ಮಥುರೆಗೆ ಹೋದನು.

೧೯. ಕೃಷ್ಣನು ದಂತವಕ್ತ್ರನು ಮಥುರೆಗೆ ಬಂದುದನ್ನು ಕೇಳಿ ರಥದಲ್ಲಿ ಕುಳಿತು ಅವನೊಡನೆ ಯುದ್ಧಮಾಡಲು ಮಥುರೆಯಿಂದ ಹೊರಗೆ ಬಂದನು.

ತಯೋರ್ದಂತವಕ್ತ್ರ ವಾಸುದೇವಯೋರಹೋರಾತ್ರಂ ಮಧುರಾ ಪುರದ್ವಾರಿ ಸಂಗ್ರಾಮಃ ಸಮವರ್ತತ ॥ ಕೃಷ್ಣಸ್ತು ಗದಯಾ ತಂ ಜಘಾನ ॥ ೨೦ ॥

ಸ ತು ಚೂರ್ಣಿತಸರ್ವಾಂಗೋ ವಜ್ರನಿರ್ಭಿನ್ನಮಹೀಧರ ಇವ ಗತಾ ಸುರವನೀತಲೇ ಪಪಾತ ॥ ೨೧ ॥

ಸೋಽಪಿ ಹರೇಃ ಸಾಯುಜ್ಯಂ ಯೋಗಿಗಮ್ಯಂ ನಿತ್ಯಾನಂದ ಸುಖಂ ಶಾಶ್ವತಂ ಪರಮಂ ಪದಮವಾಪ ॥ ೨೨ ॥

ಇತ್ಥಂ ಜಯವಿಜಯೌ ಸನಕಾದಿಶಾಪವ್ಯಾಜೇನ ಕೇವಲಂ ಭಗ ವತೋ ಲೀಲಾರ್ಥಂ ಸಂಸೃತಾವವತೀರ್ಯ ಜನ್ಮತ್ರಯೇಽಪಿ ತೇನೈವ ನಿಹತೌ ಜನ್ಮತ್ರಯಾವಸಾನೇ ಮುಕ್ತಿಮವಾಪ್ತೌ ॥ ೨೩ ॥

---

೨೦. ಆ ದಂತವಕ್ತ್ರ ವಾಸುದೇವರಿಗೆ ಮಧುರಾಪುರದ ಬಾಗಿಲಿನಲ್ಲಿ ಹಗಲೂ ರಾತ್ರಿಯೂ ಯುದ್ಧವು ನಡೆಯಿತು. ಕೃಷ್ಣನು ಗದೆಯಿಂದ ಆ ದಂತವಕ್ತ್ರನನ್ನು ಕೊಂದನು.

೨೧. ಅವನ ದೇಹವೆಲ್ಲವೂ ನುಜ್ಜುಗುಜ್ಜಾಗಿ ವಜ್ರದಿಂದ ಕತ್ತರಿಸಲ್ಪಟ್ಟ ಬೆಟ್ಟದಂತೆ ಜೀವವನ್ನು ಕಳೆದುಕೊಂಡು ನೆಲದಮೇಲೆ ಬಿದ್ದನು.

೨೨. ಆ ದಂತವಕ್ತ್ರನೂ ಯೋಗಿಗಳು ಹೊಂದತಕ್ಕ ನಿತ್ಯಾನಂದ ಸುಖವುಳ್ಳ ಶಾಶ್ವತವಾದ ಹರಿಯ ಸಾಯುಜ್ಯರೂಪವಾದ ಪರಮಪದವನ್ನು ಹೊಂದಿದನು.

೨೩. ಹೀಗೆ ಆ ಜಯವಿಜಯರು ಸನಕಾದಿಗಳ ಶಾಪದ ನೆವದಿಂದ ಭಗವಂತನ ಲೀಲೆಗೋಸ್ಕರ ಜನ್ಮಗಳನ್ನು ಎತ್ತಿ ಮೂರು ಜನ್ಮಗಳಲ್ಲಿಯೂ ಅವನಿಂದಲೇ ಕೊಲ್ಲಲ್ಪಟ್ಟವರಾಗಿ ಕೊನೆಗೆ ಮುಕ್ತಿಯನ್ನು ಹೊಂದಿದರು.

ಕೃಷ್ಣೋಽಪಿ ತಂ ಹತ್ವಾ ಯಮುನಾಮುತ್ತೀರ್ಯ ನಂದವ್ರಜಂ ಗತ್ವಾ ಪ್ರಾಕ್ತನೌ ಪಿತರಾವಭಿವಾದ್ಯ ಆಶ್ವಾಸ್ಯ ತಾಭ್ಯಾಂ ಸಾಶ್ರುಕಂಠಮಾಲಿಂಗಿತಃ ಸಕಲಗೋಪವೃದ್ಧಾನ್ ಪ್ರಣಮ್ಯಾಶ್ವಾಸ್ಯ ಬಹುರತ್ನವಸ್ತ್ರಾಭರಣಾದಿಭಿ ಸ್ತತ್ರಸ್ಥಾನ್ ಸರ್ವಾನ್ ಸಂತರ್ಪಯಾಮಾಸ || ೨೪ ||

ಕಾಲಿಂದ್ಯಾಃ ಪುಲಿನೇ ರಮ್ಯೇ ಪುಣ್ಯವೃಕ್ಷಸಮಾವೃತೇ ।
ಗೋಪನಾರೀಭಿರನಿಶಂ ಕ್ರೀಡಯಾಮಾಸ ಕೇಶವಃ || ೨೫ ||

ರಮ್ಯಕೇಳಿಸುಖೇನೈವ ಗೋಪವೇಷಧರೋ ಹರಿಃ ।
ಬದ್ಧಪ್ರೇಮರಸೇನಾತ್ರ ಮಾಸದ್ವಯಮುವಾಸ ಹ || ೨೬ ||

ಅಥ ತತ್ರಸ್ಥಾ ನಂದಗೋಪಾದಯಃ ಸರ್ವೇ ಜನಾಃ ಪುತ್ರದಾರ ಸಹಿತಾಃ ಪಶುಪಕ್ಷಿಮೃಗಾದಯಶ್ಚ ವಾಸುದೇವಪ್ರಸಾದೇನ ದಿವ್ಯರೂಪ ಧರಾ ವಿಮಾನಮಾರೂಢಾಃ ಪರಮಂ ವೈಕುಂಠಲೋಕಮವಾಪುಃ || ೨೭ ||

---

೨೪. ಕೃಷ್ಣನು ಆ ದಂತವಕ್ತ್ರನನ್ನು ಕೊಂದು ಯಮುನೆಯಿಂದ ಆಚೆಗೆ ಹೋಗಿ ನಂದನ ಗೋಕುಲವನ್ನು ಸೇರಿ ಹಿಂದಿನ ತಾಯಿತಂದೆಗಳನ್ನು ನಮಸ್ಕರಿಸಿ ಅವರನ್ನು ಸಮಾಧಾನಪಡಿಸಿ ಅವರಿಂದ ಹರ್ಷದಿಂದ ಆಲಂಗಿಸಲ್ಪಟ್ಟವನಾಗಿ ಅನಂತರ ಎಲ್ಲಾ ಗೋಪವೃದ್ಧರನ್ನೂ ನಮಸ್ಕರಿಸಿ ಅವರಿಗೂ ಸಮಾಧಾನವನ್ನು ಹೇಳಿ ಅವರಿಗೆಲ್ಲಾ ವಸ್ತ್ರ ಆಭರಣಗಳನ್ನು ಕೊಟ್ಟು ಅಲ್ಲಿರುವವರನ್ನೆಲ್ಲಾ ಸಂತೋಷಪಡಿಸಿದನು

೨೫. ಅನಂತರ ಕೃಷ್ಣನು ಬಹುವಾದ ಮರಗಳುಳ್ಳ ಕಾಳಿಂದಿಯು ಮರಳಿನ ಮೇಲೆ ಗೋಪಸ್ತ್ರೀಯರೊಡನೆ ಕ್ರೀಡಿಸಿದನು.

೨೬ ಗೋಪವೇಷವನ್ನು ಧರಿಸಿಕೊಂಡು ಆ ಹರಿಯು ಬಹುವಾದ ಪ್ರೇಮ ರಸದೊಡನೆ ಸುಖವಾದ ಕೇಳಿರಸದಿಂದ ಎರಡು ತಿಂಗಳ ಕಾಲವಿದ್ದನು.

೨೭. ಅನಂತರ ಅಲ್ಲಿದ್ದ ನಂದಗೋಪನೇ ಮುಂತಾದ ಎಲ್ಲಾ ಜನರೂ ಅವರ ಹೆಂಡಿರು ಮಕ್ಕಳೂ ಎಲ್ಲರೂ ಕೂಡ ಆ ವಾಸುದೇವನ ಅನುಗ್ರಹದಿಂದ ದಿವ್ಯರೂಪವನ್ನು ಹೊಂದಿ ವಿಮಾನದಲ್ಲಿ ಕುಳಿತು ಉತ್ತಮವಾದ ವೈಕುಂಠವನ್ನು ಹೊಂದಿದರು.

ಕೃಷ್ಣಸ್ತು ನಂದಗೋಪವ್ರಜೌಕಸಾಂ ಸರ್ವೇಷಾಂ ಪರಮಂ ನಿರಾಮಯಂ ಸ್ವಪದಂ ದತ್ವಾ ದಿವಿ ದೇವಗಣೈಃ ಸಂಸ್ತೂಯಮಾನೋ ದ್ವಾರವತೀಂ ಶ್ರೀಮತೀಂ ವಿವೇಶ ॥ ೨೮ ॥

ತತ್ರ ವಸುದೇವೋಗ್ರಸೇನಸಂಕರ್ಷಣಪ್ರದ್ಯುಮ್ನಾನಿರುದ್ಧಾಕ್ರೂರಾದಿಭಿಃ ಪ್ರತ್ಯಹಂ ಸಂಪೂಜಿತಃ ಷೋಡಶಸಹಸ್ರಭಾರ್ಯಾಭಿರಷ್ಟಾಭಿರ್ದಿವ್ಯಮಹಿಷೀಭಿಶ್ಚ ವಿಶ್ವರೂಪಧರೋ ದಿವ್ಯರತ್ನಮಯ ನಾನಾಗೃಹಾಂತರೇಷು ಸುರತರುಕುಸುಮಾಂಚಿತಶ್ಲಕ್ಷ್ಣತರಪರ್ಯಂಕೇಷು ರಮಯಾಮಾಸ ॥ ೨೯ ॥

ಅಥ ರಾಮಕೃಷ್ಣಸತೀರ್ಥ್ಯೋ ವಿಪ್ರೋ ಬಾಲಸಖಾ ಸದಾತ್ಯಂತದಾರಿದ್ರ್ಯಪೀಡಿತೋ ಮುಷ್ಟಿಮಾತ್ರಯಾಚನಾಪ್ತಪೃಥುಕಾನ್ ಜೀರ್ಣವಾಸಸಿ ನಿಬಧ್ಯ ವಾಸುದೇವಂ ದ್ರಷ್ಟುಂ ಶ್ರೀಮತೀಂ ದ್ವಾರಕಾನಗರೀಂ ಆಜಗಾಮ ॥ ೩೦ ॥

---

೨೮. ಕೃಷ್ಣನು ನಂದಗೋಪನ ಗೋಕುಲದಲ್ಲಿದ್ದ ಎಲ್ಲರಿಗೂ ಶಾಶ್ವತ ಸುಖವಾದ ತನ್ನ ಜಾಗವನ್ನು ಕೊಟ್ಟು ದೇವತೆಗಳಿಂದ ಹೊಗಳಲ್ಪಡುತ್ತಾ ಉತ್ತಮೋತ್ತಮವಾದ ದ್ವಾರಕೆಗೆ ಹೋದನು.

೨೯. ಆ ಕೃಷ್ಣನು ದ್ವಾರಕೆಯಲ್ಲಿ ವಸುದೇವ, ಉಗ್ರಸೇನ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ, ಅಕ್ರೂರ, ಮುಂತಾದವರಿಂದ ಗೌರವಿಸಲ್ಪಡುತ್ತಾ ಹದಿನಾರುಸಾವಿರ ಜನ ಹೆಂಡತಿಯರೊಡನೆಯೂ ಮುಖ್ಯರಾದ ಅಷ್ಟಮಹಿಷಿಯರೊಡನೆಯೂ ನಾನಾ ರೂಪಗಳನ್ನೂ ಬಹುರೂಪಗಳನ್ನೂ ಹೊಂದಿ ಕ್ರೀಡಿಸುತ್ತಾ ಅನೇಕ ಬಗೆಯ ಸುಂದರವಾದ ಮನೆಗಳಲ್ಲಿ ಕಲ್ಪವೃಕ್ಷದ ಹೂಗಳನ್ನು ಹಾಸಿರುವ ಮೆತ್ತನೆಯ ಹಾಸಿಗೆಯಲ್ಲಿ ರಮಿಸುತ್ತಿದ್ದನು.

೩೦. ಒಂದು ಸಾರಿ ರಾಮಕೃಷ್ಣರ ಜೊತೆಯಲ್ಲಿ ಅವರ ಗುರುವಿನಲ್ಲಿಯೇ ವಿದ್ಯಾಭ್ಯಾಸವನ್ನು ಮಾಡಿದ ಬಾಲ್ಯಸ್ನೇಹಿತನಾದ, ಯಾವಾಗಲೂ ದಾರಿದ್ರ್ಯದಲ್ಲಿಯೇ ತೊಂದರೆಪಡುತ್ತಿದ್ದ, ಒಬ್ಬ ಬ್ರಾಹ್ಮಣನು ಎಲ್ಲಿಯೋ ಒಂದು ಹಿಡಿ ಅವಲಕ್ಕಿಯನ್ನು ಯಾಚಿಸಿಕೊಂಡು ಅದನ್ನು ಹರಕಲಾದ ತನ್ನ ಬಟ್ಟೆಯಲ್ಲಿ ಕಟ್ಟಿಕೊಂಡು ಮಹಾತ್ಮನಾದ ವಾಸುದೇವನನ್ನು ನೋಡಲು ಆ ದ್ವಾರಕೆಗೆ ಬಂದನು.

ಸ ತು ರುಕ್ಮಿಣ್ಯಂತಃಪುರದ್ವಾರಿ ಕ್ಷಣಂ ತೂಷ್ಣೀಂ ತಸ್ಥೌ || ೩೧ ||

ಕೃಷ್ಣೋಪಿ ಸಮಾಗತಂ ಬ್ರಾಹ್ಮಣಂ ಜ್ಞಾತ್ವಾ ಪ್ರತ್ಯುದ್ಗಮ್ಯ ನಮಸ್ಕೃತ್ವಾ ಕರಂ ಗೃಹೀತ್ವಾ ಗೃಹಾಂತರೇ ಸ್ವಾಸನೇ ನಿವೇಶ್ಯ ಭಯಾದ್ವೇಪಮಾನಂ ತಂ ರುಕ್ಮಿಣೀಹಸ್ತಗತಸುವರ್ಣಕಲಶಜಲೇನ ಪಾದೌ ಪ್ರಕ್ಷಾಳ್ಯ ಮಧುಪರ್ಕೇಣ ಪೂಜಯಾಮಾಸ || ೩೨ ||

ಸುಧಾಮೃತೋಪಮೈರನ್ನಪಾನಾದ್ಯೈಸ್ತರ್ಪಯಿತ್ವಾ ತಸ್ಯ ಜೀರ್ಣವಸ್ತ್ರಾಂತರೇ ಯಾಚನಾಪ್ತ ಪೃಥುಕಾನ್ ಸ್ವಯಮೇವ ಹಸ್ತೇನ ಗೃಹೀತ್ವಾ ಪ್ರಹಸನ್ ಜಗ್ರಾಸ || ೩೩ ||

ಕೃಷ್ಣೇನ ಪ್ರಥುಕೇ ಭಕ್ಷಿತೇ ತಸ್ಮಿನ್ನೇವ ಕ್ಷಣೇ ತಸ್ಯ ಬಹುಧನಧಾನ್ಯವಸ್ತ್ರಾಭರಣಸಂಭೂತಂ ಮಹದೈಶ್ವರ್ಯಮಭೂತ್ || ೩೪ ||

---

೩೧. ಆ ಬ್ರಾಹ್ಮಣನು ದ್ವಾರಕೆಗೆ ಬಂದು ರುಕ್ಮಿಣಿಯ ಅಂತಃಪುರದ ಬಾಗಿಲಿನಲ್ಲಿ ಕ್ಷಣಕಾಲ ಸುಮ್ಮನೆ ನಿಂತುಕೊಂಡನು.

೩೨. ಕೃಷ್ಣನು ಆ ಬ್ರಾಹ್ಮಣನು ಬಂದುದನ್ನು ತಿಳಿದು ಎದುರುಗೊಂಡು ನಮಸ್ಕರಿಸಿ ಕೈಯ್ಯನ್ನು ಹಿಡಿದುಕೊಂಡು ಮನೆಯೊಳಕ್ಕೆ ಕರೆದುಕೊಂಡು ಬಂದು ತನ್ನ ಆಸನದಲ್ಲಿ ಕೂರಿಸಿ ನಡುಗುತ್ತಿರುವ ಆ ಬ್ರಾಹ್ಮಣನ ಕಾಲುಗಳನ್ನು ರುಕ್ಮಿಣಿಯು ಕೈಯ್ಯಲ್ಲಿ ಹಿಡಿದಿದ್ದ ಚಿನ್ನದ ಬಿಂದಿಗೆಯ ನೀರಿನಿಂದ ತೊಳೆದು ಮಧುಪರ್ಕವನ್ನು ಕೊಟ್ಟು ಪೂಜಿಸಿದನು

೩೩. ಅಮೃತದಂತಿರುವ ಅನ್ನ ನೀರುಗಳಿಂದ ತೃಪ್ತಿಪಡಿಸಿ ಅವನು ಹಳೆಯ ಬಟ್ಟೆಯಲ್ಲಿ ಕಟ್ಟಿದ್ದ ತಿರಿದು ತಂದಿದ್ದ ಅವಲಕ್ಕಿಯನ್ನು ಕೃಷ್ಣನು ತಾನಾಗಿಯೇ ಕೈಯ್ಯಿಂದ ಬಿಚ್ಚಿ ತೆಗೆದುಕೊಂಡು ನಗುತ್ತಾ ತಿಂದನು.

೩೪. ಕೃಷ್ಣನು ಆ ಅವಲಕ್ಕಿಯನ್ನು ತಿನ್ನುತ್ತಿರುವಾಗಲೇ ಆ ಬ್ರಾಹ್ಮಣನಿಗೆ ಬಹುವಾದ ಧನ ಧಾನ್ಯ ವಸ್ತ್ರ ಆಭರಣ ಮುಂತಾದ ಬಹುವಾದ ಐಶ್ವರ್ಯವು ಬಂದಿತು

ಸ ತು ಕೃಷ್ಣೇನ ವಿಸೃಷ್ಟೋ ಮಮ ಕಿಂಚಿದ್ವಸ್ತ್ರಂ ಧನಂ ವಾ ಕೃಷ್ಣೇನ ನ ದತ್ತಮಿತಿ ಮನ್ಯಮಾನಃ ಸ್ವಪುರಂ ವಿವೇಶ ॥ ೩೫ ॥

ಅಥ ಬಹುಧನಧಾನ್ಯಯುತಂ ಸ್ವಗೃಹಂ ದೃಷ್ಟ್ವಾ ಹರೇಃ ಪ್ರಸಾದಾದಿದಂ ಲಬ್ಧಮಿತಿ ಪ್ರಹೃಷ್ಟೇನಾಂತರಾತ್ಮನಾ ದಿವ್ಯವಸ್ತ್ರಾಭರಣಾದಿನಾ ಭಾರ್ಯಯಾ ಸಹ ಸರ್ವಾನ್ ಕಾಮಾನ್ ಭುಕ್ತ್ವಾ ಹರಿಸಂತುಷ್ಟ್ಯೈ ಬಹುವಿಧ ಯಜ್ಞಾನಿಷ್ಟ್ವಾ ತತ್ಪ್ರಸಾದೇನ ಪರಮಂ ನಿತ್ಯಂ ಸ್ವರ್ಗಸುಖಂ ಅವಾಪ ॥ ೩೬ ॥

ಅಥ ಧೃತರಾಷ್ಟ್ರತನಯೋ ಧುರ್ಯೋಧನಃ ಪಾಂಡುತನಯಾನ್ ಕಪಟ ದ್ಯೂತವ್ಯಾಜೇನ ರಾಜ್ಯಮಪಹೃತ್ಯ ಸ್ವರಾಷ್ಟ್ರಾದ್ವಿವಾಸಯಾಮಾಸ॥ ೩೭ ॥

---

೩೫. ಎಲ್ಲವೂ ಆಗಿ ಕೃಷ್ಣನು ಕಳುಹಿಸಿದ ಮೇಲೆ ಆ ಬ್ರಾಹ್ಮಣನು ಕೃಷ್ಣನು ನನಗೆ ಸ್ವಲ್ಪವಾದರೂ ಬಟ್ಟೆಯನ್ನಾಗಲೀ ಹಣವನ್ನಾಗಲೀ ಕೊಡಲಿಲ್ಲ ವಲ್ಲಾ ! ಎಂದು ತಿಳಿದುಕೊಂಡು ತನ್ನ ಊರಿಗೆ ಹೋದನು.

೩೬. ಆ ಬ್ರಾಹ್ಮಣನು ಮನೆಗೆ ಹೋಗಿ ತನ್ನ ಮನೆಯು ಬಹುವಾದ ಧನ ಧಾನ್ಯಗಳಿಂದ ತುಂಬಿರುವುದನ್ನು ನೋಡಿ ಹರಿಯ ಅನುಗ್ರಹದಿಂದ ಇವೆಲ್ಲವೂ ಬಂದಿದೆ ಎಂದು ಸಂತೋಷಗೊಂಡು ದಿವ್ಯವಾದ ವಸ್ತ್ರಾಭರಣಗಳಿಂದ ಕೂಡಿ ತನ್ನ ಹೆಂಡತಿಯೊಡನೆ ಎಲ್ಲಾ ಅಪೇಕ್ಷೆಗಳನ್ನೂ ಅನುಭವಿಸಿ ಹರಿಯ ತೃಪ್ತಿ ಗೋಸ್ಕರ ಬಹುವಿಧವಾದ ಯಾಗಗಳನ್ನೂ ಮಾಡಿ ಆ ಕೃಷ್ಣನ ಅನುಗ್ರಹದಿಂದ ಉತ್ತಮವೂ ನಿತ್ಯವೂ ಆದ ಸ್ವರ್ಗಸುಖವನ್ನು ಹೊಂದಿದನು.

೩೭. ಧೃತರಾಷ್ಟ್ರನ ಮಗನಾದ ಧುರ್ಯೋಧನನು ಪಾಂಡುತನಯರನ್ನು ಕಪಟದ್ಯೂತದಲ್ಲಿ ಸೋಲಿಸಿ ಅವರ ರಾಜ್ಯವನ್ನು ಅಪಹರಿಸಿ ರಾಜ್ಯದಿಂದ ಅವರನ್ನು ಓಡಿಸಿದನು.

ತೇನ ಯುಧಿಷ್ಠಿರಭೀಮಾರ್ಜುನನಕುಲಸಹದೇವಾಃ ಸ್ವಪತ್ನ್ಯಾ ದ್ರೌಪದ್ಯಾ ಸಹ ಮಹಾರಣ್ಯಂ ಗತ್ವಾ ತತ್ರ ದ್ವಾದಶಾಬ್ದಾನ್ ಸ್ಥಿತ್ವಾ ಸಂವತ್ಸರಪರ್ಯಂತಮಜ್ಞಾತಾಃ ಸರ್ವೇ ಮತ್ಸ್ಯದೇಶಾಧಿಪತೇಃ ವಿರಾಟಸ್ಯ ನಿವೇಶನೇ ಸ್ಥಿತ್ವಾ ವಾಸುದೇವೇನ ಸಹಾಯೇನ ಧಾರ್ತರಾಷ್ಟ್ರಾನ್ ಯೋದ್ಧುಮಾಜಗ್ಮುಃ　　　　　　|| ೩೮ ||

ತೇಷಾಂ ಧಾರ್ತರಾಷ್ಟ್ರಪಾಂಡುಪುತ್ರಾಣಾಂ ನಾನಾದೇಶಾಧಿಪನೃಪೈಃ ಕುರುಕ್ಷೇತ್ರೇ ಮಹಾಪುಣ್ಯೇ ದೇವಾನಾಮಪಿ ಭಯಂಕರೋ ಮಹಾ ಸಂಗ್ರಾಮೋಽಭವತ್　　　　　　|| ೩೯ ||

ಅಥ ಶ್ರೀಕೃಷ್ಣೋಽಪ್ಯರ್ಜುನಸಾರಥ್ಯಂ ಕುರ್ವನ್ನರ್ಜುನೇ ಸ್ವಶಕ್ತಿ ಮಾವೇಶ್ಯ ತೇನ ದುರ್ಯೋಧನಭೀಷ್ಮದ್ರೋಣಪ್ರಮುಖಾನ್ ಸರ್ವಾನ್ ಪಾರ್ಥಿವಾನೇಕಾದಶಾಕ್ಷೌಹಿಣೀಬಲಸಹಿತಾನ್ ಕುರುಕ್ಷೇತ್ರೇ ಹತ್ವಾ

---

೩೮. ಹೀಗೆ ರಾಜ್ಯದಿಂದ ಓಡಿಸಿದ ಮೇಲೆ ಯುಧಿಷ್ಠಿರ ಭೀಮ ಅರ್ಜುನ ನಕುಲ ಸಹದೇವರು ತಮ್ಮ ಹೆಂಡತಿಯಾದ ದ್ರೌಪದಿಯೊಡನೆ ಮಹಾರಣ್ಯಕ್ಕೆ ಹೋಗಿ ಅಲ್ಲಿ ಹನ್ನೆರಡು ವರ್ಷಗಳಿದ್ದು ಅನಂತರ ಒಂದು ವರ್ಷ ಕಾಲ ಯಾರಿಗೂ ತಿಳಿಯದಂತೆ ಇದ್ದು ಅವರೆಲ್ಲರೂ ಮತ್ಸ್ಯದೇಶದ ಅಧಿಪತಿಯಾದ ವಿರಾಟನ ಮನೆ ಯಲ್ಲಿದ್ದುಕೊಂಡು ವಾಸುದೇವನ ಸಹಾಯದಿಂದ ಧುರ್ಯೋಧನಾದಿಗಳೊಡನೆ ಯುದ್ಧಮಾಡಲು ಬಂದರು.

೩೯. ಆ ಪಾಂಡವರಿಗೂ ಕೌರವರಿಗೂ ನಾನಾ ದೇಶದ ರಾಜರುಗಳೊಡನೆ ಪುಣ್ಯಕರವಾದ ಕುರುಕ್ಷೇತ್ರದಲ್ಲಿ ದೇವತೆಗಳಿಗೂ ಭಯವನ್ನುಂಟುಮಾಡುವ ಯುದ್ಧವು ನಡೆಯಿತು.

೪೦. ಆಗ ಶ್ರೀ ಕೃಷ್ಣನು ಅರ್ಜುನನಿಗೆ ಸಾರಥ್ಯವನ್ನು ಮಾಡುತ್ತಾ ಅರ್ಜುನನಲ್ಲಿ ತನ್ನ ಶಕ್ತಿಯನ್ನಿಟ್ಟು ಅವನಿಂದ ದುರ್ಯೋಧನ, ಭೀಷ್ಮ, ದ್ರೋಣನೇ, ಮುಂತಾದ ಎಲ್ಲಾ ರಾಜರನ್ನೂ ಹನ್ನೊಂದು ಅಕ್ಷೌಹಿಣೀ ಸೈನ್ಯವನ್ನೂ

ಪಾಂಡವಾನ್ ರಾಜ್ಯೇ ಸ್ಥಾಪಯಿತ್ವಾ ನಿಶ್ಶೇಷೇಣ ಸರ್ವಭೂಭಾರಮಪಾಸ್ಯ ಸ್ವಾಂ ಪುರೀಂ ಪ್ರವಿವೇಶ ॥ ४೦ ॥

ಕಸ್ಯ ಚಿತ್ತ್ವಥ ಕಾಲಸ್ಯ ಕತಿಪಯಾಹನಿ ವೈದಿಕೋ ಬ್ರಾಹ್ಮಣೋ ಮೃತಂ ಪಂಚವಾರ್ಷಿಕಂ ಬಾಲಮಾದಾಯ ರಾಜದ್ವಾರಿ ನಿಧಾಯ ಬಹುಶೋ ವಿಲಪನ್ ಬಹೂನ್ಯಾಕ್ರೋಶವಾಕ್ಯಾನಿ ಕೃಷ್ಣಂ ಜಗಾದ ॥ ४೧ ॥

ಕೃಷ್ಣಸ್ತಮಾಕ್ರೋಶಂ ಶ್ರುತ್ವಾ ತೂಷ್ಣೀಮುವಾಸ ॥ ४೨ ॥

ಸ ತು ಮಮ ಪಂಚಪುತ್ರಾಃ ಪೂರ್ವಂ ಹತಾಃ ॥ ಅಯಂ ತು ಷಷ್ಠಃ ಏನಂ ಪುತ್ರಂ ಕೃಷ್ಣೋ ನ ಜೀವಯಿಷ್ಯತಿ ತರ್ಹಿ ರಾಜದ್ವಾರಿ ಮರಿಷ್ಯಾಮೀತ್ಯುವಾಚ ॥ ४೩ ॥

ತಸ್ಮಿನ್ ಕಾಲೇಽರ್ಜುನಃ ಕೃಷ್ಣಂ ದ್ರಷ್ಟುಮಾಗತಸ್ತಥಾವಿಧಂ ತಂ ಪುತ್ರಶೋಕೇನ ವಿಲಪನ್ತಂ ದದರ್ಶ ॥ ४४ ॥

---

ಕುರುಕ್ಷೇತ್ರದಲ್ಲಿ ಕೊಂದು ಪಾಂಡವರನ್ನು ರಾಜ್ಯದಲ್ಲಿಟ್ಟು ಭೂಭಾರವನ್ನು ಇಳಿಸಿ ತನ್ನ ಪಟ್ಟಣಕ್ಕೆ ಹೋದನು.

४೧. ಹೀಗೆ ಕೆಲವು ಕಾಲಗಳು ಕಳೆಯಲು ಒಂದುದಿನ ಒಬ್ಬ ವೈದಿಕ ಬ್ರಾಹ್ಮಣನು ಸತ್ತುಹೋದ ಐದು ವರ್ಷದ ತನ್ನ ಮಗನ ಶವವನ್ನು ತಂದು ಅರಮನೆಯ ಬಾಗಿಲಿನಲ್ಲಿಟ್ಟುಕೊಂಡು ಬಹುವಾಗಿ ಅಳುತ್ತಾ ಕೃಷ್ಣನನ್ನು ಕುರಿತು ಬಹುವಾಗಿ ಕೆಟ್ಟಮಾತುಗಳನ್ನಾಡುತ್ತಿದ್ದನು.

४೨. ಕೃಷ್ಣನು ಆ ಕೆಟ್ಟಮಾತುಗಳನ್ನು ಕೇಳಿದರೂ ಸುಮ್ಮನೇ ಇದ್ದನು.

४೩. ಆ ಬ್ರಾಹ್ಮಣನು ಮೊದಲು ನನ್ನ ಐದು ಜನ ಮಕ್ಕಳು ಸತ್ತು ಹೋದರು. ಇವನು ಆರನೆಯವನು. ಇವನನ್ನು ಕೃಷ್ಣನು ಬದುಕಿಸದಿದ್ದರೆ ನಾನು ಈ ಅರಮನೆಯ ಬಾಗಿಲಿನಲ್ಲಿಯೇ ಸಾಯುತ್ತೇನೆ ಎಂದನು.

४४. ಆ ಕಾಲದಲ್ಲಿ ಕೃಷ್ಣನನ್ನು ನೋಡಲು ಬಂದಿದ್ದ ಅರ್ಜುನನು ಈ ಬ್ರಾಹ್ಮಣನು ಹೀಗೆ ಅಳುತ್ತಿದ್ದುದನ್ನು ನೋಡಿದನು.

ಅರ್ಜುನೋಽಪಿ ಕಾಲಧರ್ಮಮುಪಾಗತಂ ಪಂಚವಾರ್ಷಿಕಂ ಬಾಲಕಂ ದೃಷ್ಟ್ವಾ ಕೃಪಯಾ ಸಮಾವಿಷ್ಟಃ ತವ ಪುತ್ರಮಹಂ ಜೀವಯಿಷ್ಯಾಮೀತಿ ಬ್ರಾಹ್ಮಣಾಯಾಭಯಂ ದತ್ವಾ ಪ್ರತಿಶ್ರುತವಾನ್ || ೪೫ ||

ಬ್ರಾಹ್ಮಣಸ್ತು ತೇನಾಶ್ವಾಸಿತೋ ಹೃಷ್ಟವಾನ್ || ೪೬ ||

ಅಥೈಕಂ ಬ್ರಾಹ್ಮಣಶಿಶುಂ ಬಹುಭಿಃ ಸಂಜೀವನಾಸ್ತ್ರೈರಭಿಮಂತ್ರ್ಯ ಅಲಬ್ಧಜೀವಿತಂ ದೃಷ್ಟ್ವಾ ವೃಥಾಪ್ರತಿಜ್ಞಾಮವಾಪ್ಯ ಬಹುಶೋಕೇ ಸಮನ್ವಿತಸ್ತೇನೈವ ಪ್ರಾಣಾಂಸ್ತ್ಯಕ್ತುಮೈಚ್ಛತ್ || ೪೭ ||

ಕೃಷ್ಣಸ್ತು ತತ್ಸರ್ವಂ ಜ್ಞಾತ್ವಾ ಅಂತಃಪುರಾದ್ವಿನಿಷ್ಕ್ರಮ್ಯ ತಂ ವೈದಿಕಂ ತವ ಪುತ್ರಾನಹಂ ದಾಸ್ಯಾಮೀತ್ಯುಕ್ತ್ವಾ ಆಶ್ವಾಸ್ಯ ವೈನತೇಯಮಾರುಹ್ಯ ಅರ್ಜುನಸಹಿತೋ ವೈಷ್ಣವಂ ಲೋಕಮಾಜಗಾಮ || ೪೮ ||

---

೪೫. ಅರ್ಜುನನು ಸತ್ತುಹೋದ ಆ ಐದು ವರ್ಷದ ಆ ಬಾಲಕನನ್ನು ನೋಡಿ ದಯೆಯುಳ್ಳವನಾಗಿ ನಿನ್ನ ಮಗನನ್ನು ನಾನು ಬದುಕಿಸುತ್ತೇನೆ ಎಂದು ಆ ಬ್ರಾಹ್ಮಣನಿಗೆ ಅಭಯುವಚನವನ್ನು ಕೊಟ್ಟು ಪ್ರತಿಜ್ಞೆ ಮಾಡಿದನು

೪೬. ಆ ಬ್ರಾಹ್ಮಣನು ತನ್ನನ್ನು ಅರ್ಜುನನು ಸಮಾಧಾನಗೊಳಿಸಲು ಬಹುವಾಗಿ ಸಂತೋಷಗೊಂಡನು.

೪೭. ಅರ್ಜುನನು ಆ ಬ್ರಾಹ್ಮಣನ ಮಗುವನ್ನು ಅನೇಕ ಬಗೆಯಾದ ಸಂಜೀವನ ಮಂತ್ರಗಳಿಂದ ಮಂತ್ರಿಸಿದರೂ ಪ್ರಾಣ ಬರದಿರಲು ಅದನ್ನು ನೋಡಿ ತನ್ನ ಪ್ರತಿಜ್ಞೆಯು ವ್ಯರ್ಥವಾಯಿತೆಂದು ತಿಳಿದು ದುಃಖಗೊಂಡವನಾಗಿ ಆ ರಾಜ ದ್ವಾರದಲ್ಲಿ ಅವನೊಡನೆಯೇ ತಾನೂ ಪ್ರಾಣಬಿಡಲು ಸಿದ್ಧನಾದನು.

೪೮. ಕೃಷ್ಣನಿಗೆ ಇದೆಲ್ಲವೂ ತಿಳಿಯಲು ಅವನು ಅಂತಃಪುರದಿಂದ ಹೊರಗೆ ಬಂದು ಆ ವೈದಿಕ ಬ್ರಾಹ್ಮಣನನ್ನು ಸಮಾಧಾನಪಡಿಸಿ ನಿನ್ನ ಮಕ್ಕಳೆಲ್ಲರನ್ನೂ ನಾನು ತಂದುಕೊಡುತ್ತೇನೆಂದು ಹೇಳಿ ಗರುಡನಮೇಲೆ ಅರ್ಜುನನೊಡನೆ ಕುಳಿತು ಕೊಂಡು ಆ ವೈದಿಕ ಬ್ರಾಹ್ಮಣನ ಮಕ್ಕಳಿಗೋಸ್ಕರ ವೈಕುಂಠಕ್ಕೆ ಹೋದನು.

ತತ್ರ ದಿವ್ಯಮಣಿಮಂಡಪೋದ್ದೇಶೇ ದೇವ್ಯಾ ಸಹ ಸಮಾಸೀನಂ ನಾರಾಯಣಂ ದೃಷ್ಟ್ವಾ ಕೃಷ್ಣಾರ್ಜುನೌ ನಮಶ್ಚಕ್ರತುಃ || ೪೯ ||

ಸ ತೌ ಬಾಹುಭ್ಯಾಂ ಪರಿಷ್ವಜ್ಯ ಕಿಮರ್ಥಮಾಗತಾವಿತ್ಯುವಾಚ ||೫೦||

ಕೃಷ್ಣಶ್ಚ ಭಗವನ್ ವೈದಿಕಸ್ಯ ತನಯಾನ್ ಮಮ ದೇಹೀತ್ಯುವಾಚ || ೫೧ ||

ಸ ತು ನಾರಾಯಣಸ್ತಾದೃಗ್ವಯಸಿ ಸ್ಥಿತಾನ್ ಸ್ವಲೋಕಸ್ಥಿತಾನ್ ಬ್ರಾಹ್ಮಣಪುತ್ರಾನ್ ಕೃಷ್ಣಾಯ ದದೌ || ೫೨ ||

ಶ್ರೀಕೃಷ್ಣೋಪಿ ತಾನ್ ವೈನತೇಯಸ್ಕಂಧೇ ಸಮಾರೋಪ್ಯ ಸ ಹರ್ಷ ಸಮನ್ವಿತೋಽರ್ಜುನಸಹಿತಃ ಸ್ವಯಮಪ್ಯಾರುಹ್ಯ ದಿವಿ ದೇವಗಣೈಃ ಸಂಸ್ತೂಯಮಾನೋ ದ್ವಾರವತೀಮಾವಿವೇಶ || ೫೩ ||

---

೪೯. ಅಲ್ಲಿ ದಿವ್ಯವಾದ ಮಣಿಮಂಡಪದಲ್ಲಿ ಲಕ್ಷ್ಮಿಯೊಡನೆ ಕುಳಿತಿರುವ ಶ್ರೀಮನ್ನಾರಾಯಣನನ್ನು ನೋಡಿ ನಮಸ್ಕರಿಸಿದರು.

೫೦. ಆ ನಾರಾಯಣನು ಅವರನ್ನು ತೋಳುಗಳಿಂದ ಆಲಿಂಗಿಸಿಕೊಂಡು ನೀವಿಬ್ಬರೂ ಏತಕ್ಕೆ ಬಂದಿರೆಂದು ಕೇಳಿದನು.

೫೧. ಆಗ ಕೃಷ್ಣನು ಆ ವೈದಿಕನ ಮಕ್ಕಳನ್ನು ನನಗೆ ಕೊಡು ಎಂದನು.

೫೨. ಆ ನಾರಾಯಣನು ಅದೇ ವಯಸ್ಸಿನ ತನ್ನ ಲೋಕದಲ್ಲಿದ್ದ ಬ್ರಾಹ್ಮಣನ ಮಕ್ಕಳನ್ನು ಕೃಷ್ಣನಿಗೆ ಕೊಟ್ಟನು.

೫೩. ಕೃಷ್ಣನು ಅವರನ್ನು ಗರುಡನ ಬೆನ್ನಿನಮೇಲೆ ಕೂರಿಸಿಕೊಂಡು ಹರ್ಷದಿಂದ ಅರ್ಜುನನೊಡನೆ ತಾನೂ ಕುಳಿತುಕೊಂಡು ದೇವತೆಗಳಿಂದ ಹೊಗಳಲ್ಪಡುತ್ತಾ ದ್ವಾರವತಿಗೆ ಬಂದನು.

ತಸ್ಮೈ ಬ್ರಾಹ್ಮಣಾಯ ಪಂಚವರ್ಷವಯಸ್ಕಾನ್ ಷಟ್‌ಪುತ್ರಾನ್ ದದೌ ॥ ಸೋಽಪ್ಯತ್ಯಂತಹರ್ಷಸಮನ್ವಿತಃ ಕೃಷ್ಣಂ ವರ್ಧಸ್ವೇತ್ಯಾಶಿಷಃ ಪ್ರಾಯಚ್ಛತ್ ॥ ೫೪ ॥

ಅರ್ಜುನಸ್ತು ಸಫಲಪ್ರತಿಜ್ಞಾಮವಾಪ್ಯ ಹರ್ಷಸಮನ್ವಿತಃ ಕೃಷ್ಣಂ ನಮಸ್ಕೃತ್ಯ ಯುಧಿಷ್ಠಿರಪಾಲಿತಾಂ ಸ್ವಾಂ ಪುರೀಂ ಜಗಾಮ ॥ ೫೫ ॥

ಕೃಷ್ಣಸ್ಯ ಷೋಡಶಸಹಸ್ರಭಾರ್ಯಾಸ್ವಯುತಸಾಹಸ್ರಪುತ್ರಾ ಜಜ್ಞಿರೇ ॥ ತೇಷಾಂ ಪುತ್ರಪೌತ್ರಸಂಖ್ಯಾಂ ವಕ್ತುಂ ನ ಶಕ್ಯತೇ ॥ ೫೬ ॥

॥ ಅತ್ರ ಶ್ಲೋಕಃ ॥

ಅಷ್ಟೌ ಶತಾನಿ ಪುತ್ರಾಣಾಂ ಸಹಸ್ರಾಣ್ಯಯುತಂ ತಥಾ |
ಪ್ರದ್ಯುಮ್ನಃ ಪ್ರಥಮಸ್ತೇಷಾಂ ಸರ್ವೇಷಾಂ ರುಕ್ಮಿಣೀಸುತಃ ॥ ೫೭ ॥

---

೫೪. ಆ ಬ್ರಾಹ್ಮಣನಿಗೆ ಐದು ವರ್ಷಗಳ ವಯಸ್ಸುಳ್ಳ ಆರು ಜನ ಮಕ್ಕಳನ್ನೂ ತಂದು ಕೊಟ್ಟನು. ಆ ಬ್ರಾಹ್ಮಣನು ಬಹು ಸಂತೋಷಗೊಂಡು ಅಭಿವೃದ್ಧಿಯನ್ನು ಹೊಂದು ಎಂದು ಆಶೀರ್ವದಿಸಿದನು.

೫೫. ಅರ್ಜುನನು ತನ್ನ ಪ್ರತಿಜ್ಞೆಯನ್ನು ಪೂರೈಸಿಕೊಂಡು ಸಂತೋಷ ಗೊಂಡು ಕೃಷ್ಣನಿಗೆ ನಮಸ್ಕರಿಸಿ ಯುಧಿಷ್ಠಿರಪಾಲಿತವಾದ ತನ್ನ ಪಟ್ಟಣಕ್ಕೆ ಹೋದನು.

೫೬. ಕೃಷ್ಣನಿಗೆ ಆ ಹದಿನಾರು ಸಾವಿರ ಹೆಂಡತಿಯರಲ್ಲಿ ಹನ್ನೊಂದು ಸಾವಿರ ಜನ ಮಕ್ಕಳಾದರು. ಅವರ ಮಕ್ಕಳು ಮುಮ್ಮಕ್ಕಳ ಲೆಕ್ಕವನ್ನು ಹೇಳುವುದಕ್ಕೆ ಸಾಧ್ಯವಾಗುವುದೇ ಇಲ್ಲ.

೫೭. ಈ ವಿಷಯದಲ್ಲಿ ಈ ಶ್ಲೋಕವು ಹೇಳಲ್ಪಟ್ಟಿದೆ– ಆ ಕೃಷ್ಣನಿಗೆ ಹದಿನಾರು ಸಾವಿರ ಜನ ಹೆಂಡತಿಯರಲ್ಲಿ ಹನ್ನೊಂದು ಸಾವಿರದ ನೂರ ಎಂಟು ಜನ ಮಕ್ಕಳಾದರು. ಅವರಿಗೆಲ್ಲಾ ರುಕ್ಮಿಣಿಯ ಮಗನಾದ ಪ್ರದ್ಯುಮ್ನನೇ ಮೊದಲನೆಯವನು

ಅಸಂಖ್ಯೈಸ್ತೈರ್ಯಾದವೈರಿಯಂ ಪೃಥಿವೀ ಸಂವೃತಾಭವತ್ ॥ ೫೮ ॥

ಪುನರಸ್ಯವನೀಭಾರಶಂಕಯಾ ಕೃಷ್ಣಸ್ತು ತಾನ್ ಋಷಿಶಾಪವ್ಯಾಜೇನ ಸಂಹರ್ತುಮೈಚ್ಛತ್ ॥ ೫೯ ॥

ಕದಾಚಿತ್ಸರ್ವೇ ಕುಮಾರಾ ನರ್ಮದಾಯಾಂ ವಿಹರ್ತುಮಾಜಗ್ಮುಃ ॥ ೬೦ ॥

ತತ್ರ ತಪಂತಂ ಕಣ್ವಂ ಮಹರ್ಷಿಂ ದೃಷ್ಟ್ವಾ ಜಾಂಬವತ್ಯಾಃ ಪುತ್ರಂ ಯೋಷಿದ್ವೇಷಂ ಕೃತ್ವಾ ತಸ್ಯೋದರೇ ಕಾಷ್ಠಾಯಸಂ ಮುಸಲಂ ಬದ್ಧ್ವಾ ಶನೈಃ ಋಷಿಸಮೀಪಮಾಗತ್ಯ ಸರ್ವೇ ನಮಸ್ಕೃತ್ವಾ ಸ್ತ್ರೀರೂಪಂ ಸಾಂಬಂ ಕುಮಾರಂ ತಸ್ಯ ಪುರತೋ ವಿಧಾಯ ಅಸ್ಯಾಃ ಗರ್ಭೇ ಸ್ತ್ರೀ ವಾ ಪುರುಷೋ ವಾ ಭವಿಷ್ಯತೀತಿ ಬ್ರೂಹೀತ್ಯೂಚುಃ ॥ ೬೧ ॥

---

೫೮. ಈ ರೀತಿಯಾಗಿ ಅಸಂಖ್ಯಾತರಾದ ಈ ಯಾದವರಿಂದಲೇ ಈ ಭೂಮಿಯು ತುಂಬಿತು.

೫೯. ಮತ್ತೆ ಭೂಭಾರವುಂಟಾದೀತೆಂಬ ಸಂದೇಹದಿಂದ ಶ್ರೀ ಕೃಷ್ಣನು ಅವರನ್ನು ಋಷಿಶಾಪವೆಂಬ ನೆವದಿಂದ ಕೊಲ್ಲಲು ಇಚ್ಛಿಸಿದನು.

೬೦. ಒಂದು ಸಾರಿ ಕೃಷ್ಣನ ಎಲ್ಲಾ ಮಕ್ಕಳೂ ನರ್ಮದೆಯಲ್ಲಿ ನೀರಾಟ ವಾಡಲು ಬಂದರು.

೬೧. ಅಲ್ಲಿ ತಪಸ್ಸು ಮಾಡುತ್ತಿದ್ದ ಕಣ್ವ ಋಷಿಯನ್ನು ನೋಡಿ ಜಾಂಬ ವತಿಯ ಮಗನಾದ ಸಾಂಬನಿಗೆ ಹೆಂಗಸಿನ ವೇಷವನ್ನು ಹಾಕಿ ಅವನ ಹೊಟ್ಟೆಗೆ ಕಬ್ಬಿಣದ ಗಡಾರಿಯನ್ನು ಕಟ್ಟಿ ಆ ಋಷಿಯ ಬಳಿಗೆ ಬಂದು ಎಲ್ಲರೂ ನಮಸ್ಕರಿಸಿ ಈ ಹೆಂಗಸಿನ ವೇಷದ ಸಾಂಬನನ್ನು ಅಲ್ಲಿ ನಿಲ್ಲಿಸಿ ಈಕೆಯ ಗರ್ಭ ದಿಂದ ಗಂಡು ಕೂಸೋ ಹೆಣ್ಣು ಕೂಸೋ ಹುಟ್ಟುವುದು? ಯಾವುದೆಂದು ಕೇಳಿದರು.

ಸ ತು ಮನಸಾ ತದ್ವಿಜ್ಞಾಯ ತಾನಮರ್ಷಮಾಣಃ ಸರ್ವಾನನೇನ ಮುಸಲೇನ ಯೂಯಂ ಸರ್ವೇ ನಿಹತಾ ಭವತೇತ್ಯುವಾಚ || ೬೨ ||

ಸರ್ವೇ ಸಮುದ್ವಿಗ್ನಮನಸಃ ಕೃಷ್ಣಂ ಸಮೇತ್ಯ ಮಹರ್ಷಿಣೋಕ್ತಂ ತತ್ಕರ್ಮ ನಿವೇದಯಾಮಾಸುಃ || ೬೩ ||

ಕೃಷ್ಣೋಽಪಿ ತದಾಯಸಂ ಮುಸಲಂ ಚೂರ್ಣೀಭೂತಂ ಹ್ರದೇಽಪಾತಯಾಮಾಸ || ೬೪ ||

ತದಯಶ್ಚೂರ್ಣೀಭೂತಬೀಜಸಮುದ್ಭೂತಾ ವಜ್ರಸನ್ನಿಭಾ ಮಹಾಕಾಶಾಃ ಸಂಬಭೂವುಃ || ೬೫ ||

ತತ್ರ ತಂ ಮುಸಲಾವಶೇಷಂ ಕನಿಷ್ಠಾಂಗುಳಿಮಾತ್ರಂ ಮತ್ಸ್ಯೋ ಜಗ್ರಾಹ || ತಂ ಮತ್ಸ್ಯಂ ನಿಷಾದೋ ಗೃಹೀತ್ವಾ ತದುರಸ್ಥಂ ಮುಸಲಾವಶೇಷಮಾದಾಯ ಬಾಣಾಗ್ರೇ ಫಲಕಮಕರೋತ್ || ೬೬ ||

---

೬೨. ಆ ಋಷಿಯು ಮನಸ್ಸಿನಿಂದಲೇ ಅದನ್ನು ತಿಳಿದು ಸಹಿಸದೆ ಅವರೆಲ್ಲರನ್ನೂ ಕುರಿತು ನೀವೆಲ್ಲರೂ ಈ ಮುಸಲದಿಂದಲೇ ಸಾಯಿರಿ. ಎಂದು ಶಪಿಸಿದನು.

೬೩. ಅವರೆಲ್ಲರೂ ಅದರಿಂದ ಹೆದರಿದವರಾಗಿ ಕೃಷ್ಣನ ಬಳಿಗೆ ಬಂದು ಆ ಮಹರ್ಷಿಯು ಶಪಿಸಿದುದನ್ನು ತಿಳಿಸಿದರು.

೬೪ ಕೃಷ್ಣನು ಇದನ್ನು ಕೇಳಿ ಚೆನ್ನಾಗಿ ಆ ಮುಸಲವನ್ನು ತೇಯಿಸಿ ಹಿಟ್ಟನ್ನಾಗಿ ಮಾಡಿಸಿ ಆ ಹಿಟ್ಟನ್ನು ಒಂದು ಮಡುವಿನಲ್ಲಿ ಹಾಕಿಸಿದನು.

೬೫. ಆ ಕಬ್ಬಿಣದ ಚೂರ್ಣವೇ ಬೀಜವಾಗಿ ಬಹು ಗಟ್ಟಿಯಾದ ಜೊಂಡುಗಳು ಆ ಮಡುವಿನಲ್ಲಿ ಹುಟ್ಟಿದುವು.

೬೬. ಆ ಮುಸಲವನ್ನು ತೇದುದರಿಂದ ಉಳಿದ ಒಂದು ಕಿರುಬೆಟ್ಟುದಪ್ಪದ ಗಟ್ಟಿಯನ್ನೂ ಅದೇ ಮಡುವಿನಲ್ಲಿ ಎಸೆಯಲು ಅದನ್ನು ಒಂದು ಮೀನು ನುಂಗಿತು. ಬೇಡನು ಮೀನನ್ನು ಹಿಡಿಯುತ್ತಿದ್ದಾಗ ಆ ಮೀನು ಅವನಿಗೆ ಸಿಕ್ಕಲು ಆ ಬೇಡನು ಅದನ್ನು ಕತ್ತರಿಸಿ ಅದರೊಳಗಿದ್ದ ಕಬ್ಬಿಣದಿಂದ ಬಾಣದ ತುದಿಗೆ ಹಾಕುವ ಅಲಗನ್ನು ಮಾಡಿಸಿದನು.

ಕದಾಚಿತ್ಸರ್ವೇ ಯಾದವಾ ರಾಮಕೃಷ್ಣಪ್ರದ್ಯುಮ್ನಾದಯೋ ಮಘವತಾ ಪ್ರೇಷಿತಾಂ ವಾರುಣೀಂ ಪೀತ್ವಾ ಮತ್ತಾ ಬಭೂವುಃ || ೬೭ ||

ಪರಸ್ಪರಂ ವೀರಣಂ ನೀತ್ವಾ ಬಹೂನ್ಯಾಕ್ರೋಶವಾಕ್ಯಾನಿ ವದಂತೋ ಯುದ್ಧಂ ಚಕ್ರುಃ ಕ್ಷಯಂ ಚ ಗತಾಃ || ೬೮ ||

ಕೃಷ್ಣಸ್ತು ಯುದ್ಧಶ್ರಾಂತಃ ಕಲ್ಪತರುಚ್ಛಾಯಾಯಾಂ ಶಯನಂ ಚಕಾರ || ಸ ನಿಷಾದೋ ಧನುರ್ಬಾಣಂ ಗೃಹೀತ್ವಾ ಆಖೇಟಕವೃತ್ತಿಂ ಜಗಾಮ || ೬೯ ||

ಏವಂ ನಿಶ್ಶೇಷಂ ತ್ಯಕ್ತಜೀವಿತಾ ಬಭೂವುಃ ತೇ ಸರ್ವೇ ಸ್ವಾನ್ ಸ್ವಾನ್ ತ್ರಿದಶಾನ್ ಪ್ರಪೇದಿರೇ || ೭೦ ||

---

೬೭. ಒಂದುಸಾರಿ ರಾಮಕೃಷ್ಣ ಪ್ರದ್ಯುಮ್ನನೇ ಮುಂತಾದ ಯಾದವರೆಲ್ಲರೂ ಇಂದ್ರನಿಂದ ಕಳುಹಿಸಲ್ಪಟ್ಟ ಒಂದುಬಗೆಯ ಹೆಂಡವನ್ನು ಕುಡಿದು ಮತ್ತರಾದರು.

೬೮. ಆ ಹೆಂಡದ ಮದದಲ್ಲಿ ಒಬ್ಬರಿಗೊಬ್ಬರು ಕೋಪಬರುವಂತೆ ಮಾತನಾಡುತ್ತಾ ಆ ಜೊಂಡನ್ನು ಕಿತ್ತುಕೊಂಡು ಯುದ್ಧಮಾಡಿ ನಾಶವಾದರು.

೬೯. ಕೃಷ್ಣನು ಯುದ್ಧದಲ್ಲಿ ಬಳಲಿದವನಾಗಿ ಕಲ್ಪತರುವಿನ ನೆರಳಿನಲ್ಲಿ ಮಲಗಿಕೊಂಡನು. ಆ ಅಲಗನ್ನು ಮಾಡಿಸಿಕೊಂಡಿದ್ದ ಬೇಡನು ಧನುರ್ಬಾಣಗಳನ್ನು ಹಿಡಿದುಕೊಂಡು ಬೇಟೆಗೋಸ್ಕರ ಹೊರಟನು.

೭೦. ಈ ರೀತಿಯಾಗಿ ಪ್ರಾಣಗಳನ್ನು ಬಿಟ್ಟ ಆ ಯಾದವರು ತಾವು ಬಂದಿದ್ದ ದೇವತೆಗಳಲ್ಲಿಯೇ ಮತ್ತೆ ಹೋಗಿ ಸೇರಿಕೊಂಡರು.

ಏವಂ ಮುಸಲೇನ ಸಂಹೃತ್ಯ ಸರ್ವಂ ಸ್ವಯಮೇಕೋ ದೇವೋ ಬಹುಗುಲ್ಮಸಮಾಕೀರ್ಣ ಮಹಾದ್ರುಮಚ್ಛಾಯಾಯಾಂ ಸುಪ್ತಶ್ಚತುರ್ವಿಧ ವ್ಯೂಹಗತಂ ವಾಸುದೇವಕಮಾತ್ಮಾನಂ ಚಿಂತಯಿನ್ ಜಾನೂಪರಿ ಪದಂ ನಿಧಾಯ ಆತ್ಮನೋ ಮಾನುಷಂ ವಪುಸ್ತ್ಯಕ್ತು ಮನುನಿಷಸಾದ ‖ ೭೧ ‖

ಏತಸ್ಮಿನಂತರೇ ಮೃಗಯಾಜೀವಕೋ ಹರೇಃ ಸ ತದಾ ಕಾಲಪ್ರಭಾವೇನ ಚಕ್ರವಜ್ರ ಧ್ವಜಾಂಕುಶಾದಿಚಿಹ್ನಿತಮತಿರಕ್ತತಮಂ ಪಾದಕಮಲಂ ದೃಷ್ಟ್ವಾ ವಿವ್ಯಾಧ ‖ ೭೨ ‖

ತದನಂತರಂ ಶ್ರೀಕೃಷ್ಣಂ ಜ್ಞಾತ್ವಾ ಸುಮಹಾಭಯಾರ್ತಃ ಪ್ರವೇಪಮಾನಃ ಕೃಷ್ಣಂ ಕೃತಾಂಜಲಿಪುಟೋ ಮಹಾಪರಾಧಃ ಸಕಲೋಽಪಿ ಕ್ಷ್ಮ್ಯತಾಮಿತಿ ತಂ ಪ್ರಣನಾಮ ‖ ೭೩ ‖

---

೭೧. ಈ ರೀತಿಯಾಗಿ ತನ್ನ ವಂಶವೆಲ್ಲವನ್ನೂ ಮುಸಲದಿಂದ ನಾಶಮಾಡಿ ಆ ಸ್ವಾಮಿಯು ಒಬ್ಬಂಟಿಗನಾಗಿ ಅನೇಕ ಪೊದರುಗಳಿಂದಲೂ ಬಳ್ಳಿಗಳಿಂದಲೂ ಕೂಡಿದ ಒಂದು ದೊಡ್ಡ ಮರದ ನೆರಳಿನಲ್ಲಿ ಮಲಗಿ ಚತುರ್ವ್ಯೂಹದೊಳಗಿರುವ ವಾಸುದೇವರೂಪನಾದ ಆತ್ಮನನ್ನು ಧ್ಯಾನಿಸುತ್ತಾ ಮಂಡಿಯಮೇಲೆ ಹೆಜ್ಜೆಯನ್ನಿಟ್ಟುಕೊಂಡು ತನ್ನ ಮಾನುಷರೂಪವಾದ ದೇಹವನ್ನು ಬಿಟ್ಟುಬಿಡಲು ಸಿದ್ಧವಾಗಿದ್ದನು

೭೨. ಈ ಮಧ್ಯದಲ್ಲಿ ಒಬ್ಬ ಬೇಡನು ಕಾಲಪ್ರಭಾವದಿಂದ ಚಕ್ರ ವಜ್ರ ಧ್ವಜ ಅಂಕುಶ ಮೊದಲಾದ ಚಿಹ್ನೆಗಳುಳ್ಳ ಬಹು ಕೆಂಪಗಿರುವ ಹರಿಯ ಪಾದ ಕಮಲಗಳನ್ನು ನೋಡಿ ಅದಕ್ಕೆ ಬಾಣದಿಂದ ಹೊಡೆದನು.

೭೩. ಆಮೇಲೆ ತಾನು ಹೊಡೆದುದು ಶ್ರೀಕೃಷ್ಣನಿಗೆಂದು ತಿಳಿದು ಬಹು ಭಯದಿಂದ ಕೂಡಿದವನಾಗಿ ನಡುಗುತ್ತಾ ಕೈಮುಗಿದುಕೊಂಡು ಮಹಾಪರಾಧವಾಯಿತೆಂದು ಹೇಳುತ್ತಾ ಕೃಷ್ಣನಿಗೆ ನಮಸ್ಕರಿಸಿ ಎಲ್ಲವನ್ನೂ ಕ್ಷಮಿಸು. ಎಂದು ಕೇಳಿಕೊಂಡನು.

ಶ್ರೀಕೃಷ್ಣಸ್ತಥಾಭೂತಂ ದೃಷ್ಟ್ವಾ ಸುಧಾಮಯಕರಾಭ್ಯಾಂ ತಮುತ್ಥಾಪ್ಯ ಭವತಾ ನಾಪರಾದ್ಧಂ ಕೃತಮಿತಿ ವದನ್ ಮಹಾಭಯ ಪೀಡಿತಮಶ್ವಾಸಯನ್ನುವಾಚ ‖ ೭೪ ‖

ತತೋ ಯೋಗಿಗಮ್ಯಮಪುನರ್ವರ್ತಿತಂ ಶಾಶ್ವತಂ ಸರ್ವೋಪನಿಷದ ಮಯಂ ವೈಷ್ಣವಂ ಲೋಕಂ ಪ್ರದದೌ ‖ ೭೫ ‖

ಅಸೌ ತಸ್ಮಿನ್ನೇವ ಮಹೂರ್ತೇ ಮಾನುಷಂ ರೂಪಂ ವಿಹಾಯ ಪಂಚೋಪನಿಷನ್ಮಯಂ ಸಕಲಂ ಚ ಪುತ್ರದಾರಸಹಿತೋ ದೀಪ್ತಿಮಯಂ ವೈಷ್ಣವಂ ಲೋಕಂ ದಿವ್ಯಂ ವಿಮಾನಮಾಸ್ಥಾಯ ಸಹಸ್ರಾರ್ಕದ್ಯುತಿಸಹ ಸ್ರಕಂ ದಿವ್ಯಾಪ್ಸರೋ ಗಣಾಕೀರ್ಣಂ ಹಿರಣ್ಮಯಂ ವಾಸುದೇವೇತ್ಯೇಕಂ ಜಗಾಮ ‖ ೭೬ ‖

---

೭೪. ಅವನು ನಮಸ್ಕಾರಮಾಡಿ ಕೇಳಿಕೊಳ್ಳುತ್ತಿರುವುದನ್ನು ನೋಡಿ ಅಮೃತಮಯವಾದ ಕೈಗಳಿಂದ ಅವನನ್ನು ಎಬ್ಬಿಸಿ ನೀನು ತಪ್ಪುಮಾಡಲಿಲ್ಲ. ಸುಮ್ಮನಿರು. ಎಂದು ಹೇಳುತ್ತಾ ಬಹು ಭಯಗೊಂಡ ಆತನನ್ನು ಸಮಾಧಾನ ಪಡಿಸುತ್ತಾ ಇಂತೆಂದನು.

೭೫. ಅನಂತರ ಆ ಶ್ರೀಕೃಷ್ಣನು ಯೋಗಿಗಳು ಹೋಗತಕ್ಕ ಮತ್ತೆ ಹಿಂತಿರುಗದಂತಹ ಶಾಶ್ವತವಾದ ಎಲ್ಲಾ ಉಪನಿಷತ್ತುಗಳ ರೂಪವಾದ ವೈಷ್ಣವ ಲೋಕವನ್ನು ಅವನಿಗೆ ಕೊಟ್ಟನು.

೭೬. ಈ ಬೇಡನು ಒಡನೆಯೇ ಮನುಷ್ಯರೂಪವನ್ನು ಬಿಟ್ಟು ಹೆಂಡತಿ ಮಕ್ಕಳು ಮರಿಗಳೊಡನೆ ಪಂಚೋಪನಿಷದ್ರೂಪವಾದ, ಕಾಂತಿಯಿಂದ ಕೂಡಿದ, ಸಾವಿರ ಸೂರ್ಯರ ಸಾವಿರದಷ್ಟು ಕಾಂತಿಯುಳ್ಳ, ಅಪ್ಸರೋಗಣದಿಂದ ಕೂಡಿದ, ಹೊಂಬಣ್ಣದ ರೂಪವಾದ, ವಾಸುದೇವನೆಂಬ ಹೆಸರುಳ್ಳ, ಒಂದು ಪದಾರ್ಥವನ್ನು ಹೊಂದಿದನು.

ತಸ್ಮಿನ್ ಕಾಲೇ ದಾರುಕೋ ರಥಮಾರುಹ್ಯ ವಿಷ್ಣೋಃ ಸಮೀಪಂ ವಿವೇಶ ‖ ಕೃಷ್ಣೋಪಿ ಮತ್ಸ್ವರೂಪಮರ್ಜುನಂ ತೂರ್ಣಮಾನಯಸ್ವೇತಿ ಪ್ರೇಷಯಾಮಾಸ ‖ ೭೭ ‖

ಸ ತು ಮನೋಜವಸ್ಯಂದನಮಾರುಹ್ಯಾರ್ಜುನ ಸಮೀಪಮಾಜಗಾಮ ‖ ೭೮ ‖

ಏತಸ್ಮಿನ್ನಂತರೇ ದೈವ್ಯರ್ಜುನಸ್ತದಾರುಹ್ಯ ಪರಿಣೀಯ ನಮಸ್ಕೃತ್ಯ ಕಿಂಕರೋಮೀತಿ ಪುಟಾಂಜಲಿರುವಾಚ ‖ ೭೯ ‖

ಕೃಷ್ಣಸ್ತು ತಮಾಹ ಪಾರ್ಥಾಹಂ ಸ್ವರ್ಲೋಕಂ ಯಾಸ್ಯಾಮಿ ತ್ವಂ ತು ದ್ವಾರವತೀಂ ಗತ್ವಾ ತತ್ರಸ್ಥಾ ರುಕ್ಮಿಣ್ಯಾದ್ಯಷ್ಟ ಭಾರ್ಯಾ ಆನೀಯ ಮಮ ಶರೀರೇ ಪ್ರೇಷಯ ಇತಿ ‖ ೮೦ ‖

---

೭೭. ಆಗಲೇ ದಾರುಕನು ರಥವನ್ನು ತೆಗೆದುಕೊಂಡು ವಿಷ್ಣುವಿನ ಬಳಿಗೆ ಬಂದನು. ಕೃಷ್ಣನು ನನ್ನ ಸ್ವರೂಪದವನಾದ ಅರ್ಜುನನನ್ನು ಕರೆದುಕೊಂಡು ಬೇಗ ಬಾ. ಎಂದು ಹೇಳಿ ಕಳುಹಿಸಿದನು.

೭೮. ಆ ದಾರುಕನು ಮನೋವೇಗದ ರಥವನ್ನು ಹತ್ತಿ ಕೃಷ್ಣನ ಅಪ್ಪಣೆಯಂತೆ ಅರ್ಜುನನ ಬಳಿಗೆ ಬಂದನು.

೭೯. ಒಡನೆಯೇ ದೈವಿಕನಾದ ಅರ್ಜುನನು ಆ ರಥವನ್ನು ಹತ್ತಿ ಬಂದು ಕೃಷ್ಣನನ್ನು ನೋಡಿ ನಮಸ್ಕರಿಸಿ ನಾನು ಏನು ಮಾಡಲಿ? ಎಂದು ಕೈ ಮುಗಿದುಕೊಂಡು ಕೇಳಿದನು.

೮೦. ಕೃಷ್ಣನು ಅವನನ್ನು ಕುರಿತು ಎಲೈ ಪಾರ್ಥನೆ! ನಾನು ಸ್ವರ್ಲೋಕಕ್ಕೆ ಹೋಗುತ್ತೇನೆ. ನೀನು ದ್ವಾರವತಿಗೆ ಹೋಗಿ ಅಲ್ಲಿರುವ ರುಕ್ಮಿಣಿಯೇ ಮುಂತಾದ ಎಂಟುಜನ ಮುಖ್ಯ ಹೆಂಡತಿಯರನ್ನು ಕರೆತಂದು ನನ್ನ ಶರೀರದೊಡನೆ ಕಳುಹು. (ಸಹಗಮನ ಮಾಡಿಸು) ಎಂಬುದಾಗಿ ಹೇಳಿದನು.

ಸ ದಾರುಕೇಣ ಸಹಿತೋ ನಗರೀಮಾಜಗಾಮ ॥ ೮೧ ॥

ಏತಸ್ಮಿನ್ನಂತರೇ ದೇವಾ ವಿಮಾನಸ್ಥಾ ನಭಸಿ ಸಂಸ್ಥಿತಾಃ ಸ್ವರ್ಲೋಕಂ ಯಾಂತಂ ಕೃಷ್ಣಂ ದೃಷ್ಟ್ವಾ ಋಷಿಭಿ ಸ್ಸಾರ್ಧಂ ಸ್ತುತ್ವಾ ಪುಷ್ಪವರ್ಷಾಣಿ ವವೃಷುಃ ॥ ೮೨ ॥

ಕೃಷ್ಣೋಽಪಿ ಮಾನುಷಂ ದೇಹಂ ಸನ್ಯಸ್ಯ ಸಕಲಜಗತ್ಸ್ಥಿತಿಸಂಹಾರ ಹೇತುಭೂತಂ ಸಕಲಕ್ಷೇತ್ರಜ್ಞಮಂತರ್ಯಾಮಿಯೋಗಿಧ್ಯೇಯಮನಾಮಯಂ ವಾಸುದೇವಾತ್ಮಕಂ ದೇಹಂ ಧೃತ್ವಾ ವೈನತೇಯಮಾರುಹ್ಯ ಮಹರ್ಷಿಭಿಃ ಸ್ತೂಯಮಾನೋ ಜಗಾಮ ॥ ೮೩ ॥

ಅರ್ಜುನೋ ವಸುದೇವೋಗ್ರಸೇನಾಭ್ಯಾಂ ರುಕ್ಮಿಣ್ಯಾದಿ ಮಹಿಷೀಭ್ಯಃ ಸರ್ವಂ ಕಥಯಾಮಾಸ ॥ ೮೪ ॥

---

೮೧. ಆ ಅರ್ಜುನನು ದಾರುಕನೊಡನೆ ದ್ವಾರವತಿಗೆ ಬಂದನು.

೮೨. ಈ ಸಮಯದಲ್ಲಿ ದೇವತೆಗಳು ವಿಮಾನದಲ್ಲಿ ಅಂತರಿಕ್ಷದಲ್ಲಿದ್ದು ಕೊಂಡು ಸ್ವರ್ಗಲೋಕಕ್ಕೆ ಹೋಗುತ್ತಿರುವ ಶ್ರೀಕೃಷ್ಣನನ್ನು ನೋಡಿ ಋಷಿ ಗಳೊಡನೆ ಸ್ತೋತ್ರ ಮಾಡುತ್ತಾ ಹೂಮಳೆಯನ್ನು ಕರೆದರು.

೮೩. ಕೃಷ್ಣನು ಮಾನುಷ ದೇಹವನ್ನು ಬಿಟ್ಟು ಸಕಲವಾದ ಜಗತ್ತಿಗೂ ಸ್ಥಿತಿ ಸಂಹಾರಗಳಿಗೆ ಕಾರಣ ಭೂತವಾದ ಸಕಲಾತ್ಮರೂಪವಾದ ಅಂತರ್ಯಾಮಿ ಯಾದ ಯೋಗಿಗಳಿಂದ ಧ್ಯಾನಮಾಡಲು ಯೋಗ್ಯವಾದ ತೊಂದರೆಯಿಲ್ಲದ ವಾಸು ದೇವರೂಪವಾದ ದೇಹವನ್ನು ಧರಿಸಿ ಗರುಡನ ಮೇಲೆ ಕುಳಿತು ಮಹರ್ಷಿಗಳಿಂದ ಹೊಗಳಿಸಿಕೊಳ್ಳುತ್ತಾ ಹೋದನು.

೮೪. ಅರ್ಜುನನು ವಸುದೇವ ಉಗ್ರಸೇನರಿಗೂ ರುಕ್ಮಿಣಿಯೇ ಮೊದಲಾದ ಕೃಷ್ಣನ ಹೆಂಡತಿಯರಿಗೂ ಎಲ್ಲಾ ವಿಷಯವನ್ನೂ ಹೇಳಿದನು.

ತಚ್ಛ್ರುತ್ವಾ ಸರ್ವೇ ಪೌರಜನಾಃ ಸ್ತ್ರೀಯಶ್ಚ ದ್ವಾರವತೀಮುತ್ಸೃಜ್ಯಾನ್ತಃಪುರಾದ್ವಿನಿಷ್ಕ್ರಮ್ಯ ಸರ್ವಾಸ್ತಾಃ ಕೃಷ್ಣವತ್ಸಲಾ ವಸುದೇವೋಗ್ರಸೇನಾರ್ಜುನಸಹಿತಾಃ ಶೀಘ್ರಮೇವ ಹರೇಃ ಸಮೀಪಮಾಜಗ್ಮುಕಃ ॥ ೮೫ ॥

ತೇ ಸರ್ವೇ ವಸುದೇವೋಗ್ರಸೇನಾಕ್ರೂರಾಃ ಸರ್ವೇ ಯದುವೃದ್ಧಾ ವಪುಸ್ತ್ಯಕ್ತ್ವಾ ಸನಾತನಂ ವಾಸುದೇವಂ ಸಮಾಜಗ್ಮುಃ ॥ ೮೬ ॥

ರೇವತೀ ಚ ಬಲಭದ್ರಶರೀರಂ ಪರಿಷ್ವಜ್ಯಾಗ್ನಿಂ ಪ್ರವಿಶ್ಯ ತಸ್ಮಿನ್ ದೇಹೇ ಪ್ರಾಪ್ಯ ದಿವ್ಯ ವಿಮಾನಾರೂಢಾಭರ್ತುಃ ಸ್ಥಾನಂ ಸಂಕರ್ಷಣ ಲೋಕಂ ದಿವ್ಯಮವಾಪ ॥ ೮೭ ॥

ತಥೈವ ಪ್ರದ್ಯುಮ್ನೇನ ಸಹ ರುಕ್ಮಿಪುತ್ರೀ ತಥಾನಿರುದ್ಧೇನೋಷಾಪಿ ಸರ್ವಾಶ್ಚ ಯಾದವಸ್ತ್ರಿಯಃ ಸಸ್ವಭರ್ತುಃ ಶರೀರಾಣಿ ಸಂಪ್ರೂಜ್ಯಾಗ್ನಿ ಪ್ರವೇಶಂ ಚಕ್ರುಃ ॥ ೮೮ ॥

---

೮೫. ಅದನ್ನು ಕೇಳಿ ಎಲ್ಲಾ ಪಟ್ಟಣಿಗರೂ ಹೆಂಗಸರೂ ದ್ವಾರವತಿಯನ್ನು ಬಿಟ್ಟು ಅಂತಃಪುರದಿಂದ ಹೊರಟು ಕೃಷ್ಣನಲ್ಲಿ ವಿಶ್ವಾಸವುಳ್ಳವರಾಗಿ ವಸುದೇವ ಉಗ್ರಸೇನ ಅರ್ಜುನರೊಡನೆ ಬೇಗನೆ ಹರಿಯಿರುವ ಜಾಗಕ್ಕೆ ಬಂದರು.

೮೬. ಆ ವಸುದೇವ ಉಗ್ರಸೇನ ಅಕ್ರೂರನೇ ಮುಂತಾದ ಯದುವೃದ್ಧರು ದೇಹವನ್ನು ಬಿಟ್ಟು ಸನಾತನನಾದ ವಾಸುದೇವನನ್ನೇ ಅನುಸರಿಸಿ ಸೇರಿಹೋದರು.

೮೭. ರೇವತಿಯು ಬಲಭದ್ರನ ಶರೀರವನ್ನು ಆಲಂಗಿಸಿಕೊಂಡು ಅಗ್ನಿ ಪ್ರವೇಶಮಾಡಿ ಆ ದೇಹದಲ್ಲಿ ಐಕ್ಯತೆಯನ್ನು ಹೊಂದಿ ವಿಮಾನವನ್ನು ಹತ್ತಿಕೊಂಡು ಗಂಡನ ಲೋಕವಾದ ಸಂಕರ್ಷಣ ಲೋಕವನ್ನು ಹೊಂದಿದಳು.

೮೮. ಅಂತೆಯೇ ರುಕ್ಮಿಪುತ್ರಿಯು ಪ್ರದ್ಯುಮ್ನನ ದೇಹದೊಡನೆಯೂ ಉಷೆಯು ಅನಿರುದ್ಧನ ದೇಹದೊಡನೆಯೂ ಎಲ್ಲಾ ಯಾದವ ಸ್ತ್ರೀಯರೂ ತಮ್ಮ ತಮ್ಮ ಗಂಡಂದಿರ ಶರೀರಗಳನ್ನೂ ಹೊಂದಿ ಅವುಗಳೊಡನೆ ಅಗ್ನಿಪ್ರವೇಶವನ್ನು ಮಾಡಿದರು.

ತೇಷಾಂ ಸರ್ವೇಷಾಮರ್ಜುನ ಔರ್ಧ್ವದೇಹಿಕಂ ಕೃತವಾನ್ || ೮೯ ||

ತಸ್ಮಿನ್ ಕಾಲೇ ದಿವ್ಯವಾಜಿಸಮಾಯುಕ್ತಂ ಸುಗ್ರೀವಾಖ್ಯಂ ಸರ್ವ ರತ್ನೋಪೇತಂ ದಿವ್ಯಂ ಸ್ಯಂದನಮಾರುಹ್ಯ ದಾರುಕೋಪ್ಯಾಜಗಾಮ" ೯೦ ||

ಪಾರಿಜಾತತರುರ್ದೇವಸಭಾ ಸುಧರ್ಮಾ ತ್ರಿದಶೇಂದ್ರಲೋಕಮಯಾ ತಾಂ || ೯೧ ||

ತಸ್ಮಿನ್ ಸಮಯೇ ದ್ವಾರವತೀ ಪುರೀ ಮಹೋದಧೌ ನಿಮಗ್ನಾ ಭೂತ್ || ೯೨ ||

ತತಃ ಸರ್ವಾಃ ಷೋಡಶಸಹಸ್ರಭಾರ್ಯಾಃ ಅರ್ಜುನೇನ ಸಹೇಂದ್ರ ಪ್ರಸ್ಥಂ ಗಚ್ಛಂತೀರ್ದಸ್ಯವೋ ಜಗೃಹುಃ || ೯೩ ||

ಪೂರ್ವಂ ದೇವಗಂಧರ್ವಯೋಷಿತೋ ಹ್ಯಷ್ಟಾವಕ್ರಂ ಮಹಾಮುನಿಂ ದೃಷ್ಟ್ವಾಜಹಸುಸ್ತತಸ್ತೇನ ಶಪ್ತಾ ವೇಶ್ಯಾ ಭವಿಷ್ಯಥೇತಿ ತತಾಸ್ತಾಭಿಃ

---

೮೯. ಅವರೆಲ್ಲರಿಗೂ ಅರ್ಜುನನು ಉತ್ತರಕ್ರಿಯೆಗಳನ್ನು ಮಾಡಿದನು.

೯೦. ಆಗ ಒಳ್ಳೆಯ ಕುದುರೆಗಳನ್ನು ಕಟ್ಟಿರುವ ಬಹುವಾದ ರತ್ನಗಳಿಂದ ಕೂಡಿರುವ ಸುಗ್ರೀವವೆಂಬ ದಿವ್ಯ ರಥವನ್ನು ಹತ್ತಿ ದಾರುಕನು ಸ್ವರ್ಗಕ್ಕೆ ಬಂದನು.

೯೧. ಆಗ ಪಾರಿಜಾತ ಮರವೂ ಸುಧರ್ಮವೆಂಬ ದೇವಸಭೆಯೂ ಎರಡೂ ದೇವಲೋಕಕ್ಕೆ ಹೋದುವು.

೯೨. ಆಗ ದ್ವಾರವತೀಪುರಿಯು ದೊಡ್ಡ ಸಮುದ್ರದಲ್ಲಿ ಮುಳುಗಿತು.

೯೩. ಅನಂತರ ಕೃಷ್ಣನ ಹದಿನಾರುಸಾವಿರಜನ ಹೆಂಡತಿಯರನ್ನು ಅರ್ಜುನನು ಇಂದ್ರಪ್ರಸ್ಥಕ್ಕೆ ಕರೆದುಕೊಂಡು ಹೋಗುತ್ತಿರುವಾಗ ಕಳ್ಳರು ಅವರನ್ನೆಲ್ಲಾ ಹಿಡಿದುಕೊಂಡು ಹೋದರು.

೯೪. ಪೂರ್ವದಲ್ಲಿ ದೇವಗಂಧರ್ವ ಹೆಂಗಸರು ಅಷ್ಟಾವಕ್ರ ಮುನಿಯನ್ನು ನೋಡಿ ನಕ್ಕರು. ಇದರಿಂದ ಕೋಪಗೊಂಡ ಆ ಮುನಿಯು ನೀವೆಲ್ಲರೂ ಸೂಳೆ ಯರಾಗಿರಿ ಎಂದು ಶಪಿಸಿದನು. ಆಗ ಆ ಹೆಂಗಸರು ಹೆದರಿಕೊಂಡು ಆ

ಪ್ರಸಾದಿತಃ ಪೂಜಿತಶ್ಚ ತತ್ಪ್ರಸಾದಾತ್ಸರ್ವಲೋಕೈಶ್ಚ ನಮಸ್ಕೃತಂ ವಾಸು ದೇವಂ ಭರ್ತಾರಮವಾಪ್ಯ ತೇನೈವ ದಸ್ಯುಹಸ್ತಂ ಗತಾ ಅಭವನ್ ॥ ೯೪ ॥

ಅರ್ಜುನೋಽಪಿ ದಸ್ಯುಭಿರ್ನಿರ್ಜಿತಃ ಶೋಕಸಮಾವಿಷ್ಟೋ ಮಮ ಭುಜಬಲಂ ಸವೀರ್ಯಂ ಕೃಷ್ಣೇನೈವ ಸಹ ಸರ್ವಮೈಶ್ವರ್ಯಂ ಗತಮಿತಿ ಮತ್ವಾ ಅದ್ಯ ಮಮ ಭಾಗ್ಯಕ್ಷಯ ಇತಿ ವದನ್ ಸಾಯಂ ಸಂಧ್ಯಾಗತರವಿರಿವ ನಿಶ್ಶೇಷವಿನಷ್ಟತೇಜಾಃ ಸ್ವಾಂ ಪುರೀಂ ಸಮಾಜಗಾಮ ॥ ೯೫ ॥

ಏವಂ ಹಿತಾರ್ಥಾಯ ಸರ್ವದೇವಾನಾಂ ಸುಮಸ್ತಭೂಭಾರವಿನಾಶಾಯ ಯದುವಂಶೇವತೀರ್ಯ ಸಕಲರಾಕ್ಷಸವಿನಾಶಂ ಕೃತ್ವಾ ಮಹಾನ್ತಮಪಿ ಚೋರ್ವೀಭಾರಂ ನಾಶಯಿತ್ವಾ ನಂದವ್ರಜದ್ವಾರಕಾಮಥುರಾನಿವಾಸಿನಃ ಸರ್ವಾನ್ ಸ್ಥಾವರಜಂಗಮಾನ್ ಕಾಲಭವವಧ್ಯೈರ್ಮೋಚಯಿತ್ವಾ ಪರಮ್ಯೈ

---

ಋಷಿಯನ್ನು ಸಮಾಧಾನಪಡಿಸಿ ಕೇಳಿಕೊಳ್ಳಲು ಅವನ ಅನುಗ್ರಹದಿಂದಲೇ ಸರ್ವಲೋಕ ನಮಸ್ಕೃತನಾದ ವಾಸುದೇವನನ್ನು ಗಂಡನನ್ನಾಗಿ ಹೊಂದಿ ಅನಂತರ ಕಳ್ಳರಕೈಗೂ ಸಿಕ್ಕಿಬಿದ್ದರು.

೯೫. ಅರ್ಜುನನು ಕಳ್ಳರಿಂದ ಸೋತು ದುಃಖಗೊಂಡು ನನ್ನ ಭುಜ ಬಲವೂ ವೀರ್ಯವೂ ಎಲ್ಲಾ ಐಶ್ವರ್ಯಗಳೂ ಕೂಡ ಕೃಷ್ಣನೊಡನೆಯೇ ಹೋದುವು ಎಂದು ಹೇಳುತ್ತಾ ಈಗ ನನ್ನ ಭಾಗ್ಯವು ನಾಶವಾಯಿತು ಎಂದು ತಿಳಿದು ಸಾಯಂಕಾಲದ ಸೂರ್ಯನಂತೆ ಪೂರ್ತಿಯಾಗಿ ನಾಶಹೊಂದಿದ ತೇಜಸ್ಸುಳ್ಳವನಾಗಿ ತನ್ನ ಪಟ್ಟಣಕ್ಕೆ ಹೋದನು.

೯೬. ಈ ರೀತಿಯಾಗಿ ವಿಷ್ಣುವು ದೇವತೆಗಳಿಗೆಲ್ಲಾ ಒಳ್ಳೆಯದನ್ನು ಮಾಡಬೇಕೆಂದು ಯದುವಂಶದಲ್ಲಿ ಹುಟ್ಟಿ ರಾಕ್ಷಸರನ್ನೆಲ್ಲಾ ಕೊಂದು ಭೂಮಿಯ ಬಹು ಭಾರವನ್ನು ನಾಶಮಾಡಿ ನಂದನಗೋಕುಲ, ದ್ವಾರಕೆ, ಮಥುರಾನಿವಾಸಿಗಳಾದ ಚರಾಚರಗಳೆಲ್ಲವನ್ನೂ ಯಮನಿಂದುಂಟಾಗುವ ನಾಶದಿಂದ ಕಾಪಾಡಿ ಅವರನ್ನು

ಪರವ್ಯೈಶ್ವರ್ಯೇ ಶಾಶ್ವತೇ ಯೋಗಿಗಮ್ಯೇ ಹಿರಣ್ಮಯೇ ರಮ್ಯೇ ಸಾತ್ವಿಕೇ ಸಂಸ್ಥಾಪ್ಯ ನಿತ್ಯಂ ದಿವ್ಯಮಹಿಷ್ಯಾದಿಸಂಸೇವ್ಯಮಾನೋ ವಾಸುದೇವ ಉವಾಸ ॥ ೯೬ ॥

॥ ಅತ್ರ ಶ್ಲೋಕಾಃ ॥

ಅನ್ಯೇ ಸರ್ವೇವತಾರಾಸ್ಯುಃ ಕೃಷ್ಣಸ್ಯ ಚರಿತಂ ಮಹತ್ ।
ಭೂಭಾರಕವಿನಾಶಾಯ ಪ್ರಾದುರ್ಭೂತೋ ರಮಾಪತಿಃ ॥ ೯೭ ॥

ಏತತ್ ಕೃಷ್ಣಸ್ಯ ಚರಿತಂ ದುಷ್ಟಾನಾಂ ನಾಶಹೇತವೇ ।
ಶ್ರೀಕೃಷ್ಣಃ ಕರುಣಾಸಿಂಧುಃ ವೈಕುಂಠೇ ಮೋದತೇ ಸದಾ ॥ ೯೮ ॥

ಅತ್ಯದ್ಭುತಮಿದಂ ದೇವಿ ಕೃಷ್ಣಸ್ಯ ಚರಿತಂ ಶುಭಂ ।
ಸಂಗ್ರಹೇಣ ಮಯ್ಯೈಪ್ರೋಕ್ತಂ ತವ ಸರ್ವಫಲಪ್ರದಂ ॥ ೯೯ ॥

---

ಪರವ್ಯೈಶ್ವರ್ಯವುಳ್ಳ ಯೋಗಿಗಳು ಹೋಗತಕ್ಕ ಸುಂದರವಾದ ಸಾತ್ವಿಕವಾದ ಸ್ಥಾನದಲ್ಲಿಟ್ಟು ಅಲ್ಲಿ ತಾನೂ ದಿವ್ಯ ಪಟ್ಟಮಹಿಷಿಯರೊಡನೆ ಸೇವಿತನಾಗಿ ಇದ್ದನು.

೯೭. ಈ ವಿಷಯದಲ್ಲಿ ಈ ಶ್ಲೋಕಗಳು–ಶ್ರೀವಿಷ್ಣುವು ಅನೇಕ ಅವತಾರ ಗಳನ್ನು ಮಾಡಿದನು. ಆದರೆ ಕೃಷ್ಣಾವತಾರದ ಚರಿತ್ರೆಯು ದೊಡ್ಡದಾಗಿಯೂ ಮಹಿಮೆಯುಳ್ಳದಾಗಿಯೂ ಇರುವುದು. ಭೂಭಾರವನ್ನು ನಾಶಮಾಡುವುದಕ್ಕೆ ಆ ಸ್ವಾಮಿಯು ಇಲ್ಲಿ ಹುಟ್ಟಿದ್ದನು.

೯೮. ಶ್ರೀಕೃಷ್ಣನ ಅವತಾರವು ದುಷ್ಟರ ನಾಶಕ್ಕೋಸ್ಕರವಾಗಿಯೇ ಆಗಿದೆ. ಕೃಪಾಶಾಲಿಯಾದ ಕೃಷ್ಣನು ಯಾವಾಗಲೂ ವೈಕುಂಠದಲ್ಲಿಯೇ ಸುಖಿ ಸುತ್ತಾನೆ.

೯೯. ಈ ಕೃಷ್ಣನ ಅದ್ಭುತವಾದ ಚರಿತ್ರೆಯು ಶುಭಕರವಾದುದು. ಇದನ್ನು ಸಂಗ್ರಹವಾಗಿ ನಿನಗೆ ಹೇಳಿದ್ದೇನೆ. ಎಲ್ಲಾ ಫಲಗಳನ್ನೂ ಕೊಡುತ್ತದೆ.

ವಾಸುದೇವಸ್ಯ ಚರಿತಂ ಯಃ ಪಠೇದ್ಧರಿಸನ್ನಿಧೌ ।
ಸ್ಮರೇದ್ವಾ ಶೃಣುಯಾದ್ವಾಪಿ ಸ ಯಾತಿ ಪರಮಂ ಪದಂ ॥ ೧೦೦ ॥

ಮಹಾಪಾತಕಯುಕ್ತೋ ವಾ ಉಪಪಾತಕಸಂಯುತಃ ।
ಬಾಲಕೃಷ್ಣಸ್ಯ ಚರಿತಂ ಶ್ರುತ್ವಾ ಪಾಪೈಃ ಪ್ರಮುಚ್ಯತೇ ॥ ೧೦೧ ॥

ದ್ವಾರವತ್ಯಾಂ ಸಮಾಸೀನಂ ರುಕ್ಮಿಣೀಸಹಿತಂ ಹರಿಂ ।
ಸ್ಮರನ್ವೈ ಮಹದೈಶ್ವರ್ಯಮನೇನಾಪ್ನೋತ್ಯಸಂಶಯಂ ॥ ೧೦೨ ॥

ಸಂಗ್ರಾಮೇ ಸಂಕಟೇ ದುರ್ಗೇ ಶತ್ರುಭಿಃ ಪರಿವೇಷ್ಟಿತೇ ।
ನೇತಾರಂ ಸರ್ವದೇವಾನಾಂ ಧ್ಯಾತ್ವಾ ಸ ವಿಜಯೀ ಭವೇತ್ ॥ ೧೦೩ ॥

ಯಃ ಸ್ಮರೇದ್ಗೋಪಕನ್ಯಾಭಿಃ ಕ್ರೀಡಂತಂ ಗೋವ್ರಜೇ ಶುಭೇ ।
ಸರ್ವಕಾಮಾನವಾಪ್ನೋತಿ ಸೌಭಾಗ್ಯಂ ಚೈವ ವಿಂದತಿ ॥ ೧೦೪ ॥

---

೧೦೦. ಈ ವಾಸುದೇವನ ಚರಿತ್ರೆಯನ್ನು ಹರಿಯ ಸನ್ನಿಧಿಯಲ್ಲಿ ಹೇಳುವವನೂ, ಸ್ಮರಿಸುವವನೂ, ಕೇಳುವವನೂ ಕೂಡಾ ಪರಮಪದವನ್ನು ಹೊಂದುತ್ತಾರೆ.

೧೦೧. ಮಹಾಪಾತಕ ಉಪಪಾತಕಗಳಿಂದ ಕೂಡಿದವನಾದರೂ ಈ ಬಾಲಕೃಷ್ಣನ ಚರಿತ್ರೆಯನ್ನು ಕೇಳಿದರೆ ಎಲ್ಲಾ ಪಾಪಗಳೂ ಹೋಗುತ್ತವೆ.

೧೦೨. ದ್ವಾರಕೆಯಲ್ಲಿ ರುಕ್ಮಿಣಿಯೊಡನೆ ಕುಳಿತಿರುವ ಹರಿಯನ್ನು ಸ್ಮರಿಸಿದವನು ಬಹುವಾದ ಐಶ್ವರ್ಯವನ್ನು ಹೊಂದುತ್ತಾನೆ. ಸಂಶಯವಿಲ್ಲ.

೧೦೩. ಯುದ್ಧದಲ್ಲಿ ಕಷ್ಟದಲ್ಲಿ ರಕ್ಷಣೆ ಬೇಕಾದಾಗ ಶತ್ರುಗಳಿಂದ ತೊಂದರೆ ಬಂದಾಗ ದೇವತೆಗಳಿಗೆಲ್ಲಾ ನಿಯಾಮಕನಾದ ಆ ವಿಷ್ಣುವನ್ನು ಧ್ಯಾನಿಸಿದರೆ ವಿಜಯವನ್ನು ಹೊಂದುತ್ತಾನೆ.

೧೦೪. ನಂದಗೋಕುಲದಲ್ಲಿ ಗೋಪಿಕಾಸ್ತ್ರೀಯರಲ್ಲಿ ಕ್ರೀಡಿಸುತ್ತಿರುವ ಶ್ರೀ ಕೃಷ್ಣನನ್ನು ಸ್ಮರಿಸಿದರೆ ಇಷ್ಟಾರ್ಥಗಳನ್ನೆಲ್ಲಾ ಹೊಂದಿ ಸೌಭಾಗ್ಯವನ್ನು ಹೊಂದುತ್ತಾನೆ.

ಮಹೋಪಸರ್ಗರೋಗಾದ್ಯೈಃ ಯುಕ್ತೋ ಯುಸ್ತು ಸನಾತನಂ ।
ಜೇತಾರಂ ಚ ಮಹಾರೌದ್ರೀಂ ಕೃತ್ಯಾಂ ಕಾಶೀಪುರೇ ಸ್ಥಿತಾಂ ॥ ೧೦೫ ॥

ಕಿಮತ್ರ ಬಹುನೋಕ್ತೇನ ಸರ್ವಕಾಮಫಲಸ್ಪೃಹಃ ।
ಕೃಷ್ಣಾಯ ನಮ ಇತ್ಯೇವಂ ಮಂತ್ರಮುಚ್ಚಾರಯೇದ್ಬುಧಃ ॥ ೧೦೬ ॥

ಕೃಷ್ಣಾಯ ವಾಸುದೇವಾಯ ಹರಯೇ ಪರಮಾತ್ಮನೇ ।
ಪ್ರಣತಕ್ಲೇಶನಾಶಾಯ ಗೋವಿಂದಾಯ ನಮೋ ನಮಃ ॥ ೧೦೭ ॥

ಇಮಂ ಮಂತ್ರಂ ಜಪನ್ ದೇವಿ ಭಕ್ತ್ಯಾ ಪ್ರತಿದಿನಂ ನರಃ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಲೋಕಮವಾಪ್ನುಯಾತ್ ॥ ೧೦೮ ॥

ಸರ್ವೇಷಾಮೇವದೇವಾನಾಮೀಶ್ವರೋಸೌ ಜನಾರ್ದನಃ ।
ರಕ್ಷಣಾಯ ಚ ಲೋಕಾನಾಮವಸ್ಥಾಂತರಮೇತಿ ವೈ ॥ ೧೦೯ ॥

---

೧೦೫. ಬಹುವಾದ ಕಷ್ಟಗಳಿಂದಲೂ ರೋಗಗಳಿಂದಲೂ ಕೂಡಿದವನು ಆ ಕಾಶೀಪುರದಲ್ಲಿರುವ ಆ ರುದ್ರಕೃತ್ಯೆಯನ್ನೂ ಜಯಿಸಿದ ಸ್ವಾಮಿಯನ್ನು ಸ್ಮರಿಸಿದರೆ ಅವೆಲ್ಲವೂ ಹೋಗುತ್ತವೆ.

೧೦೬. ಬಹು ಹೇಳಿದುದರಿಂದ ಪ್ರಯೋಜನವೇನು ? ಎಲ್ಲಾ ಇಷ್ಟಗಳನ್ನೂ ಪರಿಹರಿಸಿಕೊಳ್ಳಬೇಕೆಂದೆನ್ನುವವನು "ಶ್ರೀಕೃಷ್ಣಾಯನಮಃ" ಎಂದು ಉಚ್ಚರಿಸಬೇಕು. ಇದು ಮಹಾಮಂತ್ರವು.

೧೦೭. ಕೃಷ್ಣರೂಪಿಯಾದ, ವಾಸುದೇವರೂಪಿಯಾದ, ಹರಿರೂಪಿಯಾದ ಗೋವಿಂದನಾದ, ಮರೆಹೊಕ್ಕಿರುವವರ ಕಷ್ಟಗಳನ್ನು ನಾಶಮಾಡುವ ಆ ಪರಮಾತ್ಮನಿಗೆ ನಮಸ್ಕಾರವು.

೧೦೮. ಈ ಮಂತ್ರವನ್ನು ಭಕ್ತಿಯಿಂದ ಪ್ರತಿದಿನವೂ ಸ್ಮರಿಸುತ್ತಿದ್ದರೆ ಎಲ್ಲಾ ಪಾಪಗಳನ್ನೂ ಕಳೆದುಕೊಂಡು ವಿಷ್ಣುಲೋಕವನ್ನು ಹೊಂದುತ್ತಾನೆ.

೧೦೯. ಈ ಜನಾರ್ದನನು ದೇವತೆಗಳಿಗೆಲ್ಲಾ ಒಡೆಯನು. ಇವನೇ ಲೋಕಗಳನ್ನು ರಕ್ಷಿಸಲು ಬೇರೆ ಬೇರೆ ಅವಸ್ಥೆಗಳನ್ನು ಹೊಂದುತ್ತಾನೆ.

ತ್ರಿಪುರಂ ಹಂತುಂಕಾಮೇನ ಮಯಾ ಸಂಪೂಜಿತೋ ಹರಿಃ ।
ಬುದ್ಧರೂಪಧರಃ ಶ್ರೀಮಾನ್ ಮೋಹಯಾಮಾಸ ತದ್ರಿಪೂನ್ || ೧೧೦ ||

ಮೋಹಿತಾಸ್ತೇನ ಶಾಸ್ತ್ರೇಣ ಸರ್ವಧರ್ಮವಿವರ್ಜಿತಾಃ ।
ನಾರಾಯಣಾಸ್ತ್ರೇಣ ಮಯಾ ನಿಹತಾ ದೇವಶತ್ರವಃ || ೧೧೧ ||

ಅವತೀರ್ಯ ಕಲಾವಂತೇ ಬ್ರಾಹ್ಮಣಸ್ಯ ನಿವೇಶನೇ ।
ಹನಿಷ್ಯತಿ ತಥಾ ರೌದ್ರಾನ್ ಮ್ಲೇಚ್ಛಾನ್ ಸರ್ವಾನ್ ಜನಾರ್ದನಃ || ೧೧೨ ||

ಏತಾ ವೈ ವೈಭವಾವಸ್ಥಾಃ ಸರ್ವಾಃ ಪ್ರೋಕ್ತಾಃ ಜಗತ್ಪತೇಃ ।
ಕಿಮನ್ಯತ್ ಶ್ರೋತುಕಾಮಾಸಿ ತದ್ವದಾಮಿ ಶುಭಾನನೇ || ೧೧೩ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ಕೃಷ್ಣ ಚರಿತೇ ಶ್ರೀಕೃಷ್ಣಸ್ವಧಾಮಗಮನ ನಿರೂಪಣಂ ನಾಮೋನಾಶೀತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೧೦. ತ್ರಿಪುರವನ್ನು ನಾಶಮಾಡುವಾಗ ನಾನು ಹರಿಯನ್ನು ಪೂಜಿಸಿದೆನು. ಆಗ ಅವನು ಬುದ್ಧನ ರೂಪವನ್ನು ಹೊಂದಿ ಶತ್ರುಗಳನ್ನು ಮೋಹಗೊಳಿಸಿದನು.

೧೧೧. ಆ ಬುದ್ಧಶಾಸ್ತ್ರದಿಂದ ಅವರೆಲ್ಲರೂ ಮೋಹಗೊಂಡು ಧರ್ಮವನ್ನು ಬಿಟ್ಟುಬಿಡಲು ಆಗ ನಾರಾಯಣಾಸ್ತ್ರದಿಂದ ಅವರನ್ನು ನಾಶಮಾಡಿದೆನು

೧೧೨. ಕಲಿಯುಗದ ಕೊನೆಯಲ್ಲಿ ಬ್ರಾಹ್ಮಣನ ಮನೆಯಲ್ಲಿ ಈ ಕೃಷ್ಣನು ಅವತರಿಸಿ ಕ್ರೂರರಾದ ಮ್ಲೇಚ್ಛರೆಲ್ಲರನ್ನೂ ನಾಶಮಾಡುತ್ತಾನೆ.

೧೧೩. ಆ ಜಗತ್ಪತಿಯ ಈ ವೈಭವವಾದ ಅವಸ್ಥೆಗಳನ್ನು ಹೇಳಿದ್ದೇನೆ. ಎಲೈ ದೇವಿಯೆ! ಮತ್ತೇನು ಬೇಕು? ಕೇಳು. ಅವೆಲ್ಲವನ್ನೂ ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀ ಕೃಷ್ಣ ಚರಿತ್ರೆಯಲ್ಲಿ ಶ್ರೀಕೃಷ್ಣನು ತನ್ನ ಧಾಮಕ್ಕೆ ಹೋಮದರ ನಿರೂಪಣವೆಂಬ ಇನ್ನೂರ ಎಪ್ಪತ್ತೊಂಭತ್ತನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

-X-

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ಅಶೀತ್ಯಧಿಕದ್ವಿಶತತಮೋऽಧ್ಯಾಯಃ ||



|| ಪಾರ್ವತ್ಯುವಾಚ ||

ಭಗವನ್ ಸರ್ವಮಾಖ್ಯಾತಂ ವೈಭವಾವಸ್ಥಿತಂ ಹರೇಃ |
ಏತಸ್ಮಿನ್ ರಾಮಕೃಷ್ಣಾಭ್ಯಾಂ ಚರಿತ್ರಮತಿವಿಸ್ಮಿತಂ || ೧ ||

ಅಹೋ ರಾಮಸ್ಯ ಚರಿತಂ ಕೃಷ್ಣಸ್ಯ ಚ ಮಹಾತ್ಮನಃ |
ಶೃಣ್ವತ್ಯಾ ಮಮ ದೇವೇಶ ಕಲ್ಪಾಂತರಶತೈರಪಿ || ೨ ||

ಅಧುನಾ ಶ್ರೋತುಮಿಚ್ಛಾಮಿ ವಿಷ್ಣೋರ್ಮಾಹಾತ್ಮ್ಯಮುತ್ತಮಂ |
ತತ್ಪೂಜನವಿಧಿಂ ದೇವ ಶ್ರೋತುಮಿಚ್ಛಾಮ್ಯಹಂ ತಥಾ || ೩ ||

---

## ಇನ್ನೂರ ಎಂಭತ್ತನೆಯ ಅಧ್ಯಾಯವು



೧. ಪಾರ್ವತಿಯು ಹೇಳಿದಳು–ಎಲೈ ಸ್ವಾಮಿಯೆ ! ಆ ಹರಿಯ ವೈಭವದ ಅವಸ್ಥೆಗಳೆಲ್ಲವನ್ನೂ ತಿಳಿಸಿದೆ. ಇವುಗಳಲ್ಲಿ ಆ ರಾಮಕೃಷ್ಣರ ಚರಿತ್ರೆಗಳೇ ಬಹು ದೊಡ್ಡವು.

೨-೩. ಮಹಾತ್ಮನಾದ ರಾಮನ ಚರಿತ್ರೆಯೂ ಶ್ರೀ ಕೃಷ್ಣನ ಚರಿತ್ರೆಯೂ ಅದ್ಭುತವಾದುವು. ಆಶ್ಚರ್ಯವಾದುವು. ನಾನು ಇದನ್ನು ಕೋಟಿಕಲ್ಪಗಳವರೆಗೆ ಕೇಳಿದರೂ ಈ ಹರಿಯ ಕಥೆಯ ವಿಷಯದಲ್ಲಿ ನನ್ನ ಮನಸ್ಸು ತೃಪ್ತಿಯನ್ನೇ ಹೊಂದುವುದಿಲ್ಲ. ಇನ್ನೂ ಕೂಡ ವಿಷ್ಣುವಿನ ಮಹಿಮೆಯನ್ನು ಕೇಳಲು ಅಪೇಕ್ಷಿಸುತ್ತೇನೆ. ಅವನ ಪೂಜೆಯ ವಿಧಿಯನ್ನೂ ಕೇಳಲು ಬಹು ಇಚ್ಛೆಯಿದೆ.

॥ ರುದ್ರ ಉವಾಚ ॥

ಶೃಣು ದೇವಿ ಪ್ರವಕ್ಷ್ಯಾಮಿ ಹರೇಶ್ಚ ಸುಮಹಾತ್ಮನಃ |
ಸ್ಥಾಪನಂ ಚ ಸ್ವಯಂ ವ್ಯಕ್ತಂ ದ್ವಿವಿಧಂ ತತ್ಪ್ರಕೀರ್ತಿತಂ ॥ ೪ ॥

ಶಿಲಾಮೃದ್ದಾರುಲೋಹಾದ್ಯೈಃ ಕೃತ್ವಾ ಪ್ರತಿಕೃತಿಂ ಹರೇಃ
ಶ್ರೌತಸ್ಮಾರ್ತಾಗಮಪ್ರೋಕ್ತಕ್ರಿಯಯಾಸಂಸ್ಥಾಪನಂ ಹಿ ಯತ್ ॥ ೫ ॥

ತತ್ ಸ್ಥಾಪನಮಿತಿ ಪ್ರೋಕ್ತಂ ಸ್ವಯಂ ವ್ಯಕ್ತಂ ಹಿ ಮೇ ಶೃಣು |
ಯಸ್ಮಿನ್ ಸನ್ನಿಹಿತೋ ವಿಷ್ಣುಃ ಸ್ವಯಮೇವ ನೃಣಾಂ ಭುವಿ ॥ ೬ ॥

ಪಾಷಾಣದಾರ್ವೋರಾತ್ಮೇಶಃ ಸ್ವಯಂ ವ್ಯಕ್ತಂ ಹಿ ತತ್ ಸ್ಮೃತಃ ।
ಸ್ವಯಂ ವ್ಯಕ್ತಂ ಸ್ಥಾಪಿತಂ ವಾ ಪೂಜಯೇನ್ಮಧುಸೂದನಂ ॥ ೭ ॥

ದೇವತಾನಾಂ ಮಹರ್ಷೀಣಾಮರ್ಚನಾರ್ಥೇ ಸನಾತನಃ |
ಸ್ವಯಮೇವ ಜಗನ್ನಾಥಃ ಸಾನ್ನಿಧ್ಯಂ ಯಾತಿ ಕೇಶವಃ ॥ ೮ ॥

---

೪. ರುದ್ರನು ಹೇಳಿದನು—ಹರಿಯ ಪ್ರತಿಮೆಗಳಲ್ಲಿ ಸ್ಥಾಪನವೆಂದೂ ಸ್ವಯಂವ್ಯಕ್ತವೆಂದೂ ಎರಡು ಬಗೆಯುಂಟು.

೫–೭. ಕಲ್ಲು, ಮಣ್ಣು, ಮರ, ಲೋಹ ಮುಂತಾದುವುಗಳಲ್ಲಿ ಹರಿಯ ಪ್ರತಿಮೆಯನ್ನು ಮಾಡಿ ಶ್ರೌತಸ್ಮಾರ್ತರೀತಿಯಾಗಿ ಆಗಮೋಕ್ತವಿಧಿಯಿಂದ ಅವನ್ನು ಪ್ರತಿಷ್ಠೆಮಾಡಿದ್ದರೆ ಅದು ಸ್ಥಾಪನವೆನಿಸಿಕೊಳ್ಳುತ್ತದೆ. ಸ್ವಯಂವ್ಯಕ್ತವನ್ನು ಹೇಳುತ್ತೇನೆ. ಕೇಳು. ವಿಷ್ಣುವು ಭೂಮಿಯಲ್ಲಿ ಮನುಷ್ಯರಿಗೆ ಅನುಗ್ರಹ ಮಾಡುವುದಕ್ಕೋಸ್ಕರ ಕಲ್ಲಿನಲ್ಲಾಗಲಿ ಮರದಲ್ಲಾಗಲಿ ತಾನೇ ಸೇರಿಕೊಂಡು ಕಾಣಿಸಿಕೊಂಡಿದ್ದರೆ ಅದಕ್ಕೆ ವ್ಯಕ್ತವೆಂದು ಹೆಸರು. ಸ್ವಯಂವ್ಯಕ್ತವಾದರೂ ಸರಿಯೆ ! ಸ್ಥಾಪಿತವಾದರೂ ಸರಿಯೇ. ಆ ಮಧುಸೂದನನನ್ನು ಪೂಜಿಸಬೇಕು.

೮. ಆ ಸನಾತನನಾದ ವಿಷ್ಣುವು ದೇವತೆಗಳೂ ಮಹರ್ಷಿಗಳೂ ಪೂಜೆಮಾಡಲೆಂದು ತಾನು ಎಲ್ಲಾ ಜಾಗದಲ್ಲಿಯೂ ಬಂದಿರುವನು.

ಯಸ್ಯ ಯದ್ವಿಗ್ರಹೇ ಭೋಗ್ಯಂ ತದೇವಾವಿರಭೂದ್ಭುವಿ ।
ತದೇವ ಪೂಜಯೇನ್ನಿತ್ಯಂ ತಸ್ಮಿನ್ನೇವ ರಮೇತ್ಸದಾ ॥ ೯ ॥

ಶ್ರೀರಂಗಶಾಯೀ ದೇವೇಶೋ ವಿಧ್ಯರ್ಚ್ಯಶ್ಚ ಶುಭಾನನೇ ।
ಸ ಏವೈಕ್ಷ್ವಾಕುನಾಥಾನಾಂ ತಪಸಾವಿರಭೂದ್ಭುವಿ ॥ ೧೦ ॥

ಮಮಾಪಿ ಕಾಶ್ಯಾಂ ಸಂಪೂಜ್ಯೋ ಮಾಧವಃ ಕಲುಷಾಪಹಃ ।
ಯತ್ರ ಯತ್ರ ಗೃಹೇ ರಮ್ಯೇ ಸ್ವಯಂ ವ್ಯಕ್ತಸ್ಸನಾತನಃ ॥ ೧೧ ॥

ತತ್ರ ತತ್ರ ಸಮಾಗಮ್ಯ ರಮೇಽಹಂ ಸಂವ್ಯವಸ್ಥಿತಃ ।
ನಾಷ್ಟಾಂಗಯೋಗೇ ಯಜ್ಞೇಶಸ್ತ್ವರ್ಚಾಯಾಂ ವಿಂದತೇ ನೃಣಾಂ॥ ೧೨ ॥

ಚಕ್ಷುಷೋರ್ವಿಷಯಂ ಪ್ರಾಪ್ಯ ದದಾತಿ ವರಮೀಪ್ಸಿತಂ ।
ಸರ್ವಾವಸ್ಥಾಸು ಸೌಲಭ್ಯಮರ್ಚಾಯಾಂ ಲಭ್ಯತೇ ಜನೈಃ ॥ ೧೩ ॥

---

೯. ಯಾವನಿಗೆ ಯಾವ ವಿಗ್ರಹದಲ್ಲಿ ಯಾವ ರೀತಿಯಾಗಿ ಭೋಗಿಸಬೇಕೆಂದಿರುವುದೋ ಅದೇ ರೀತಿಯಲ್ಲಿ ದೇವರು ಭೂಮಿಯಲ್ಲಿ ಕಾಣಿಸಿಕೊಳ್ಳುತ್ತಾನೆ. ಅದನ್ನೇ ಪೂಜಿಸಬೇಕು.

೧೦. ಶ್ರೀರಂಗದಲ್ಲಿರುವ ರಂಗನಾಥನೆಂಬ ವಿಷ್ಣುವನ್ನು ವಿಧಿವತ್ತಾಗಿ ಪೂಜಿಸಬೇಕು. ಅವನೇ ಇಕ್ಷ್ವಾಕುವಂಶದವರಿಗೆ ತಪಸ್ಸಿನಿಂದ ಕಾಣಿಸಿಕೊಂಡ ಸ್ವಾಮಿಯು.

೧೧–೧೩. ನಾನೂ ಕೂಡ ಕಾಶಿಯಲ್ಲಿ ಪಾಪಹಾರಕನಾದ ಮಾಧವನನ್ನು ಪೂಜಿಸುತ್ತೇನೆ. ಯಾವ ಯಾವ ಜಾಗದಲ್ಲಿ ಯಾವ ಯಾವ ಮೂರ್ತಿಯು ವ್ಯಕ್ತವಾಗುತ್ತದೆಯೋ ಅಲ್ಲಲ್ಲಿಗೆ ಹೋಗಿ ಅದನ್ನು ಪೂಜಿಸಬೇಕು. ನಾನೂ ಕೂಡ ಅಲ್ಲಲ್ಲಿಗೆ ಹೋಗಿ ರಮಿಸುತ್ತೇನೆ. ಅಷ್ಟಾಂಗವುಳ್ಳ ಯೋಗವನ್ನು ಮಾಡಿದರೆ ಆ ಸ್ವಾಮಿಯು ಸಿಕ್ಕುವುದಿಲ್ಲ. ಆದರೆ ಆ ಸ್ವಾಮಿಯು ಅರ್ಚನೆಯಲ್ಲಿ ಕಂಡು ಬಂದು ಪ್ರತ್ಯಕ್ಷನಾಗುತ್ತಾನೆ. ಈ ಅರ್ಚನೆಯಿಂದ ಪ್ರತ್ಯಕ್ಷನಾಗಿ ಬೇಕಾದ ವರವನ್ನು ಕೊಡುತ್ತಾನೆ. ಎಲ್ಲಾ ಅವಸ್ಥೆಗಳಲ್ಲಿಯೂ ಕೂಡ ಅರ್ಚನೆಯೇ ಸುಖವಾದುದು. ಅದರಿಂದಲೇ ಜನರಿಗೆ ದೇವರು ಕಾಣಿಸಿಕೊಳ್ಳುವನು.

ಅಜ್ಞಾನಾಮಪಿ ಸಾನ್ನಿಧ್ಯಂ ಸರ್ವದಾ ಪೃಥಿವೀತಳೇ ।
ಜಂಬೂದ್ವೀಪೇ ಮಹಾಪುಣ್ಯೇ ವರ್ಷೇ ವೈ ಭಾರತೇ ಶುಭೇ　　|| ೧೪ ||

ಅರ್ಚಾಯಾಂ ಸನ್ನಿಧೌ ವಿಷ್ಣೋಃ ನೇತರೇಷು ಕದಾಚನ ।
ತಸ್ಮಾದ್ವೈ ಭಾರತೇ ವಿಷ್ಣುಃ ಮುನಿಭಿಸ್ತ್ರಿದಶೈರಪಿ　　|| ೧೫ ||

ಸೇವಿತಃ ಸತತಂ ದೇವಿ ತಪೋಯಜ್ಞಕ್ರಿಯಾದಿಭಿಃ ।
ಭಾರತೇಸ್ಮಿನ್ ಮಹಾವರ್ಷೇ ನಿತ್ಯಂ ಸನ್ನಿಹಿತೋ ಹರಿಃ　　|| ೧೬ ||

ಐಂದ್ರದ್ಯುಮ್ನೇ ತಥಾ ಕೌರ್ಮೇ ಸಿಂಹಾದ್ರೌ ಕರವೀರಕೇ ।
ಕಾಶ್ಯಾಂ ಪ್ರಯಾಗೇ ಸೌಮ್ಯೇ ಚ ಶಾಲಿಗ್ರಾಮಾರ್ಚನೇ ತಥಾ　　|| ೧೭ ||

ದ್ವಾರವತ್ಯಾಂ ನೈಮಿಷೇ ಚ ತಥಾ ಬದರಿಕಾಶ್ರಮೇ ।
ಕೃತಶೌಚೇ ಹರೇಕ್ಷ್ಯಾಪಂ ಪೌಂಡರೀಕೇ ಚ ದಂಡಕೇ　　|| ೧೮ ||

---

೧೪–೧೬. ಈ ಪೂಜೆಮಾಡುವುದಕ್ಕೋಸ್ಕರ ಅಜ್ಞರೂ ಕೂಡ ಭೂಮಿಯಲ್ಲಿ ಮಾಡುವ ಪೂಜೆಯಲ್ಲಿ ವಿಷ್ಣುವು ಯಾವಾಗಲೂ ಸಾನ್ನಿಧ್ಯವನ್ನು ಹೊಂದಿರುವನು. ಭಾರತವರ್ಷದಲ್ಲಿ ಜಂಬೂದ್ವೀಪದಲ್ಲಿ ಅರ್ಚನೆಯಲ್ಲಿ ವಿಷ್ಣುವು ಯಾವಾಗಲೂ ಸನ್ನಿಹಿತನಾಗಿರುತ್ತಾನೆ. ಇತರ ಜಾಗದಲ್ಲಿ ಯಾವಾಗಲೂ ಇರುವುದಿಲ್ಲ. ಆದ್ದರಿಂದಲೇ ಮುನಿಗಳೂ ದೇವತೆಗಳೂ ತಪಸ್ಸು ಯಾಗ ಮುಂತಾದುವುಗಳಿಂದ ಯಾವಾಗಲೂ ಆ ವಿಷ್ಣುವನ್ನು ಸೇವಿಸುತ್ತಿರುವರು. ಭಾರತವರ್ಷದಲ್ಲಿ ಹರಿಯು ಯಾವಾಗಲೂ ಇದ್ದುಕೊಂಡಿರುವನು.

೧೭–೧೮. ಐಂದ್ರದ್ಯುಮ್ನ, ಕೂರ್ಮ, ಸಿಂಹಾದ್ರಿ, ಕರವೀರಕ, ಕಾಶಿ, ಪ್ರಯಾಗ, ಸೌಮ್ಯ, ಇವುಗಳಲ್ಲಿಯೂ ಸಾಲಗ್ರಾಮದಲ್ಲಿಯೂ ದ್ವಾರವತಿಯಲ್ಲಿಯೂ ನೈಮಿಷದಲ್ಲಿಯೂ ಬದರಿಯಲ್ಲಿಯೂ ಪೌಂಡರೀಕದಲ್ಲಿಯೂ ದಂಡಕಾರಣ್ಯದಲ್ಲಿಯೂ ಸ್ವಾಮಿಯು ನೆಲಸಿರುವನು. ಇಲ್ಲಿ ಎಲ್ಲರ ಪಾಪವನ್ನೂ ನಾಶಮಾಡುವನು.

ಮಾಥುರೇ ವೆಂಕಟಾದ್ರೌ ಚ ಶ್ವೇತಾದ್ರೌ ಗರುಡಾಚಲೇ ।
ಕಾಂಚ್ಯಾಮನಂತಶಯನೇ ಶ್ರೀರಂಗೇ ಭೈರವಾಚಲೇ ॥ ೧೯॥

ನಾರಾಯಣಾಚಲೇ ಸೌಮ್ಯೇ ವಾರಾಹೇ ವಾಮನಾಶ್ರಮೇ ।
ಏವಮಾದ್ಯಾಃ ಸ್ವಯಂ ವ್ಯಕ್ತಾಃ ಸರ್ವಕಾಮಫಲಪ್ರದಾಃ ॥ ೨೦ ॥

ಸ್ವಯಮೇವ ಹಿ ಸಾನ್ನಿಧ್ಯಂ ಯಸ್ಮಿನ್ ಯಾತಿ ಜನಾರ್ದನಃ ।
ತಸ್ಮಿನ್ನೇವ ಸ್ವಯಂ ವ್ಯಕ್ತಂ ವದಂತಿ ಮುನಯಶ್ಶುಭಾಃ ॥ ೨೧ ॥

ಮಹಾಭಾಗವತಶ್ರೇಷ್ಠೋ ವಿಧಿನಾ ಸ್ಥಾಪ್ಯ ಕೇಶವಂ ।
ಮಂತ್ರೇಣ ಕುರ್ಯಾತ್ಸಾನ್ನಿಧ್ಯಂ ಸ್ಥಾಪನಂ ತದ್ವಿಶಿಷ್ಯತೇ ॥ ೨೨ ॥

ತಸ್ಮಿನ್ ಸಂಪೂಜಯೇದ್ದೇವಂ ಗ್ರಾಮೇಷು ಚ ಗೃಹೇಷು ಚ ।
ಸಾಲಿಗ್ರಾಮಶಿಲಾಯಾಂ ತು ಗೃಹಾರ್ಚಾ ಸದ್ಭಿರುಚ್ಯತೇ ॥ ೨೩ ॥

---

೧೯–೨೦. ಮಥುರೆ, ವೆಂಕಟಾದ್ರಿ ಶ್ವೇತಾದ್ರಿ, ಗರುಡಾಚಲ, ಕಾಂಚಿ, ಅನಂತಶಯನ, ಶ್ರೀರಂಗ, ಭೈರವಾಚಲ, ನಾರಾಯಣಾಚಲ, ಸೌಮ್ಯ, ವರಾಹ ಪರ್ವತ, ವಾಮನಾಶ್ರಮ, ಇವೇ ಮುಂತಾದ ಸ್ಥಳಗಳಲ್ಲಿ ಇರುವ ಪ್ರತಿಮೆಗಳು ತಾವಾಗಿಯೇ ಉದ್ಭವವಾಗಿವೆ. ಎಲ್ಲಾ ಇಷ್ಟಗಳನ್ನೂ ಕೊಡುತ್ತವೆ.

೨೧. ಜನಾರ್ದನನು ಯಾವುದರಲ್ಲಿ ತಾನಾಗಿಯೇ ಸಾನ್ನಿಧ್ಯವನ್ನು ಹೊಂದಿರುವನೋ ಅದರಲ್ಲಿ ಸ್ವಯಂವ್ಯಕ್ತನೆಂದು ಮುನಿಗಳು ಹೇಳುತ್ತಾರೆ.

೨೨. ಭಗವದ್ಭಕ್ತನಾದವನು ಕೇಶವನನ್ನು ಸ್ಥಾಪಿಸಿ ಮಂತ್ರದಿಂದ ಆವಾಹಿಸಿ ಸ್ಥಾಪನೆಯನ್ನು ಮಾಡಬೇಕು. ಈ ಸ್ಥಾಪನೆಯು ಉತ್ತಮವು.

೨೩. ಅಂತಹ ಸ್ಥಾಪನೆ ಮಾಡಿದ ಪ್ರತಿಮೆಗಳಲ್ಲಿ ಸ್ವಾಮಿಯನ್ನು ಪೂಜಿಸಬೇಕು. ಸಾಲಿಗ್ರಾಮದ ಶಿಲೆಯನ್ನು ಮನೆಯಲ್ಲಿ ಪೂಜಿಸುವುದು ಉತ್ತಮವೆಂದು ತಿಳಿದವರು ಹೇಳುತ್ತಾರೆ.

**ಅರ್ಚನಂ ಮಂತ್ರಪಠನಂ ಯಾಗಯೋಗೇ ಮಹಾತ್ಮನಃ ।**
**ನಾಮಸಂಕೀರ್ತನಂ ಸೇವಾ ತಚ್ಚಿಹ್ನೈರಂಕನಂ ತಥಾ　　　॥ ೨೪ ॥**

**ತದೀಯಾರಾಧನಂ ಚ ಸ್ಯಾನ್ನವಧಾ ಭಿದ್ಯತೇ ಶುಭೇ ।**
**ನವಕರ್ಮವಿಧಾನಂ ಚ ವಿಪ್ರಸ್ಯ ಸತತಂ ಸ್ಮೃತಂ　　　॥ ೨೫ ॥**

**ಮಹಾಭಾಗವತಶ್ರೇಷ್ಠೋ ಬ್ರಾಹ್ಮಣೋ ವೈ ಗುರುರ್ನೃಣಾಂ ।**
**ಸರ್ವೇಷಾಮೇವ ಲೋಕಾನಾಮಸೌ ಪೂಜ್ಯೋ ಯಥಾ ಹರಿಃ　　॥ ೨೬ ॥**

---

೨೪-೨೫. (೧) ಅರ್ಚನೆ (೨) ಮಂತ್ರಪಠನೆ (೩) ಯಾಗ (೪) ಯೋಗ (೫) ನಾಮಸಂಕೀರ್ತನ (೬) ಸೇವೆ (೭) ಅವನ ಚಿಹ್ನೆಯಾದ ಶಂಖಚಕ್ರಗಳಿಂದ ಗುರುತು ಮಾಡಿಸಿಕೊಳ್ಳುವಿಕೆ. (೮) ಅವನ ಚಿಹ್ನೆಯಾದ ನಾಮಗಳನ್ನು ಧರಿಸುವಿಕೆ. (೯) ತದೀಯಾರಾಧನ(ಭಕ್ತರಸೇವೆ) ಈ ರೀತಿಯಾಗಿ ಪೂಜೆಯು ಒಂಬತ್ತು ಬಗೆಯಾಗಿದೆ. ಈ ಒಂಬತ್ತು ಕರ್ಮಗಳನ್ನೂ ಮಾಡುತ್ತಾ ಬ್ರಾಹ್ಮಣನು ಸ್ವಾಮಿಯನ್ನು ಸೇವಿಸಬೇಕು.

[ಅರ್ಚನೆ= ಸ್ವಾಮಿಯ ಪೂಜೆ, ಮಂತ್ರಪಠನ ಆ ಸ್ವಾಮಿಯ ಮಂತ್ರವನ್ನು ಹೇಳುವುದು, ಯಾಗ = ಅಗ್ನಿಯನ್ನಿಟ್ಟುಕೊಂಡು ಹೋಮ ಮುಂತಾದುವನ್ನು ಮಾಡಿ ಸ್ವಾಮಿಗೆ ಅರ್ಪಿಸುವುದು, ಯೋಗ = ಯಾವಾಗಲೂ ಆ ಸ್ವಾಮಿಯ ಸಂಬಂಧವನ್ನೇ ಹೊಂದಿರುವುದು, ನಾಮಸಂಕೀರ್ತನ = ನಾಮವನ್ನು ಹೇಳುತ್ತಿರುವುದು, ಸೇವೆ = ಚಾಮರಾದಿಗಳನ್ನು ಹಿಡಿದು ಸೇವೆಮಾಡುವುದು, ತದೀಯಾರಾಧನ = ಆ ಸ್ವಾಮಿಯ ಸೇವಕರನ್ನು ಸೇವಿಸುವುದು, ತಚ್ಚಿಹ್ನಾಂಕನ = ಸ್ವಾಮಿಯಚಿಹ್ನೆಯಾದ ಊರ್ಧ್ವಪುಂಡ್ರವನ್ನಿಟ್ಟುಕೊಳ್ಳುವುದು. ಮತ್ತು ಅವನ ಚಿಹ್ನೆಯಾದ ಶಂಖಚಕ್ರಗಳನ್ನು ಕಾಯಿಸಿ ಗುರುತುಮಾಡಿಕೊಳ್ಳುವುದು.]

೨೬. ಭಾಗವತರಲ್ಲಿ ಶ್ರೇಷ್ಠನಾದ ಬ್ರಾಹ್ಮಣನನ್ನು ಗುರುವೆಂದು ಜನರು ತಿಳಿಯಬೇಕು. ಎಲ್ಲಾ ವರ್ಣಗಳಿಗೂ ಹರಿಯಂತೆ ಈ ಬ್ರಾಹ್ಮಣನು ಪೂಜ್ಯನು.

ತಾಪಾದಿ ಪಂಚಸಂಸ್ಕಾರೀ ನವೇಜ್ಯಾಕರ್ಮಕಾರಕಃ ।
ಅರ್ಥಪಂಚಕವಿದ್ವಿಪ್ರೋ ಮಹಾಭಾಗವತಃ ಸ್ಮೃತಃ ॥ ೨೭ ॥

ತತ್ರತ್ಕರ್ಮವಿಧಾನೇಜ್ಯಾ ಕ್ಷತ್ರಿಯಸ್ಯ ವಿಧೀಯತೇ ।
ತಚ್ಚಿಹ್ನೈರಂಕತನಂ ಸೇವಾ ತದೀಯಾನಾಂ ಚ ಪೂಜನಂ ॥ ೨೮ ॥

ಮಂತ್ರವರ್ಣಸ್ಯ ಜಪನಂ ನಾಮಸಂಕೀರ್ತನಂ ತಥಾ ।
ವಂದನಂ ಚ ವಿಶಾಂ ಪ್ರೋಕ್ತಂ ಷಟ್ಕರ್ಮೇಜ್ಯಾವಿಧಾನತಃ ॥ ೨೯ ॥

ನಾಮಸಂಕೀರ್ತನಂ ಸೇವಾ ಪೂಜನಂ ವಂದನಂ ತಥಾ ।
ಅರ್ಚನಂ ಚ ತದೀಯಾನಾಂ ಪಂಚೇಜ್ಯಾ ಶೂದ್ರಜನ್ಮನಃ ॥ ೩೦ ॥

---

೨೭–೨೯. ತಾಪ, ಪುಂಡ್ರ, ನಾಮಧಾರಣ, ಮಂತ್ರ, ಯಾಗಗಳೆಂಬ ಐದುಬಗೆಯಾದ ಸಂಸ್ಕಾರಗಳನ್ನು ಹೊಂದಿ ಅರ್ಚನೆ, ಮಂತ್ರಪಠನ, ಹೋಮ, ಧ್ಯಾನ, ನಾಮಸ್ಮರಣ, ಸೇವೆ, ಶಂಖಚಕ್ರಧಾರಣ, ಭಕ್ತರಪೂಜೆ, ವಂದನೆ ಎಂಬ ಒಂಭತ್ತು ಕರ್ಮಗಳನ್ನು ಮಾಡುತ್ತ ಬ್ರಹ್ಮಸ್ವರೂಪ, ತನ್ನಸ್ವರೂಪ, ಹೊಂದುವ ಉಪಾಯ, ಪ್ರಾಪ್ತಿಯಫಲ, ಪ್ರಾಪ್ತಿವಿರೋಧಿ ಎಂಬ ಅರ್ಥಪಂಚಕವನ್ನು ತಿಳಿದಿರುವವನೇ ಮಹಾಭಾಗವತನೆನಿಸಿಕೊಳ್ಳುತ್ತಾನೆ. ಕ್ಷತ್ರಿಯರು ಮೇಲೆ ಹೇಳಿರುವ ಕರ್ಮಗಳನ್ನು ಮಾಡಿಕೊಂಡು ಮೇಲೆ ಹೇಳಿರುವ ರೀತಿಯಿಂದಲೇ ಪೂಜಿಸಬೇಕು. ಆ ಸ್ವಾಮಿಯ ಚಿಹ್ನೆಯಾದ ಶಂಕಚಕ್ರಗಳಿಂದ ಚಿಹ್ನೆಮಾಡಿಸಿಕೊಳ್ಳುವಿಕೆ. ಸ್ವಾಮಿಯ ಸೇವೆ ಆ ಸ್ವಾಮಿಯ ಭಕ್ತರನ್ನು ಸೇವಿಸುವುದು. ಮಂತ್ರವನ್ನು ಜಪಿಸುವುದು. ನಾಮವನ್ನು ಹೇಳುವುದು, ವಂದನ, ಈ ಆರು ಕರ್ಮಗಳು ವೈಶ್ಯರಿಗೆ ವಿಹಿತವಾಗಿವೆ. ಈ ಷಟ್ಕರ್ಮಗಳಿಂದ ವೈಶ್ಯರು ಸ್ವಾಮಿಯನ್ನು ಪೂಜಿಸಬೇಕು.

೩೦. ನಾಮಸಂಕೀರ್ತನ, ಸೇವೆ, ಪೂಜೆ, ವಂದನೆ, ಆ ಸ್ವಾಮಿಯ ಭಕ್ತರ ಸೇವೆ ಇವೈದೂ ಶೂದ್ರನಿಗೆ ವಿಹಿತವಾಗಿದೆ. ಈ ಐದುಬಗೆಯಾಗಿ ಶೂದ್ರನು ಸ್ವಾಮಿಯನ್ನು ಪೂಜಿಸಬೇಕು.

ಸಾಧಾರಣಾ ಚ ಸರ್ವೇಷಾಂ ಮಾನಸೇಜ್ಯಾ ನೃಣಾಂ ಪ್ರಿಯೇ ।
ಸ್ವಾಧಿಕಾರಾನುರೂಪಂ ಚ ಕಾರ್ಯಾಚೇಜ್ಯಾ ಜಗತ್ಪತೇಃ ॥ ೩೧ ॥

ಅನನ್ಯದೇವತಾಭಕ್ತೈರನನ್ಯಫಲಸಾಧಕೈಃ ।
ವೇದವಿದ್ಭಿರ್ಮಹಾತತ್ವಜ್ಞೈರ್ವೀತರಾಗೈರ್ಮುಮುಕ್ಷುಭಿಃ ॥ ೩೨ ॥

ಗುರುಭಕ್ತಿಸಮಾಯುಕ್ತೈಃ ಸುಪ್ರಸನ್ನೈಃ ಸುಸಾಧುಭಿಃ ।
ಬ್ರಾಹ್ಮಣೈರಿತರೈಶ್ಚಾಪಿ ಪೂಜನೀಯೋ ಹರಿಸ್ಸದಾ ॥ ೩೩ ॥

ಯಥೋಚಿತಂ ಚ ವರ್ಣಸ್ಯ ಕಾರ್ಯಾ ಚೇಜ್ಯಾ ಹರೇರ್ನೃಣಾಂ ।
ವರ್ಣಾಶ್ರಮಾನುರೂಪಂ ಚ ಕರ್ತವ್ಯಂ ವೈಷ್ಣವೈಶ್ಚ ಭೈಃ ॥ ೩೪ ॥

ಶ್ರುತಿಸ್ಮೃತ್ಯುದಿತಂ ಸಮ್ಯಙ್ನಿತ್ಯಮಾಚಾರಮಾಚರೇತ್ ।
ಶ್ರುತಿಸ್ಮೃತ್ಯುಕ್ತಕರ್ಮಾಣಿ ನಾತಿಕ್ರಾಮೇತ ಬುದ್ಧಿಮಾನ್ ॥ ೩೫ ॥

---

೩೧. ಎಲ್ಲಾ ಜಾತಿಯವರೂ ಕೂಡ ಮಾನಸಿಕ ಪೂಜೆಯನ್ನು ಮಾಡಬಹುದು. ಅವರ ಅಧಿಕಾರಕ್ಕೆ ತಕ್ಕಂತೆ ಆ ಸ್ವಾಮಿಯ ಪೂಜೆಯನ್ನು ಮಾಡಬೇಕು.

೩೨–೩೩. ಇತರ ದೇವತೆಗಳಲ್ಲಿ ಭಕ್ತಿಯನ್ನಿಡದ, ಮೋಕ್ಷ ಹೊರತಾಗಿ ಬೇರೆಯ ಫಲದಲ್ಲಿ ಆಸೆಯಿಲ್ಲದ, ವೇದವನ್ನು ಬಲ್ಲ, ತತ್ವವನ್ನು ತಿಳಿದಿರುವ, ಅರಿಷಡ್ವರ್ಗಗಳನ್ನು ಜಯಿಸಿರುವ, ಮೋಕ್ಷವನ್ನಪೇಕ್ಷಿಸುವ, ಗುರುಭಕ್ತಿಯಿಂದ ಕೂಡಿರುವ ಪ್ರಸನ್ನರಾದ, ಸಾಧುಗಳಾದ ಬ್ರಾಹ್ಮಣರೇ ಆಗಲಿ ಇತರರೇ ಆಗಲಿ ಹರಿಯನ್ನು ಯಾವಾಗಲೂ ಪೂಜಿಬೇಕು.

೩೪. ಜನಗಳು ತಮ್ಮ ತಮ್ಮ ವರ್ಣಕ್ಕೆ ತಕ್ಕಂತೆ ಹರಿಯನ್ನು ಪೂಜಿಸಬೇಕು. ವೈಷ್ಣವರಾದವರೂ ಅವರ ವರ್ಣ ಆಶ್ರಮಗಳಿಗೆ ತಕ್ಕಂತೆ ಹರಿಯನ್ನು ಪೂಜಿಸಬೇಕು.

೩೫. ವೈಷ್ಣವನಾದವನು ಶ್ರುತಿಸ್ಮೃತಿಗಳಲ್ಲಿ ಹೇಳಿರುವಂತೆ ನಿತ್ಯದ ಆಚಾರಗಳನ್ನು ಮಾಡುತ್ತಿರಬೇಕು. ಬುದ್ಧಿವಂತನಾದವನು ಆ ಶ್ರುತಿಸ್ಮೃತಿಗಳಲ್ಲಿ ಹೇಳಿರುವುದನ್ನು ಮೀರಲೇ ಬಾರದು.

ಶ್ರುತಿಸ್ಮೃತ್ಯುಕ್ತಮಾಚಾರಂ ಯೋ ನ ಸೇವೇತ ವೈಷ್ಣವಃ ।
ಪಂಚಪಾಷಂಡಮಾಪನ್ನೋ ರೌರವೇ ನರಕೇ ವಸೇತ್ ॥ ೩೬ ॥

ತಸ್ಮಾದ್ವರ್ಣಾನುರೂಪಾಂ ವೈ ಕುರ್ಯಾದಿಜ್ಯಾಂ ಜಗತ್ಪತೇಃ ।
ತಸ್ಮಾತ್ ಸ್ಮೃತ್ಯುಕ್ತಮಾಚಾರಂ ಕುರ್ಯಾದ್ವೈ ಮಾನವಃ ಸದಾ ॥ ೩೭ ॥

ಸಾಧಾರಣಾ ಹಿ ಸರ್ವೇಷಾಂ ಮಾನಸೇಜ್ಯಾ ಶುಭೇ ನೃಣಾಂ ।
ಸ್ವಾಧಿಕಾರಂ ನಿರೀಕ್ಷ್ಯೈವ ಕರ್ಮ ಕುರ್ಯಾದತಂದ್ರಿತಃ ॥ ೩೮ ॥

ಶಮೋ ದಮಸ್ತಪಶ್ಶೌಚಂ ಸತ್ಯಮಾಮಿಷವರ್ಜನಂ ।
ಅಸ್ತೇಯಮೇವಾಹಿಂಸಾ ಚ ಸರ್ವೇಷಾಂ ಧರ್ಮಸಾಧನಂ ॥ ೩೯ ॥

ತಸ್ಮಾದ್ವರ್ಣಾನುರೂಪೇಣ ಪೂಜಯೇನ್ಮಧುಸೂದನಂ ।
ರಾತ್ರ್ಯಂತೇ ಸಮುತ್ಥಾಯ ಹ್ಯುಪಸ್ಪೃಶ್ಯ ಯಥಾವಿಧಿ ॥ ೪೦ ॥

---

೩೬. ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಕರ್ಮಗಳನ್ನು ಮಾಡದಿದ್ದರೆ ಆ ಆ ವೈಷ್ಣವನು ಪಂಚಪಾಷಂಡನಾಗಿ ರೌರವನರಕದಲ್ಲಿ ಬೀಳುತ್ತಾನೆ.

೩೭. ಆದ್ದರಿಂದ ಅವರವರ ವರ್ಣಕ್ಕೆ ಅನುರೂಪವಾಗಿ ಆ ಜಗತ್ಪತಿಯಾದ ವಿಷ್ಣುವಿನ ಪೂಜೆಯನ್ನು ಮಾಡಬೇಕು. ಸ್ಮೃತಿಯಲ್ಲಿ ಹೇಳಿರುವಂತೆ ಆಚಾರವನ್ನು ಯಾವಾಗಲೂ ಮಾಡಬೇಕು.

೩೮. ಎಲ್ಲಾ ವರ್ಣದವರೂ ಮಾನಸ ಪೂಜೆಯನ್ನು ಮಾಡಬೇಕು. ಅದು ಒಳ್ಳೆಯದು. ತನಗೆ ಎಷ್ಟು ಅಧಿಕಾರವಿದೆಯೆಂಬುದನ್ನು ನೋಡಿಕೊಂಡು ಅದಕ್ಕೆ ಅನುಗುಣವಾಗಿ ಮೀರದೆ ಎಚ್ಚರಿಕೆಯಿಂದ ಕರ್ಮವನ್ನು ಮಾಡಬೇಕು.

೩೯. ಶಮ, ದಮ, ತಪಸ್ಸು, ಶೌಚ, ಸತ್ಯ, ಮಾಂಸವನ್ನು ಬಿಡುವುದು, ಕದಿಯದಿರುವಿಕೆ, ಅಹಿಂಸೆ ಇವುಗಳು ಎಲ್ಲರಿಗೂ ಇರಬೇಕು. ಇವು ಧರ್ಮಕ್ಕೆ ಸಾಧನಗಳು.

೪೦–೪೧. ಭಕ್ತರಾದವರು ವರ್ಣಗಳಿಗೆ ಅನುಗುಣವಾಗಿ ವಿಷ್ಣುವನ್ನು ಪೂಜಿಸಬೇಕು. ರಾತ್ರಿಯ ಕೊನೆ ಎಂದರೆ ಬೆಳಗಿನಜಾವದಲ್ಲಿ ಎದ್ದು ಕೈಕಾಲುಗಳನ್ನು ತೊಳೆದುಕೊಂಡು ಬಾಯಿ ಮುಕ್ಕುಳಿಸಿ ಮುಖ ತೊಳೆದುಕೊಂಡು

ನಮಸ್ಕೃತ್ಯ ಗುರೂನ್ ಸ್ವಸ್ಯ ಸಂಸ್ಮರೇದಚ್ಯುತಂ ಹೃದಿ ।
ಸಹಸ್ರನಾಮಭಿರ್ಭಕ್ತ್ಯಾ ಕೀರ್ತಯೇದ್ವಾಗ್ಯತಶ್ಶುಚಿಃ ॥ ೪೦ ॥

ಬಹಿರ್ಗ್ರಾಮಾತ್ಸಮುತ್ಸೃಜ್ಯ ಮಲಮೂತ್ರಂ ಯಥಾವಿಧಿ ।
ಶೌಚಂ ಕೃತ್ವಾ ಯಥಾನ್ಯಾಯ್ಯಮಾಚಮ್ಯ ಪ್ರಯತಶ್ಶುಚಿಃ ॥ ೪೨ ॥

ದಂತಧಾವನಪೂರ್ವಂ ಚ ಸ್ನಾನಂ ಕುರ್ಯಾದ್ಯಥಾವಿಧಿ ।
ಆದಾಯ ತುಲಸೀಮೂಲಮೃದಂ ತತ್ಪತ್ರಸಂಯುತಾಂ ॥ ೪೩ ॥

ಮೂಲಮಂತ್ರೇಣಾಭಿಮಂತ್ರ್ಯ ಗಾಯತ್ರ್ಯಾ ಚ ಶುಭಾನನೇ ।
ಮಂತ್ರೇಣೈವಾನುಲಿಪ್ತಾಂಗಃ ಸ್ನಾಯಾತ್ ಕೃತ್ವಾಘಮರ್ಷಣಂ ॥ ೪೪ ॥

ಹರಿಪಾದೋದ್ಭವಾ ಗಂಗಾ ತಸ್ಯಾ ಗತ್ವಾ ಸುನಿರ್ಮಲೇ ।
ನಿಮಜ್ಯಾಪ್ಸು ಜಪೇತ್ಸೂಕ್ತಮಘಮರ್ಷಣಮುತ್ತಮಂ ॥ ೪೫ ॥

---

ಗುರುಗಳಿಗೆ ನಮಸ್ಕರಿಸಿ ಅಚ್ಯುತನನ್ನು ಧ್ಯಾನಮಾಡುತ್ತಾ ಸಹಸ್ರನಾಮಗಳನ್ನು ಹೇಳುತ್ತ ನಿಯಮದಿಂದ ಆ ಹರಿಯನ್ನು ಕೀರ್ತಿಸುತ್ತಿರಬೇಕು.

೪೨-೪೪. ಗ್ರಾಮದಿಂದ ಹೊರಗೆಹೋಗಿ ಮಲಮೂತ್ರಗಳನ್ನು ನಿವರ್ತಿ ಮಾಡಿಕೊಳ್ಳಬೇಕು. ಅನಂತರ ಕ್ರಮವಾಗಿ ಶೌಚವನ್ನು ಮಾಡಿಕೊಳ್ಳಬೇಕು. ಅನಂತರ ಆಚಮನಮಾಡಿ ಶುಚಿಯಾಗಬೇಕು. ಆಮೇಲೆ ಹಲ್ಲಿನ್ನು ತಿಕ್ಕಿಕೊಂಡು ವಿಧಿಯಂತೆ ಸ್ನಾನಮಾಡಬೇಕು. ಅನಂತರ ತುಳಸಿಯ ಬುಡದಲ್ಲಿರುವ ಮಣ್ಣನ್ನು ಅಲ್ಲಿ ಬಿದ್ದಿರುವ ಎಲೆಗಳ ಸಹಿತವಾಗಿ ತೆಗೆದುಕೊಳ್ಳಬೇಕು. ಅದನ್ನು ಮೂಲಮಂತ್ರದಿಂದ ಅಭಿಮಂತ್ರಿಸಬೇಕು. ಮತ್ತು ಗಾಯತ್ರಿಯಿಂದಲೂ ಮಂತ್ರಿಸಬೇಕು. ಮಂತ್ರಗಳನ್ನು ಹೇಳುತ್ತಾ ಮೈಗೆ ಆ ಮೃತ್ತಿಕೆಯನ್ನು ಬಳಿದುಕೊಳ್ಳಬೇಕು. ಆಮೇಲೆ ಅಘಮರ್ಷಣ ಸೂಕ್ತವನ್ನು ಹೇಳಿಕೊಂಡು ಸ್ನಾನಮಾಡಬೇಕು.

೪೫-೪೬. ಗಂಗೆಯು ಹರಿಯ ಪಾದದಲ್ಲಿ ಹುಟ್ಟಿದುದು. ಅದರ ನಿರ್ಮಲವಾದ ನೀರಿನಲ್ಲಿ ಇಳಿದು ಸ್ನಾನಮಾಡಿ ಅಘಮರ್ಷಣ ಸೂಕ್ತವನ್ನು ಜಪಿಸಬೇಕು.

ಆಚಮ್ಯ ಮಾರ್ಜನಂ ಕುರ್ಯಾತ್ ಪೌರುಷೋಕ್ತಕ್ರಮಾದಥ ।
ಪಶ್ಚಾದಪ್ಸು ನಿಮಜ್ಯಾಥ ಮೂಲಮಂತ್ರಂ ಜಪೇದ್ಬುಧಃ ॥ ೪೬ ॥

ಅಷ್ಟಾವಿಂಶತಿವಾರಂ ವಾ ಶತಮಷ್ಟೋತ್ತರಂ ತು ವಾ ।
ಪ್ರಾಶಯೇದಭಿಮಂತ್ರ್ಯಾಥ ಜಲಂ ಮಂತ್ರೇಣ ವೈಷ್ಣವಃ ॥ ೪೭ ॥

ಆಚಮ್ಯ ತರ್ಪಯೇದ್ದೇವಾನ್ ಋಷೀಂಶ್ಚೈವ ಪಿತೄಂಸ್ತಥಾ ।
ನಿಪೀಡ್ಯ ವಸ್ತ್ರಮಾಚಮ್ಯ ಧೌತವಸ್ತ್ರೇಣ ವೇಷ್ಟಿತಃ ॥ ೪೮ ॥

ವಿಮಲಾಂ ಮೃತ್ತಿಕಾಂ ರಮ್ಯಾಮಾದಾಯ ದ್ವಿಜಸತ್ತಮಃ ।
ಮಂತ್ರೇಣೈವಾಭಿಮಂತ್ರ್ಯಾಥ ಲಲಾಟಾದಿಷು ವೈಷ್ಣವಃ ॥ ೪೯ ॥

ಧಾರಯೇದೂರ್ಧ್ವಪುಂಡ್ರಾಣಿ ಯಥಾಸಂಖ್ಯಮತಂದ್ರಿತಃ ।
ಉಪಾಸ್ಯ ವಿಧಿವತ್ಸಂಧ್ಯಾಂ ಸಾವಿತ್ರೀಂ ಚ ಜಪೇದ್ಬುಧಃ ॥ ೫೦ ॥

---

ಅನಂತರ ಆಚಮನ ಮಾಡಿ ಪುರುಷಸೂಕ್ತವನ್ನು ಹೇಳುತ್ತ ಮಾರ್ಜನೆಯನ್ನು ಮಾಡಿಕೊಳ್ಳಬೇಕು. ಅನಂತರ ಮತ್ತೆ ಸ್ನಾನಮಾಡಿ ಮೂಲಮಂತ್ರವನ್ನು ಜಪಿಸಬೇಕು.

೪೭. ನೂರೆಂಟು ಬಾರಿಯಾಗಲಿ ಇಪ್ಪತ್ತೆಂಟು ಬಾರಿಯಾಗಲಿ ಆ ಮೂಲ ಮಂತ್ರವನ್ನು ಜಪಿಸಿ ಕೈಯ್ಯಲ್ಲಿ ನೀರನ್ನು ಹಿಡಿದುಕೊಂಡಿದ್ದು ಆ ನೀರನ್ನು ಕುಡಿಯಬೇಕು.

೪೮-೫೦. ಆಚಮನ ಮಾಡಿ ದೇವತೆಗಳಿಗೂ ಋಷಿಗಳಿಗೂ ಪಿತೃಗಳಿಗೂ ತರ್ಪಣವನ್ನು ಕೊಡಬೇಕು. ಬಟ್ಟೆಯನ್ನು ಹಿಂಡಿಕೊಂಡು ಆಚಮನ ಮಾಡಿ ಮಡಿ ಬಟ್ಟೆಯನ್ನುಟ್ಟುಕೊಳ್ಳಬೇಕು. ಆಮೇಲೆ ಶುದ್ಧವಾದ ಮೃತ್ತಿಕೆಯನ್ನು ತೆಗೆದುಕೊಂಡು ಮಂತ್ರದಿಂದ ಅಭಿಮಂತ್ರಿಸಿ ಹಣೆಯೇ ಮುಂತಾದ ಜಾಗಗಳಲ್ಲಿ ಇಟ್ಟುಕೊಳ್ಳಬೇಕು. ಅದನ್ನು ಎಷ್ಟನ್ನು ಇಟ್ಟುಕೊಳ್ಳಬೇಕೆಂದು ಹೇಳಿದೆಯೋ ಅಷ್ಟನ್ನು ಇಟ್ಟುಕೊಳ್ಳಬೇಕು. ಅನಂತರ ಕ್ರಮವಾಗಿ ಸಂಧ್ಯಾವಂದನೆಯನ್ನು ಮಾಡಬೇಕು. ಸಾವಿತ್ರಿಯನ್ನು ಜಪಿಸಬೇಕು.

ಸಂಯತಾತ್ಮಾ ಗೃಹಂ ಗತ್ವಾ ಪಾದೌ ಪ್ರಕ್ಷಾಲ್ಯ ವಾಗ್ಯತಃ ।
ಆಚಮ್ಯೈಕಾಗ್ರಮನಸಾ ಪೂಜಾಮಂಡಪಮಾವಿಶೇತ್ ॥ ೫೧ ॥

ರಮ್ಯೇ ಶುಭದಳೇ ಪೀಠೇ ಪ್ರಸೂನೇನ ಚ ಶೋಭಿತೇ ।
ತಸ್ಮಿನ್ನಿವೇಶ್ಯ ದೇವಂ ತಂ ಲಕ್ಷ್ಮೀನಾರಾಯಣಂ ಪ್ರಭುಂ ॥ ೫೨ ॥

ಪೂಜಯೇದ್ವಿಧಿನಾ ಸಮ್ಯಗ್ಗಂಧಪುಷ್ಪಾಕ್ಷತಾದಿಭಿಃ ।
ಸ್ಥಾಪನೇ ವಾ ಸ್ವಯಂವ್ಯಕ್ತೇ ಗೃಹಾರ್ಚಾಯಾಂ ವಿಧಾನತಃ ॥ ೫೩ ॥

ಶ್ರೌತಸ್ಮಾರ್ತಾಗಮೋಕ್ತಾನಾಮರ್ಚನಂ ವಿಧಿನಾ ದ್ವಿಜಃ ।
ಕುರ್ಯಾದ್ಭಕ್ತ್ಯಾ ಯಥಾರ್ಹಂ ಚ ವಿಷ್ಣೋಃ ಪ್ರಯತಮಾನಸಃ ॥ ೫೪ ॥

ಯಥೋಪದಿಷ್ಟಂ ಗುರುಣಾ ತಥಾ ಕುರ್ವೀತ ವೈಷ್ಣವಃ ।
ಶ್ರೌತಂ ವೈಖಾನಸಂ ಪ್ರೋಕ್ತಂ ವಾಸಿಷ್ಠಂ ಸ್ಮಾರ್ತಮುಚ್ಯತೇ ॥ ೫೫ ॥

---

೫೧. ಅನಂತರ ಶುದ್ಧನಾಗಿ ಮನೆಗೆ ಹೋಗಿ ಕಾಲುಗಳನ್ನು ತೊಳೆದು ಕೊಂಡು ಆಚಮನಮಾಡಿ ಶುದ್ಧನಾಗಿ ಒಂದೇ ಮನಸ್ಸಿನಿಂದ ಪೂಜೆಯ ಮಂಟಪಕ್ಕೆ ಹೋಗಬೇಕು.

೫೨. ಮನೋಹರವಾಗಿರುವ ಒಳ್ಳೆಯ ದಳಗಳುಳ್ಳ ಹೂವುಗಳಿಂದ ಅಲಂಕೃತವಾದ ಮನೋಹರವಾಗಿರುವ ಪೀಠದಲ್ಲಿ ಲಕ್ಷ್ಮೀನಾರಾಯಣ ಸ್ವಾಮಿಯನ್ನಿಡಬೇಕು.

೫೩–೫೪. ಅಂತಹ ಸ್ವಾಮಿಯನ್ನು ಗಂಧ, ಹೂ, ಅಕ್ಷತೆ ಮುಂತಾದುವು ಗಳಿಂದ ಚೆನ್ನಾಗಿ ಭಕ್ತಿಯಿಂದ ಪೂಜೆಮಾಡಬೇಕು. ಸ್ಥಾಪನಮಾಡಿದ ದೇವರ ನ್ನಾಗಲಿ ಸ್ವಯಂವ್ಯಕ್ತವಾದ ದೇವರಲ್ಲಾಗಲಿ ಮನೆಯಲ್ಲಿ ಅರ್ಚನೆ ಮಾಡುವ ಸಾಲಗ್ರಾಮಗಳಲ್ಲಿಯಾಗಲಿ ಶ್ರೌತ, ಸ್ಮಾರ್ತ, ಆಗಮರೀತಿಯಲ್ಲಿ ಅವನ ಯೋಗ್ಯತೆಗೆ ತಕ್ಕಂತೆ ನಿಯಮದಿಂದ ಪೂಜಿಸಬೇಕು.

೫೫–೫೬. ಗುರುವು ಹೇಳಿ ಉಪದೇಶಮಾಡಿರುವ ರೀತಿಯಲ್ಲಿ ವೈಷ್ಣವನಾ ದವನು ಪೂಜೆಮಾಡಬೇಕು. ವೈಖಾನಸ ರೀತಿಯಲ್ಲಿ ಹೇಳಿರುವ ಪೂಜೆಗೆ ಶ್ರೌತವೆಂದೂ ವಸಿಷ್ಠನು ಹೇಳಿರುವ ಪೂಜೆಗೆ ಸ್ಮಾರ್ತವೆಂದೂ ಪಂಚರಾತ್ರ

ಪಂಚರಾತ್ರವಿಧಾನಂ ಯತ್ ದಿವ್ಯಾಗಮ ಇತೀರಿತಂ ।
ಕ್ರಿಯಾಲೋಪಂ ನ ಕರ್ತವ್ಯಂ ವಿಷ್ಣೋರಾರಾಧನಂ ಪರಂ ॥ ೫೬ ॥

ಆವಾಹನಾಸನಾರ್ಘ್ಯಾದ್ಯೈಃ ಗಂಧಪುಷ್ಪಾಕ್ಷತಾದಿಭಿಃ ।
ಧೂಪೈರ್ದೀಪೈಶ್ಚ ನೈವೇದ್ಯೈಸ್ತಾಂಬೂಲಾದ್ಯೈಃ ನಮಸ್ಕೃತೈಃ ॥ ೫೭ ॥

ಕುರ್ಯಾದಾರಾಧನಂ ವಿಷ್ಣೋಃ ಯಥಾಶಕ್ತಿ ಮುದಾನ್ವಿತಃ ।
ಪ್ರತ್ಯೃಚಂ ಪುರುಷಸೂಕ್ತೇನ ಮೂಲಮಂತ್ರೇಣ ವೈಷ್ಣವಃ ॥ ೫೮ ॥

ಮಂತ್ರದ್ವಯೇನ ಕುರ್ವೀತ ಷೋಡಶೈರುಪಚಾರಕೈಃ ।
ಭೂಯಃ ಪ್ರತ್ಯುಪಚಾರೇಷು ದದ್ಯಾತ್ಪುಷ್ಪಾಂಜಲಿಂ ತತಃ ॥ ೫೯ ॥

ಆವಾಹಯೇಜ್ಜಗನ್ನಾಥಂ ಮುದ್ರಯಾ ಚೈವ ವೈಷ್ಣವಃ ।
ಆಸನಂ ತು ತಥಾ ದದ್ಯಾತ್ ಪುಷ್ಪಕೇಣ ಚ ಮುದ್ರಯಾ ॥ ೬೦ ॥

---

ವಿಧಾನಕ್ಕೆ ದಿವ್ಯಾಗಮವೆಂದೂ ಹೆಸರು. ಕ್ರಿಯೆಯಲ್ಲಿ ಲೋಪವನ್ನು ಮಾಡದೆ ವಿಷ್ಣುವಿನ ಆರಾಧನೆಯನ್ನು ಮಾಡಬೇಕು.

೫೭–೫೮. ಆವಾಹನ, ಆಸನ, ಅರ್ಘ್ಯ, ಗಂಧ, ಹೂ, ಅಕ್ಷತೆ, ಧೂಪ, ದೀಪ, ನೈವೇದ್ಯ, ತಾಂಬೂಲ, ನಮಸ್ಕಾರ ಮುಂತಾದುವುಗಳಿಂದ ಸಾಧ್ಯವಾದ ಮಟ್ಟಿಗೆ ಲೋಪಮಾಡದೆ ಪೂಜಿಸಬೇಕು. ಮೂಲಮಂತ್ರದಿಂದಲೂ ಪುರುಷ ಸೂಕ್ತವನ್ನು ಹೇಳುತ್ತಲೂ ಒಂದೊಂದು ಋಕ್ಕಿಗೂ ಒಂದೊಂದು ಪೂಜೆಯಂತೆ ಪೂಜಿಸಬೇಕು.

೫೮. ಮೂಲಮಂತ್ರ ಮತ್ತು ಒಂದೊಂದು ಪುರುಷಸೂಕ್ತದಿಂದಲೂ ಷೋಡಶೋಪಚಾರರೀತಿಯಾಗಿ ಪೂಜಿಸಬೇಕು. ಮತ್ತೆ ಉಪಚಾರಗಳನ್ನು ಹೇಳುತ್ತ ಅನಂತರ ಪುಷ್ಪಾಂಜಲಿಯನ್ನು ಕೊಡಬೇಕು.

೬೦–೬೧. ವೈಷ್ಣವಮಂತ್ರಗಳಿಂದ ಆ ಸ್ವಾಮಿಯನ್ನು ಆವಾಹನೆಮಾಡಿ ಅನಂತರದಲ್ಲಿ ಆಸನಮುದ್ರೆಯನ್ನು ತೋರಿಸಿ ಪುಷ್ಪದಿಂದ ಆವಾಹಿಸಬೇಕು.

ದೀಪಾರ್ಘ್ಯಾಚಮನಸ್ನಾನಪಾತ್ರಸ್ಥೈಃ ವಿಮಲೈರ್ಜಲೈಃ ।
ಮಂಗಲದ್ರವ್ಯಸಂಯುಕ್ತೈಃ ತುಲಸೀದಳಮಿಶ್ರಿತೈಃ ॥ ೬೧ ॥

ದದ್ಯಾತ್ಪ್ರತ್ಯುಪಚಾರಂ ತು ಮೂಲಮಂತ್ರದ್ವಯೇನ ಚ ।
ಸುವಾಸಿತೇನ ತೈಲೇನ ಕುರ್ಯಾದಭ್ಯಂಜನಂ ತತಃ ॥ ೬೨ ॥

ಕಸ್ತೂರ್ಯಾ ಚಂದನೇನಾಪಿ ಕುರ್ಯಾದುದ್ವರ್ತನಾದಿಕಂ ।
ಸುಗಂಧವಾಸಿತೈಸ್ತೋಯೈಃ ಸ್ನಾಪ್ಯ ಮಂತ್ರಯುತೈಶ್ಶುಭೇ ॥ ೬೩ ॥

ವಸ್ತ್ರೈರಾಭರಣೈರ್ದಿವ್ಯೈರಲಂಕೃತ್ಯ ಯಥಾವಿಧಿ ।
ಮಧುಪರ್ಕಂ ತತೋ ದದ್ಯಾದ್ಗಂಧಂ ದದ್ಯಾತ್ ಸುವಾಸಿತಂ ॥ ೬೪ ॥

ಸುರಭೀಣಿ ಸುಪುಷ್ಪಾಣಿ ಭಕ್ತ್ಯಾ ಸಮ್ಯಕ್ ನಿವೇದಯೇತ್ ।
ಧೂಪಂ ದಶಾಂಗಮಷ್ಟಾಂಗಂ ದೀಪಂ ಚ ಸುಮನೋಹರಂ ॥ ೬೫ ॥

---

ದೀಪ, ಅರ್ಘ್ಯ, ಆಚಮನ, ಸ್ನಾನಗಳನ್ನು ಪಾತ್ರೆಯನ್ನಿಟ್ಟು ಅವುಗಳಲ್ಲಿ ಶುದ್ಧವಾದ ನೀರನ್ನು ಇಟ್ಟು ಅದರಿಂದ ಕೊಡಬೇಕು. ಅದರಲ್ಲಿ ಮಂಗಳ ದ್ರವ್ಯಗಳನ್ನು ಹಾಕಿ ತುಲಸೀದಳವನ್ನು ಹಾಕಿರಬೇಕು.

೬೨. ಮೂಲಮಂತ್ರಗಳನ್ನು ಹೇಳುತ್ತ ಪ್ರತ್ಯುಪಚಾರವನ್ನು ಮಾಡಬೇಕು. ಅನಂತರ ಒಳ್ಳೆಯ ಸುವಾಸನೆಯುಳ್ಳ ತೈಲದಿಂದ ದೇವರಿಗೆ ಅಭ್ಯಂಜನವನ್ನು ಮಾಡಿಸಬೇಕು.

೬೩-೬೪. ಕಸ್ತೂರಿಯಿಂದಲೂ ಸುಗಂಧದಿಂದಲೂ ತಿಕ್ಕಬೇಕು. ತೊಳೆಯಬೇಕು ಸುವಾಸನೆಯುಳ್ಳ ನೀರಿನಿಂದ ಮಂತ್ರವನ್ನು ಹೇಳಿ ಸ್ನಾನಮಾಡಿಸಬೇಕು. ಅನಂತರ ವಸ್ತ್ರಗಳನ್ನೂ ಆಭರಣಗಳನ್ನೂ ಧರಿಸಿ ಅಲಂಕರಿಸಬೇಕು. ಆಮೇಲೆ ಮಧುಪರ್ಕವನ್ನು ಕೊಡಬೇಕು. ಅನಂತರ ಸುವಾಸನೆಯುಳ್ಳ ಗಂಧವನ್ನು ಕೊಡಬೇಕು.

೬೫-೬೬. ತನ್ನ ಶಕ್ತಿಯನ್ನುಪಯೋಗಿಸಿ ಸುವಾಸನೆಯುಳ್ಳ ಚೆನ್ನಾಗಿರುವ ಹೂವುಗಳನ್ನು ತಂದು ಸಮರ್ಪಿಸಬೇಕು. ದಶಾಂಗ, ಅಷ್ಟಾಂಗರೂಪವಾದ

ನೈವೇದ್ಯಂ ವಿವಿಧಂ ದದ್ಯಾತ್ ಪಾಯಸಾಪೂಪಮಿಶ್ರಿತಂ ।
ಸಕರ್ಪೂರಂ ಸುತಾಂಬೂಲಂ ಭಕ್ತ್ಯಾ ಚೈವ ನಿವೇದಯೇತ್ ॥ ೬೬ ॥

ದೀಪೈರ್ನೀರಾಜನಂ ಕೃತ್ವಾ ಪುಷ್ಪಮಾಲಾಂ ಸಮರ್ಪಯೇತ್ ।
ಪರಿಣೀಯ ಪ್ರಣಮ್ಯಾಥ ಸ್ತುತ್ವಾ ಸ್ತೋತ್ರೈರನುತ್ತಮೈಃ ॥ ೬೭ ॥

ಗರುಡಾಂಕೇ ಶಾಯಯಿತ್ವಾ ಮಂಗಳಾರ್ಘ್ಯಂ ನಿವೇದಯೇತ್ ।
ಸಂಕೀರ್ತ್ಯ ನಾಮಭಿಃ ಪುಣ್ಯೈಃ ಪಶ್ಚಾದ್ಧೋಮಂ ಸಮಾಚರೇತ್ ॥ ೬೮ ॥

ಹರೇರ್ನೈವೇದ್ಯಶೇಷೇಣ ಜುಹುಯಾದ್ವಹ್ನಿಮಂಡಲೇ ।
ಪ್ರತ್ಯೃಚಂ ಪೌರುಷಂ ಸೂಕ್ತಂ ಶ್ರೀಸೂಕ್ತಂ ಮಂಗಳಾಹ್ವಯಂ ॥ ೬೯ ॥

ಹೋತವ್ಯಮಾಜ್ಯಸಮ್ಮಿಶ್ರಹವಿಷಾ ವೈದಿಕಾನಲೇ ।
ಪ್ರೋಕ್ತೇನ ಮಂತ್ರರತ್ನೇನ ಜುಹುಯಾದ್ಭಕ್ತಿಸಂಯುತಂ ॥ ೭೦ ॥

---

ಧೂಪಗಳನ್ನು ನಿವೇದಿಸಬೇಕು. ಚೆನ್ನಾಗಿರುವ ದೀಪವನ್ನು ಬೆಳಗಬೇಕು. ಪಾಯಸ, ಶೀತಿಂಡಿಗಳಿಂದ ಕೂಡಿದ ನಾನಾಬಗೆಯಾದ ನೈವೇದ್ಯಗಳನ್ನು ಅರ್ಪಿಸಬೇಕು. ಪಚ್ಚಕರ್ಪೂರದೊಡನೆ ಕೂಡಿರುವ ತಾಂಬೂಲವನ್ನು ಭಕ್ತಿಯಿಂದ ಸಮರ್ಪಿಸಬೇಕು.

೬೭–೬೮. ದೀಪಗಳಿಂದ ಮಂಗಳಾರತಿಯನ್ನು ಮಾಡಬೇಕು. 'ಅನಂತರ ಹೂಮಾಲೆಯನ್ನು ಹಾಕಬೇಕು. ಅನೇಕವಾದ ಸ್ತೋತ್ರಗಳನ್ನು ಹೇಳುತ್ತಾ ನಮಸ್ಕರಿಸಬೇಕು. ಅನಂತರ ಗರುಡನ ಬೆನ್ನಿನಮೇಲೆ ಮಲಗಿಸಿ ಸಹಸ್ರ ನಾಮವೇ ಮುಂತಾದ ಪುಣ್ಯನಾಮಗಳನ್ನು ಹೇಳುತ್ತಾ ಹೋಮವನ್ನು ಮಾಡಬೇಕು.

೬೯–೭೦. ಹರಿಗೆ ನೈವೇದ್ಯವನ್ನು ಮಾಡಿ ಅದರ ಶೇಷದಿಂದ ಅಗ್ನಿಯಲ್ಲಿ ಹೋಮಮಾಡಬೇಕು. ಪುರುಷಸೂಕ್ತ ಶ್ರೀ ಸೂಕ್ತಗಳನ್ನು ಹೇಳುತ್ತ ಒಂದೊಂದು ಋಕ್ಕಿಗೆ ಒಂದೊಂದು ಹೋಮದಂತೆ ತುಪ್ಪವನ್ನೂ ಹವಿಸ್ಸನ್ನೂ ಪ್ರತಿಷ್ಠೆ ಮಾಡಿದ ಅಗ್ನಿಯಲ್ಲಿ ಹೋಮಮಾಡಬೇಕು. ಮತ್ತು ಮೂಲಮಂತ್ರ ಗಳನ್ನು ಹೇಳುತ್ತ ಭಕ್ತಿಯಿಂದ ಹೋಮಮಾಡಬೇಕು.

ಅಷ್ಟೋತ್ತರಶತವಾರಮಷ್ಟಾವಿಂಶತಿಮೇವ ವಾ |
ಯಜ್ಞರೂಪಂ ಮಹಾವಿಷ್ಣುಂ ಧ್ಯಾಯನ್ ವೈ ಜುಹುಯಾದ್ಧವಿಃ || ೭೧ ||

ಶುದ್ಧಜಾಂಬೂನದನಿಭಂ ಶಂಖಚಕ್ರಗದಾಧರಂ |
ಸಮಸ್ತವೇದವೇದಾಂತಸಾಂಗೋಪಾಂಗಯುತಂ ಪ್ರಭುಂ || ೭೨ ||

ದೇವ್ಯಾ ಶ್ರಿಯಾ ಸಮಾಸೀನಂ ಧ್ಯಾತ್ವಾ ಹೋಮಂ ಸಮಾಚರೇತ್ |
ಏಕೈಕಾಮಾಹುತಿಂ ಪಶ್ಚಾನ್ನಾಮಭಿರ್ಜುಹುಯಾದ್ಧವಿಃ || ೭೩ ||

ನಿತ್ಯಾನ್ ಭಕ್ತಾನ್ ಸಮುದ್ದಿಶ್ಯ ಮಹಾಭಾಗವತೋತ್ತಮಃ |
ಭೂಲೀಲಾವಿಮಲಾದ್ಯಾಶ್ಚ ಶಕ್ತಯಃ ಪ್ರಥಮಂ ಕ್ರಮಾತ್ || ೭೪ ||

ಅನಂತವಿಹಗೇಂದ್ರಾದಿದೇವತಾಸ್ತದನಂತರಂ |
ವಾಸುದೇವಾದಯಃ ಪಶ್ಚಾತ್ತಥಾ ಶಕ್ತ್ಯಾದಿದೇವತಾಃ || ೭೫ ||

---

೭೧. ನೂರೆಂಟುಬಾರಿಯಾಗಲಿ ಇಲ್ಲದಿದ್ದರೆ ಇಪ್ಪತ್ತೆಂಟು ಬಾರಿಯಾಗಲಿ ಯಜ್ಞರೂಪಿಯಾದ ಮಹಾವಿಷ್ಣುವನ್ನು ಧ್ಯಾನಿಸುತ್ತ ಹೋಮಮಾಡಬೇಕು.

೭೨–೭೩. ಪುಟಕ್ಕೆ ಹಾಕಿದ ಚಿನ್ನದಂತೆ ಬಣ್ಣವುಳ್ಳ, ಶಂಖ, ಚಕ್ರ, ಗದೆಗಳನ್ನು ಧರಿಸಿರುವ, ವೇದವೇದಾಂತಗಳನ್ನು ಸಾಂಗೋಪಾಂಗವಾಗಿ ಹೊಂದಿರುವ, ಶ್ರೀದೇವಿಯೊಡನೆ ಕುಳಿತಿರುವ, ಆ ಸ್ವಾಮಿಯನ್ನು ಧ್ಯಾನಿಸುತ್ತಾ ಹೋಮವನ್ನು ಮಾಡಬೇಕು. ಅನಂತರ ಆ ಸ್ವಾಮಿಯ ಒಂದೊಂದು ನಾಮಗಳನ್ನೂ ಹೇಳುತ್ತ ಹೋಮಮಾಡಬೇಕು.

೭೪-೮೧. ಭಾಗವತನಾದವನು ಸ್ವಾಮಿಯ ನಿತ್ಯಭಕ್ತರಾದವರಿಗೂ ಭೂಮಿ, ಲಕ್ಷ್ಮಿ, ವಿಮಲೆ ಮುಂತಾದ ಶಕ್ತಿಯರಿಗೂ ಮೊದಲು ಕ್ರಮವಾಗಿ ಹೋಮವನ್ನು ಮಾಡಬೇಕು. ಅನಂತ, ಗರುಡ, ಮುಂತಾದವರಿಗೆ ಹೋಮಮಾಡಬೇಕು. ಆಮೇಲೆ ವಾಸುದೇವನೇ ಮುಂತಾದವರಿಗೆ ಹೋಮಮಾಡಬೇಕು. ಅನಂತರ ಶಕ್ತಿದೇವತೆಗಳಿಗೆ ಹೋಮಮಾಡಬೇಕು. ಆಮೇಲೆ

ಮೂರ್ತಯಃ ಕೇಶವಾದ್ಯಾಶ್ಚ ತಥಾ ಸಂಕರ್ಷಣಾದಯಃ |
ಮತ್ಸ್ಯಕೂರ್ಮಾದಯಶ್ಚೈವ ತಥಾ ಚಕ್ರಾದಿಹೇತಯಃ ॥ ೭೬ ॥

ಕುಮುದಾದಯಶ್ಚ ತ್ರಿದಶಾಃ ತಥಾ ಚಂದ್ರಾದಿದೇವತಾಃ |
ಇಂದ್ರಾದಿಲೋಕಪಾಲಶ್ಚ ತಥಾ ಧರ್ಮಾದಿದೇವತಾಃ ॥ ೭೭ ॥

ಹೋತವ್ಯಾಃ ಕ್ರಮಶಸ್ತಸ್ಮಿನ್ ಸಂಪೂಜ್ಯಾಶ್ಚ ವಿಶೇಷತಃ |
ಏವಂ ವೈಕುಂಠಹೋಮಂ ತು ಮಹಾಭಾಗವತೋತ್ತಮಃ ॥ ೭೮ ॥

ನಿತ್ಯಾರ್ಚನವಿಧೌ ನಿತ್ಯಂ ಕುರ್ವೀತ ಸುಸಮಾಹಿತಃ |
ಗೃಹಾರ್ಚನೇ ಗೃಹದ್ವಾರಿ ಪಂಚಯಜ್ಞವಿಧಾನತಃ ॥ ೭೯ ॥

ದತ್ವಾ ಬಲಿಂ ವಿಧಾನೇನ ಪಶ್ಚಾದಾಚಮನಂ ಚರೇತ್ |
ಉಪವಿಶ್ಯಾಸನೇ ಶುಭ್ರೇ ಕೃಷ್ಣಾಜಿನಕುಶೋತ್ತರೇ ॥ ೮೦ ॥

---

ಕೇಶವಾದಿ ಮೂರ್ತಿಗಳಿಗೂ ಸಂಕರ್ಷಣಾದಿಗಳಿಗೂ ಹೋಮಮಾಡಬೇಕು. ಮತ್ತು ಮತ್ಸ್ಯ, ಕೂರ್ಮ ಮುಂತಾದವರಿಗೂ ಆಮೇಲೆ ಚಕ್ರವೇ ಮುಂತಾದ ಆಯುಧಗಳಿಗೂ ಹೋಮ ಮಾಡಬೇಕು. ಆಮೇಲೆ ಕುಮುದ ಮುಂತಾದ ವರಿಗೂ ಚಂದ್ರಾದಿ ದೇವತೆಗಳಿಗೂ ಹೋಮ ಮಾಡಬೇಕು. ಆಮೇಲೆ ಇಂದ್ರನೇ ಮುಂತಾದ ಲೋಕಪಾಲಕರಿಗೆ ಹೋಮಮಾಡಬೇಕು. ಅನಂತರ ಧರ್ಮಾದಿ ದೇವತೆಗಳಿಗೆ ಹೋಮ ಮಾಡಬೇಕು. ಅವರಿಗೆಲ್ಲರಿಗೂ ಈ ಕ್ರಮದಿಂದ ಹೋಮ ಮಾಡುವುದಲ್ಲದೆ ಕ್ರಮವಾಗಿ ಪೂಜಿಸಲೂ ಬೇಕು. ಇವಕ್ಕೆ ವೈಕುಂಠಹೋಮವೆಂದು ಹೆಸರು. ಭಾಗವತನಾದವನು ನಿತ್ಯಾರ್ಚನೆ ಯಲ್ಲಿ ಈ ರೀತಿಯಾಗಿ ನಿಯಮದಿಂದ ಹೋಮವನ್ನು ಮಾಡಬೇಕು. ಮನೆಯ ಪೂಜೆಯಲ್ಲಿ ಪಂಚಯಜ್ಞದ ರೀತಿಯಿಂದ ಮನೆಯ ಬಾಗಿಲಿನಲ್ಲಿ ಬಲಿಯನ್ನು ಹಾಕಬೇಕು. ಅನಂತರ ಆಚಮನವನ್ನು ಮಾಡಬೇಕು. ದರ್ಭೆಯನ್ನು ಕೆಳಗೆಹಾಕಿ ಅದರಮೇಲೆ ಕೃಷ್ಣಾಜಿನವನ್ನು ಹಾಕಿಕೊಂಡು ಅದರಲ್ಲಿ ಕುಳಿತು ಮಂತ್ರವನ್ನು ಪುನಶ್ಚರಣೆ ಮಾಡಬೇಕು. ಅದು ತನಗೆ

ಮಂತ್ರಯೋಗಂ ಪ್ರಕುರ್ವೀತ ಭೋಗಾರ್ಥಂ ಸುಖಮಾತ್ಮನಃ ।
ಸಮ್ಯಕ್ ಪದ್ಮಾಸನಾಸೀನೋ ಭೂತಶುದ್ಧಿಂ ಸಮಾಚರೇತ್ ॥ ೮೧ ॥

ಪ್ರಾಣಾಯಾಮತ್ರಯಂ ಕುರ್ಯಾತ್ ಮಂತ್ರೇಣ ವಿಜಿತೇಂದ್ರಿಯಃ ।
ಊರ್ಧ್ವಮುಖಂ ತತಃ ಕೃತ್ವಾ ಹೃತ್ಪಂಕಜಮನುತ್ತಮಂ ॥ ೮೨ ॥

ವಿಕಾಸಂ ತಸ್ಯ ಕುರ್ವೀತ ವಿಜ್ಞಾನರವಿಣಾ ಹೃದಿ ।
ತತ್ಕರ್ಣಿಕಾಯಾಂ ವಹ್ನ್ಯರ್ಕಶಶಿಬಿಂಬಾನ್ಯನುಕ್ರಮಾತ್ ॥ ೮೩ ॥

ತ್ರಯಂ ತ್ರಯೀಮಯೇತಸ್ಮಿಂಶ್ಚಿಂತಯೇದ್ವೈಷ್ಣವೋತ್ತಮಃ ।
ನಾನಾರತ್ನಮಯಂ ಪೀಠಂ ತೇಷಾಮುಪರಿಚಿಂತಯೇತ್ ॥೮೪ ॥

ತಸ್ಮಿನ್ ಹೃತ್ಪದ್ಮಮೂಲಾಂತೇ ಬಾಲಾರ್ಕಸದೃಶದ್ಯುತಿ ।
ಅಷ್ಟೈಶ್ವರ್ಯದಳಂ ಪದ್ಮಂ ಮಂತ್ರಾಕ್ಷರಮಯಂ ಚರೇತ್ ॥ ೮೫ ॥

---

ಸುಖಕರವಾಗುತ್ತದೆ. ಮತ್ತು ತನಗೆ ಬಾಧೆಗಳು ಬರದಿರುವುದಕ್ಕೋಸ್ಕರ ಪದ್ಮಾಸನವನ್ನು ಹಾಕಿಕೊಂಡು ಭೂತಶುದ್ಧಿಯನ್ನು ಮಾಡಿಕೊಳ್ಳಬೇಕು.

೮೨-೮೪. ಆಮೇಲೆ ಮಂತ್ರದಿಂದ ಮೂರು ಪ್ರಾಣಾಯಾಮಗಳನ್ನು ಮಾಡಬೇಕು. ಆಗ ಮೇಲುಮುಖವಾಗಿ ಮುಖವನ್ನು ಮಾಡಿಕೊಂಡು ಹೃತ್ಕಮಲವನ್ನು ಜ್ಞಾನವೆಂಬ ರವಿಯಿಂದ ಅರಳುವಂತೆ ಮಾಡಬೇಕು. ಆ ಹೃತ್ಪದ್ಮದ ಕರ್ಣಿಕೆಯಲ್ಲಿ ಅಗ್ನಿ, ಸೂರ್ಯ, ಚಂದ್ರರನ್ನು ಆವಾಹಿಸಬೇಕು. ವೇದಮಯವಾದ ಆ ಹೃತ್ಪದ್ಮದಲ್ಲಿ ಮೂರು ದಳಗಳಲ್ಲಿಯೂ ಈ ಮೂವರನ್ನೂ ಕ್ರಮವಾಗಿ ಧ್ಯಾನಿಸಬೇಕು. ಅನಂತರ ಈ ಮೂವರಿರುವ ಕರ್ಣಿಕೆಯ ಮೇಲೆ ಬಗೆಬಗೆಯ ರತ್ನಗಳಿಂದ ಸುಂದರವಾದ ಪೀಠವನ್ನು ಧ್ಯಾನಿಸಬೇಕು.

೮೫ ಆ ಹೃತ್ಪದ್ಮದ ಮೂಲದಲ್ಲಿ ಬಾಲಸೂರ್ಯನಂತೆ ಕಾಂತಿಯುಳ್ಳ ಮಂತ್ರಾಕ್ಷರ ರೂಪವಾದ ಅಷ್ಟೈಶ್ವರ್ಯಗಳೆಂಬ ದಳವುಳ್ಳ ಪದ್ಮವನ್ನು ಮಾಡಿಕೊಂಡಂತೆ ಭಾವಿಸಬೇಕು.

ತಸ್ಮಿನ್ ದೇವ್ಯಾ ಸಮಾಸೀನಂ ಕೋಟಿಶೀತಾಂಶುಸನ್ನಿಭಂ ।
ಚತುರ್ಭುಜಂ ಸುಂದರಾಂಗಂ ಶಂಖಚಕ್ರಗದಾಧರಂ ॥ ೮೬ ॥

ಪದ್ಮಪತ್ರವಿಶಾಲಾಕ್ಷಂ ಸರ್ವಲಕ್ಷಣಲಕ್ಷಿತಂ ।
ಶ್ರೀವತ್ಸಕೌಸ್ತುಭೋರಸ್ಕಂ ಪೀತವಸ್ತ್ರಧರಂ ಪ್ರಭುಂ ॥ ೮೭ ॥

ವಿಚಿತ್ರಾಭರಣೈರ್ಯುಕ್ತಂ ದಿವ್ಯಮಂಡನಮಂಡಿತಂ ।
ದಿವ್ಯಚಂದನಲಿಪ್ತಾಂಗಂ ದಿವ್ಯಪುಷ್ಪೋಪಶೋಭಿತಂ ॥ ೮೮ ॥

ತುಲಸೀಕೋಮಲದಳವನಮಾಲಾವಿಭೂಷಿತಂ ।
ಬಾಲಾರ್ಕಕೋಟಿಸದೃಶಂ ಕಾಂತ್ಯಾ ದೇವ್ಯಾ ಶ್ರಿಯಾ ಸಹ ॥ ೮೯ ॥

ಸರ್ವಲಕ್ಷಣಲಕ್ಷಿಣ್ಯಾ ಸಮಾಶ್ಲಿಷ್ಟತನುಂ ಶಿವಂ ।
ಏವಂ ಧ್ಯಾತ್ವಾ ಜಪೇನ್ಮಂತ್ರಂ ಸಮಾಹಿತಮನಾಃ ಶುಚಿಃ ॥ ೯೦ ॥

---

೮೬-೮೯. ಆ ಅಷ್ಟೈಶ್ವರ್ಯದಳದ ಕಮಲದಳದ ಮಧ್ಯದಲ್ಲಿ ವಿಷ್ಣುವನ್ನು ಧ್ಯಾನಿಸಬೇಕು. ಆ ವಿಷ್ಣುವು ಲಕ್ಷ್ಮಿಯೊಡನೆ ಕುಳಿತಿರಬೇಕು. ಕೋಟಿ ಶೀತಾಂಶುವಿನಂತೆ ಪ್ರಕಾಶಿಸುತ್ತಿರಬೇಕು. ಶ್ರೀವತ್ಸವೂ ಕೌಸ್ತುಭವೂ ಎದೆಯಲ್ಲಿರಬೇಕು. ಹೊಂಬಣ್ಣದ ಬಟ್ಟೆಯನ್ನು ಧರಿಸಿರಬೇಕು. ನಾನಾ ಆಭರಣಗಳನ್ನು ಧರಿಸಿರಬೇಕು. ನಾಲ್ಕು ಭುಜಗಳಿರಬೇಕು. ಶಂಖಚಕ್ರಗದೆ ಪದ್ಮಗಳನ್ನು ಧರಿಸಿರಬೇಕು. ಪದ್ಮದಂತೆ ಕಣ್ಣುಗಳಿರಬೇಕು. ಎಲ್ಲಾ ಲಕ್ಷಣಗಳಿಂದಲೂ ಕೂಡಿರಬೇಕು. ಚಂದನಗಳನ್ನು ಪೂಸಿಕೊಂಡಿರಬೇಕು. ಹೂವಿನ ಹಾರವನ್ನು ಹಾಕಿಕೊಂಡಿರಬೇಕು. ತುಲಸಿಯ ಕೋಮಲದಳಗಳಿಂದ ಕೂಡಿದ ದೊಡ್ಡ ಮಾಲೆಯನ್ನು ಹಾಕಿಕೊಂಡಿರಬೇಕು. ಕೋಟಿಜನ ಬೆಳಗಿನ ಸೂರ್ಯರಂತಿರಬೇಕು. ದೇವಿಯಾದ ಲಕ್ಷ್ಮಿಯೊಡನೆ ಇರಬೇಕು.

೯೦. ಎಲ್ಲಾ ಲಕ್ಷಣಗಳಿಂದಲೂ ಕೂಡಿದ ಲಕ್ಷ್ಮಿಯಿಂದ ಆಲಂಗಿಸಿರಬೇಕು. ಮಂಗಳಕರನಾಗಿರಬೇಕು. ಈ ರೀತಿಯಾಗಿ ಆ ಸ್ವಾಮಿಯನ್ನು ಧ್ಯಾನಿಸಿ ಏಕಮನಸ್ಸಿನಿಂದ ಮಂತ್ರವನ್ನು ಜಪಿಸಬೇಕು.

ಸಹಸ್ರಂ ಶತವಾರಂ ವಾ ಯಥಾಶಕ್ತಿ ಜಪೇನ್ಮನುಂ ।
ಮನಸೈವಾರ್ಚನಂ ಕೃತ್ವಾ ವಿರಮೇತ್ತತ್ರ ಭಕ್ತಿತಃ ॥ ೯೧ ॥

ತದೀಯಾನರ್ಚಯೇದ್ಭಕ್ತ್ಯಾ ತಸ್ಮಿನ್ಕಾಲೇ ಸಮಾಗತಾನ್ ।
ತರ್ಪಯಿತ್ವಾನ್ನಪಾನಾದ್ಯೈರನುವ್ರಜ್ಯ ವಿಸರ್ಜಯೇತ್ ॥ ೯೨ ॥

ಅರ್ಚಯಿತ್ವಾ ಪಿತೄನ್ ದೇವಾನ್ ತರ್ಪಯೇಚ್ಚ ವಿಧಾನತಃ ।
ಸಂಪೂಜ್ಯಾತಿಥಿಭೃತ್ಯಾಂಶ್ಚ ಭುಂಜೀಯಾತಾಂ ಚ ದಂಪತೀ ॥ ೯೩ ॥

ಯಕ್ಷರಾಕ್ಷಸಭೂತಾನಾಮರ್ಚನಂ ವರ್ಜಯೇತ್ಸದಾ ।
ಯೋ ಮೋಹಾತ್ ಕುರುತೇ ವಿಪ್ರಃ ಸ ಚಂಡಾಲೋ ಭವೇದ್ಧ್ರುವಂ ॥೯೪॥

ಯಕ್ಷಾಣಾಂ ಚ ಪಿಶಾಚಾನಾಂ ಮದ್ಯಮಾಂಸಭುಜಾಂ ತಥಾ ।
ದಿವೌಕಸಾಂ ತು ಭಜನಂ ಸುರಾಪಾನಸಮಂ ಸ್ಮೃತಂ ॥ ೯೫ ॥

---

೯೧. ಸಾವಿರಬಾರಿಯಾಗಲಿ ಅಥವಾ ನೂರುಬಾರಿಯಾಗಲಿ ಕೈಲಾದಷ್ಟು ಮಂತ್ರವನ್ನು ಜಪಿಸಬೇಕು. ಮನಸ್ಸಿನಿಂದಲೇ ಅರ್ಚನೆಯನ್ನು ಭಕ್ತಿಯಿಂದ ಮಾಡಿ ಸುಮ್ಮನಾಗಬೇಕು.

೯೨. ಆ ಕಾಲದಲ್ಲಿ ಬಂದ ವಿಷ್ಣುಭಕ್ತರನ್ನು ಭಕ್ತಿಯಿಂದ ಪೂಜಿಸಬೇಕು. ಅನ್ನಪಾನಗಳಿಂದ ಅವರನ್ನು ತೃಪ್ತಿಪಡಿಸಿ ಉಪಚರಿಸಿ ಕಳುಹಿಸಬೇಕು.

೯೩. ಪಿತೃಗಳನ್ನೂ ದೇವತೆಗಳನ್ನೂ ಪೂಜಿಸಿ ಅವರಿಗೆ ತರ್ಪಣವನ್ನು ಕೊಡಬೇಕು. ಅತಿಥಿಗಳನ್ನೂ ಆಳುಗಳನ್ನೂ ಯೋಗ್ಯತಾನುಸಾರವಾಗಿ ಗೌರವಿಸಿ ಅನಂತರ ತಾವು ದಂಪತಿಗಳು ಊಟಮಾಡಬೇಕು.

೯೪. ಯಕ್ಷ ರಾಕ್ಷಸ ಭೂತರಿಗೆ ಅರ್ಚನೆಯನ್ನು ಯಾವಾಗಲೂ ಮಾಡಬಾರದು. ಯಾವನು ಮಾಡುವನೋ ಅವನು ಚಂಡಾಲನಾಗುವನು.

೯೫. ಯಕ್ಷರು ಪಿಶಾಚಿಗಳು ಮದ್ಯಮಾಂಸಗಳನ್ನು ತಿನ್ನುವವರು. ಇಂತಹ ದೇವತೆಗಳ ಭಜನೆಯು ಸುರಪಾನಕ್ಕೆ ಸಮನಾಗುತ್ತದೆ.

ಬ್ರಹ್ಮರಾಕ್ಷಸವೇತಾಳಯಕ್ಷಭೂತಾರ್ಚನಂ ನೃಣಾಂ ।
ಕುಂಭೀಪಾಕಮಹಾಘೋರನರಕಪ್ರಾಪ್ತಿಸಾಧನಂ ॥ ೯೬ ॥

ಕೋಟಿಜನ್ಮಕೃತಂ ಪುಣ್ಯಂ ಯಜ್ಞದಾನಕ್ರಿಯಾದಿಕಂ ।
ಸದ್ಯಃ ಸರ್ವಂ ಲಯಂ ಯಾತಿ ಯಕ್ಷಭೂತಾದಿಪೂಜನಾತ್ ॥ ೯೭ ॥

ಸ್ತ್ರಿಯೋ ವಾ ಪೌರುಷೋವಾಪಿ ಯಕ್ಷಭೂತಾದಿಕಾರ್ಚಕಃ ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ॥ ೯೮ ॥

ಕೃಮಿರ್ಭೂತ್ವಾಥ ವಿಷ್ಠಾಯಾಂ ಪಿತೃಭಿಸ್ಸಹ ಮಜ್ಜತಿ ।
ಯಕ್ಷಾಣಾಂ ಚ ಪಿಶಾಚಾನಾಂ ತಾಮಸಾನಾಂ ದಿವೌಕಸಾಂ ॥ ೯೯ ॥

ನಿವೇದಿತಾನ್ನಂ ಯೋಽಶ್ನಾತಿ ಪೂಯಶೋಣಿತಭುಗ್ಭವೇತ್ ।
ಯಕ್ಷಾಃ ಭೂತಗಣಾಃ ಚಾನ್ಯಾಃ ಕ್ರೂರಾಃ ವೈ ಬ್ರಹ್ಮರಾಕ್ಷಸಾಃ ॥೧೦೦॥

---

೯೬. ಬ್ರಹ್ಮರಾಕ್ಷಸ, ಬೇತಾಳ, ಯಕ್ಷ, ಭೂತಗಳ ಪೂಜೆಮಾಡುವಿಕೆಯು ಕುಂಭೀಪಾಕವೇ ಮುಂತಾದ ಮಹಾ ಘೋರವಾದ ನರಕಗಳಿಗೆ ಸಾಧನವು.

೯೭. ಯಜ್ಞ, ದಾನಗಳನ್ನು ಮಾಡಿದ ಕೋಟಿಜನ್ಮಗಳ ಪುಣ್ಯವೂ ಈ ಯಕ್ಷಾದಿಗಳ ಪೂಜೆಯಿಂದ ಒಡನೆಯೇ ನಾಶವಾಗುತ್ತದೆ.

೯೮-೧೦೦. ಯಕ್ಷ, ಭೂತ, ಮೊದಲಾದುವುಗಳನ್ನು ಪೂಜಿಸುವ ಹೆಂಗಸಾಗಲಿ ಗಂಡಸಾಗಲಿ ಕೋಟಿಕಲ್ಪಗಳು ಮತ್ತು ಸಾವಿರಕೋಟಿ ಕಲ್ಪಗಳು ಇಷ್ಟರವರೆಗೂ ಮಲದಲ್ಲಿ ಕೃಮಿಯಾಗಿ ಹುಟ್ಟಿ ತನ್ನ ಪಿತೃಗಳೊಡನೆ ಬಿದ್ದಿರುತ್ತಾನೆ. ಯಕ್ಷರು ರಾಕ್ಷಸರು ತಾಮಸರಾದ ದೇವತೆಗಳು ಇವರಿಗೆ ನಿವೇದನ ಮಾಡಿದ ಅನ್ನವನ್ನು ತಿಂದವನು ರಕ್ತ ಕೀವುಗಳನ್ನು ತಿನ್ನುತ್ತಾನೆ. ಯಕ್ಷರು ಭೂತಗಳು ಕ್ರೂರದೇವತೆಗಳು ಬ್ರಹ್ಮರಾಕ್ಷಸಗಳು ಇವನ್ನು ಉದ್ದೇಶ ಮಾಡಿಕೊಂಡು ಯಾವನು ಊಟಮಾಡುತ್ತಾನೆಯೋ ಅವನು ಒಡನೆಯೇ ಚಾಂಡಾಲನಾಗುವನು.

ಉದ್ದಿಶ್ಯ ಭುಂಕ್ತೇ ಯೋ ವಿಪ್ರಃ ಸದ್ಯಃ ಚಾಂಡಾಲ ಏವ ಸಃ ।
ಯಾ ನಾರೀ ಪೂಜಯೇದ್ಯಕ್ಷಾನ್ ಪಿಶಾಚೋರಗರಾಕ್ಷಸಾನ್ ॥ ೧೦೧ ॥

ಸಾ ಯಾತಿ ನರಕಂ ಘೋರಂ ಕಾಲಸೂತ್ರಮಧೋಮುಖೀ ।
ಪತಿನಾ ಸಹ ಕಲ್ಪಾನ್ತೇ ಉಷಿತ್ವಾ ತತ್ರ ದಾರುಣೇ ॥ ೧೦೨ ॥

ಲೀಢ್ವಾ ಮೂತ್ರಪುರೀಷಂ ವೈ ಕೃಚ್ಛ್ರಾತ್ ಸೂಚೀಮುಖೈಸ್ತಥಾ ।
ಕೃಮಿಭಿರ್ಭಕ್ಷ್ಯಮಾಣಾಂಗೀ ಯಾವದಾಭೂತಸಂಪ್ಲವಂ ॥ ೧೦೩ ॥

ಪಶ್ಚಾದ್ಭುವಿ ದಶಾರ್ಹೇಷು ಜಾಯತೇ ಶತಸಂಖ್ಯಯಾ ।
ತಸ್ಮಾದ್ಯಕ್ಷಾದಿಕಾನಾಂ ಚ ದೇವಾನಾಮರ್ಚನಂ ತ್ಯಜೇತ್ ॥ ೧೦೪ ॥

ಸ್ವತಂತ್ರ ಪೂಜನಂ ಯತ್ರ ವೈದಿಕಾನಾಮಪಿ ತ್ಯಜೇತ್ ।
ಅರ್ಚಯಿತ್ವಾ ಜಗದ್ವಂದ್ಯಂ ದೇವಂ ನಾರಾಯಣಂ ಹರಿಂ ॥ ೧೦೫ ॥

---

೧೦೧. ಯಕ್ಷ, ಪಿಶಾಚ, ಉರಗ, ರಾಕ್ಷಸರನ್ನು ಪೂಜಿಸುವ ಹೆಂಗಸು ಕಾಲಸೂತ್ರವೆಂಬ ಘೋರವಾದ ನರಕವನ್ನು ಹೊಂದಿ ತಲೆಕೆಳಕಾಗಿ ನೇತಾಡುತ್ತಾ ಇರುವಳು.

೧೦೨-೧೦೩. ಆಕೆಯು ಕಲ್ಪಾಂತದವರೆಗೂ ದಾರುಣವಾದ ನರಕದಲ್ಲಿ ರುತ್ತ ಮೂತ್ರಪುರೀಷಗಳನ್ನು ತಿನ್ನುತ್ತಾ ಅನಂತರ ಸೂಜಿಯಂತಿರುವ ಮುಖವುಳ್ಳ ಕ್ರಿಮಿಗಳಿಂದ ತಿನ್ನಲ್ಪಡುವವಳಾಗಿ ಪ್ರಳಯಕಾಲದವರೆಗೂ ಇರುತ್ತಾಳೆ.

೧೦೪-೧೦೬. ಆನಂತರ ಭೂಮಿಯಲ್ಲಿ ಬೆಸ್ತರಲ್ಲಿ ಸಾವಿರಗಟ್ಟಲೆಯಲ್ಲಿ ಜನ್ಮವನ್ನು ಹೊಂದುತ್ತಾಳೆ. ಆದ್ದರಿಂದ ಯಕ್ಷಾದಿ ದೇವರ ಪೂಜೆಯನ್ನು ಬಿಡಬೇಕು. ವೈದಿಕಪೂಜೆಯಾದರೂ ಸ್ವತಂತ್ರ ಪೂಜೆಯನ್ನು ಬಿಡಬೇಕು. ಎಂದರೆ ಶಾಸ್ತ್ರದಲ್ಲಿ ಹೇಳಿರುವಂತೆ ಮಾಡಬೇಕೇ ಹೊರತು ತಮ್ಮದೇ ಒಂದು ರೀತಿಯಿಂದ ಸೇರಿಸಿಕೊಂಡು ಮಾಡಬಾರದು. ಜಗದ್ವಂದ್ಯನಾದ ನಾರಾಯಣನನ್ನು

ತದಾವರಣಸಂಸ್ಥಾನಾಂ ದೇವಸ್ಯ ಪರಿತೋಽರ್ಚಯೇತ್ ।
ಹರೇರ್ಭುಕ್ತಾವಶೇಷೇಣ ಬಲಿಂ ತೇಭ್ಯೋ ವಿನಿಕ್ಷಿಪೇತ್ ॥ ೧೦೬ ॥

ಹೋಮಂ ಚೈವ ಪ್ರಕುರ್ವೀತ ತಚ್ಛೇಷೇಣೈವ ವೈಷ್ಣವಃ ।
ಹರೇರ್ನಿವೇದಿತಂ ಸಮ್ಯಕ್ ದೇವೇಭ್ಯೋ ಜುಹುಯಾದ್ಧವಿಃ ॥ ೧೦೭ ॥

ಪಿತೃಭ್ಯಶ್ಚಾಪಿ ತದ್ದದ್ಯಾತ್ ಸರ್ವಂ ಫಲಮವಾಪ್ನುಯಾತ್ ।
ಪ್ರಾಣಿನಾಂ ಪೀಡನಂ ಯತ್ತದ್ವಿದುಷಾಂ ನಿರಯಾಯ ವೈ ॥ ೧೦೮ ॥

ಅದತ್ತಂ ಯಚ್ಚ ಯತ್ಕಿಂಚಿತ್ ಪರಸ್ವಂ ಗೃಹ್ಯತೇ ನರೈಃ ।
ಸ್ತೇಯಂ ತದ್ವಿದ್ಧಿ ಗಿರಿಜೇ ನರಕಸ್ಯೈವ ಕಾರಣಂ ॥ ೧೦೯ ॥

ಲಶುನಂ ಮದ್ಯಪಾನಾದಿ ಮೂಲಕಂ ಗೃಂಜನಂ ತಥಾ ।
ತಿಲಪಿಷ್ಟಂ ತಥಾ ಶಿಗ್ರುಂ ಬಿಲ್ವಂ ಕೋಶಾತಕೀಂ ತಥಾ ॥ ೧೧೦ ॥

---

ಪೂಜಿಸಿ ಅವನ ಆವರಣದಲ್ಲಿ ಇರುವ ದೇವತೆಗಳನ್ನೂ ಪೂಜಿಸಬೇಕು. ಹರಿಗೆ ನಿವೇದನ ಮಾಡಿದುದನ್ನು ಅವರಿಗೆ ಬಲಿಯನ್ನಾಗಿ ಹಾಕಬೇಕು.

೧೦೭. ಆ ಹರಿಯ ನಿವೇದನದ ಶೇಷದಿಂದಲೇ ಮಿಕ್ಕ ದೇವತೆಗಳಿಗೂ ಹವಿಸ್ಸನ್ನು ಮಾಡಬೇಕು. ಅದನ್ನೇ ಅವರಿಗೆ ನಿವೇದನಮಾಡಿ ಹೋಮ ಮಾಡಬೇಕು.

೧೦೮. ಆ ನಿವೇದನವನ್ನೇ ಪಿತೃಗಳಿಗೂ ಅರ್ಪಿಸಬೇಕು. ಆಗ ಸಮಸ್ತ ಫಲವೂ ಬರುತ್ತದೆ. ಪ್ರಾಣಿಗಳನ್ನು ಪೀಡಿಸಿದರೆ ಅದು ನರಕವನ್ನು ಉಂಟು ಮಾಡುತ್ತದೆ.

೧೦೯. ಇತರರು ನಮಗಾಗಿ ಕೊಡದಿದ್ದುದನ್ನು ನಾವು ತೆಗೆದುಕೊಂಡರೆ ಅದು ಕಳ್ಳತನಕ್ಕೆ ಸೇರುತ್ತದೆ. ಅದರಿಂದ ನರಕವು ಬರುತ್ತದೆ.

೧೧೦-೧೧೧. ಈರುಳ್ಳಿ, ಮದ್ಯ, ಮಾಂಸ, ಮೂಲಂಗಿ, ಬೆಳ್ಳುಳ್ಳಿ, ಎಳ್ಳುಹುಡಿ, ನುಗ್ಗೇಕಾಯಿ, ಬಿಲ್ವದಕಾಯಿ, ಹೀರೇಕಾಯಿ, ಸೋರೆಕಾಯಿ,

ಅಲಾಬುಂ ಶ್ವೇತವೃಂತಾಕಂ ಬೀಜಾನಿ ಕನಕಾನಿ ಚ ।
ಏವಮನ್ಯಾನ್ಯಭಕ್ಷ್ಯಾಣಿ ಶಾಸ್ತ್ರದೃಷ್ಟಾನಿ ವೈ ನರಃ ॥ ೧೧೧ ॥

ಖಾದನ್ನರಕಮಾಪ್ನೋತಿ ವಿಚಿತ್ರಮಶಿವಂ ತಥಾ ।
ಅವೈಷ್ಣವಾನಾಂ ಯಚ್ಚಾನ್ನಂ ಪತಿತಾನಾಂ ತಥೈವ ಚ ॥ ೧೧೨ ॥

ಅನರ್ಪಿತಂ ತಥಾ ವಿಷ್ಣೋಃ ಶ್ವಮಾಂಸಸದೃಶಂ ಭವೇತ್ ।
ಯಕ್ಷರಾಕ್ಷಸಭೂತಾನ್ನಂ ಸುರಾಮದ್ಯಂ ಚ ಗೃಂಜನಂ ॥ ೧೧೩ ॥

ಯೋಽಶ್ನಾತಿ ನಿರಯಂ ಯಾತಿ ಪೂಯಶೋಣಿತಭೋಜನಂ ।
ಏತೈಃ ಸಲ್ಲಾಪನಸ್ಪರ್ಶಸಹವಾಸಾದಿಭಿರ್ನರಃ ॥ ೧೧೪ ॥

ತೇಽಪಿ ಯಾಂತ್ಯೇವ ನಿರಯಂ ವಿಣ್ಮೂತ್ರಕ್ರಿಮಿಭೋಜನಂ ।
ಪತಿತಾನಾಂ ಚ ಸಂಸರ್ಗಾತ್ ಪಾಷಂಡಾನಾಂ ತಥೈವ ಚ ॥ ೧೧೫ ॥

---

ಬಿಳಿಯ ಬದನೆಕಾಯಿ, ಉಮ್ಮತ್ತದಬೀಜ ಇವುಗಳನ್ನೂ ಇನ್ನೂ ನಿಷಿದ್ಧವಾದ ಅನೇಕವಾದುವುಗಳನ್ನೂ ತಿನ್ನಕೂಡದೆಂದು ಶಾಸ್ತ್ರದಲ್ಲಿ ಹೇಳಿದೆ.

೧೧೨-೧೧೫. ಒಂದುವೇಳೆ ಅವನ್ನು ತಿಂದರೆ ನರಕವನ್ನು ಹೊಂದುತ್ತಾನೆ. ಮತ್ತು ವಿಚಿತ್ರವಾದ ಕೆಡುಕುಂಟಾಗುತ್ತದೆ. ವೈಷ್ಣವರಲ್ಲದವರ, ಪತಿತರ, ಅನ್ನವನ್ನಾಗಲಿ ವಿಷ್ಣುವಿಗೆ ನಿವೇದನ ಮಾಡದ ಅನ್ನವನ್ನಾಗಲಿ ತಿಂದರೆ ಅದು ನಾಯಿಯ ಮಾಂಸಕ್ಕೆ ಸಮವು. ಯಕ್ಷರು, ರಾಕ್ಷಸರು, ಭೂತಗಳು, ಇವುಗಳಿಗೆ ನಿವೇದನ ಮಾಡಿದ ಅನ್ನವನ್ನೂ ಸುರೆಯನ್ನೂ ಮದ್ಯವನ್ನೂ ಬೆಳ್ಳುಳ್ಳಿಯನ್ನೂ ತಿನ್ನುವವನು ರಕ್ತ ಕೀವುಗಳುಳ್ಳ ನರಕವನ್ನು ಹೊಂದುತ್ತಾನೆ. ಇವನ್ನು ತಿನ್ನುವವರೊಡನೆ ಮಾತನಾಡುವವನೂ, ಅವರನ್ನು ಮುಟ್ಟುವವನೂ ಅವರ ಸಹವಾಸಗಳನ್ನು ಮಾಡುವವನೂ ಕೂಡ ಮಲಮೂತ್ರಗಳಿಂದ ಕೂಡಿದ ನರಕವನ್ನು ಹೊಂದುತ್ತಾನೆ. ಪತಿತರ, ಪಾಷಂಡಿಗಳ ಸಂಸರ್ಗ ಮಾಡಿದರೂ ಇಂತಹ ನರಕವು ಬರುತ್ತದೆ.

ಸರ್ವಯಜ್ಞಸ್ಯ ಭೋಕ್ತಾರಂ ಪುರಾಣಂ ಪುರುಷೋತ್ತಮಂ ।
ಜ್ಞಾತ್ವಾ ಸರ್ವಂ ಪ್ರಕುರ್ವೀತ ನಿತ್ಯನೈಮಿತ್ತಿಕೀಃ ಕ್ರಿಯಾಃ ॥ ೧೧೬ ॥

ಯಕ್ಷರಾಕ್ಷಸಭೂತಾಶ್ಚ ಕೂಶ್ಮಾಂಡಗಣಭೈರವಾಃ ।
ನಾರ್ಚನೀಯಾಃ ಸದಾ ದೇವಿ ಸ್ವರ್ಗಲೋಕಮಭೀಪ್ಸುಭಿಃ ॥ ೧೧೭ ॥

ಯಕ್ಷರಾಕ್ಷಸಭೂತಾನಾಮರ್ಚನಂ ವರ್ಜಯೇದ್ದ್ವಿಜಃ ।
ಪೈಶಾಚತ್ವಮವಾಪ್ನೋತಿ ಕಲ್ಪಕೋಟಿಶತತ್ರಯಂ ॥ ೧೧೮ ॥

ತಸ್ಮಾದ್ರಾಕ್ಷಸಭೂತಾನಾಮರ್ಚನಂ ಪ್ರತಿಷಿದ್ಧ್ಯತೇ ।
ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ॥ ೧೧೯ ॥

ರೌರವಂ ನರಕಂ ಯಾತಿ ಯಕ್ಷಭೂತಗಣಾರ್ಚನಾತ್ ।
ಶಂಖಚಕ್ರಾದಿಭಿಶ್ಚಿಹ್ನೈಃ ಅನ್ಯೈಃ ಪ್ರಿಯತಮೈರ್ಹರೇಃ ॥ ೧೨೦ ॥

---

೧೧೬. ಎಲ್ಲಾ ಯಜ್ಞಗಳಲ್ಲಿಯೂ ಹವಿಸ್ಸನ್ನು ಹೊಂದುವ ಪುರಾಣ ಪುರುಷೋತ್ತಮನಾದ ಆ ವಿಷ್ಣುವನ್ನು ಉದ್ದೇಶಿಸಿ ನಿತ್ಯನೈಮಿತ್ತಿಕ ಕ್ರಿಯೆಗಳನ್ನೆಲ್ಲಾ ಮಾಡಬೇಕು.

೧೧೭. ಯಕ್ಷರು, ರಾಕ್ಷಸರು, ಭೂತಗಳು, ಕೂಶ್ಮಾಂಡಗಳು, ಗಣಗಳು, ಭೈರವರು ಇವರನ್ನು ಪೂಜಿಸಬಾರದು. ಹಾಗೆ ಪೂಜಿಸಿದರೆ ಸ್ವರ್ಗವು ಸಿಕ್ಕುವುದಿಲ್ಲ.

೧೧೮. ಯಕ್ಷ, ರಾಕ್ಷಸ, ಭೂತರ ಪೂಜೆಯನ್ನು ಬ್ರಾಹ್ಮಣನು ಮಾಡಬಾರದು. ಬಿಟ್ಟುಬಿಡಬೇಕು. ಪೂಜಿಸಿದರೆ ಮುನ್ನೂರು ಕೋಟಿ ಕಲ್ಪಗಳವರೆಗೂ ಪಿಶಾಚಿಯಾಗುತ್ತಾನೆ.

೧೧೯–೧೨೧. ಆದ್ದರಿಂದಲೇ ಈ ರಾಕ್ಷಸರು ಭೂತರು ಮುಂತಾದವರ ಪೂಜೆಯನ್ನು ಮಾಡಕೂಡದೆಂದು ಹೇಳಿರುವುದು. ಹಾಗೆ ಮಾಡಿದರೆ ಸಾವಿರದ ನೂರುಕೋಟಿ ಕಲ್ಪಗಳವರೆಗೂ ರೌರವನರಕದಲ್ಲಿ ಬಿದ್ದು ತೊಂದರೆಪಡುತ್ತಾನೆ. ಶಂಖ, ಚಕ್ರ, ಮುಂತಾದ ಹರಿಗೆ ಪ್ರಿಯವಾದ ಚಿಹ್ನೆಗಳನ್ನು ದೇಹದಲ್ಲಿ

ರಹಿತಃ ಸರ್ವಧರ್ಮೇಭ್ಯಃ ಪ್ರಚ್ಯುತೋ ನಿರಯಂ ವ್ರಜೇತ್ |
ಅಗಮ್ಯಾಗಮನಾದ್ಧಿಂಸಾಪರದ್ರವ್ಯಾಪಹಾರಣಾತ್ || ೧೨೧ ||

ಅಭಕ್ಷ್ಯಭಕ್ಷಣಾತ್ಸದ್ಯೋ ನರಕಂ ಸಮವಾಪ್ನುಯಾತ್ |
ಯಸ್ತು ಪಾಣಿಗೃಹೀತೀಂ ಚ ಹಿತ್ವಾನ್ಯಾಂ ಯೋಷಿತಂ ವ್ರಜೇತ್|| ೧೨೨ ||

ಅಗಮ್ಯಾಗಮನಂ ತದ್ಧಿ ಸದ್ಯೋ ನರಕಕಾರಣಂ |
ಪತಿತಾನಾಂ ಚ ಸಂಸರ್ಗಾತ್ ಪಾಷಂಡಾನಾಂ ತಥೈವ ಚ || ೧೨೩ ||

ವಿಕರ್ಮಸ್ಥಾನಾಂ ಚ ತಥಾ ಯಾತ್ಯೇವ ನಿರಯಂ ನರಃ |
ಸಂಸರ್ಗಿಣಾಂ ಚ ಸಂಸರ್ಗಂ ತತ್ಸಂಸರ್ಗಮಪಿ ತ್ಯಜೇತ್ || ೧೨೪ ||

ವೈಷ್ಣವಃ ಕುಲಮೇಕಂ ತು ವರ್ಜಯೇತ್ಪಾಪಸಂಯುತಂ |
ಏಕಾಂತೀ ಸಂತ್ಯಜೇದ್ಗ್ರಾಮಂ ಮಹಾಪಾತಕಮಿಶ್ರಿತಂ || ೧೨೫ ||

---

ಹೊಂದದಿದ್ದರೆ ಅವನು ಎಲ್ಲಾ ಧರ್ಮಗಳಿಂದಲೂ ಬಹಿಷ್ಕೃತನಾಗಿ ನರಕ ಭಾಗಿಯಾಗುತ್ತಾನೆ. ಮನುಷ್ಯನು ರಮಿಸಬಾರದವರಲ್ಲಿ ರಮಿಸಿದರೆ, ಪ್ರಾಣಿ ಹಿಂಸೆಯನ್ನು ಮಾಡಿದರೆ, ಪರರ ದ್ರವ್ಯವನ್ನು ಕದ್ದರೆ, ತಿನ್ನಬಾರದುದನ್ನು ತಿಂದರೆ, ಒಡನೆಯೇ ನರಕಭಾಗಿಯಾಗುತ್ತಾನೆ. ಯಾವನು ಮದುವೆಯಾದ ಹೆಂಡತಿಯನ್ನು ಬಿಟ್ಟು ಬೇರೆ ಹೆಂಗಸರಲ್ಲಿ ರಮಿಸುತ್ತಾನೆಯೋ ಅವನೂ ಯಾವನು ರಮಿಸಲು ನಿಷಿದ್ಧರಾದವರಲ್ಲಿ ರಮಿಸುತ್ತಾನೆಯೋ ಅವನೂ ನರಕವನ್ನು ಹೊಂದುತ್ತಾರೆ.

೧೨೩–೧೨೪. ಪತಿತರ ಸಂಸರ್ಗದಿಂದಲೂ ಪಾಷಂಡಿಗಳ ಸಂಸರ್ಗ ದಿಂದಲೂ ಪಾಪಮಾಡಿದವರ ಸಹವಾಸದಿಂದಲೂ ಬೇರೆ ಕರ್ಮದವರ ಸಂಸರ್ಗದಿಂದಲೂ ನರಕವು ಬರುತ್ತದೆ. ಆ ರೀತಿಯಾದ ಪಾಪಿಗಳ ಸಂಸರ್ಗ ವನ್ನು ಹೊಂದಿರುವವರ ಸಂಸರ್ಗವನ್ನೂ ಬಿಟ್ಟು ಬಿಡಬೇಕು

೧೨೫. ವೈಷ್ಣವನಾದವನು ಪಾಪದಿಂದ ಕೂಡಿದ ಕುಲವನ್ನೇ ಬಿಟ್ಟು ಬಿಡಬೇಕು. ಊರೇ ಮಹಾಪಾತಕವನ್ನು ಮಾಡಿದ್ದರೆ ಅಥವಾ ಸಂಸರ್ಗವನ್ನು ಹೊಂದಿದ್ದರೆ ಅದನ್ನು ಬಿಟ್ಟು ಬಿಡಬೇಕು.

ತಥೈವ ಪರಮೈಕಾಂತೀ ತದ್ದೇಶಮಪಿ ವರ್ಜಯೇತ್ ।
ಸ್ವಕರ್ಮಜ್ಞಾನಭಕ್ತ್ಯಾದಿಸಾಧನಂ ವೈಷ್ಣವಂ ಸ್ಮೃತಂ ॥ ೧೨೬ ॥

ಹರೇರಾಜ್ಞಾನುರೂಪೇಣ ಕರ್ಮಜ್ಞಾನಾದಿ ಯಶ್ಚರೇತ್ ।
ಸ ಏಕಾಂತೀ ಭವೇದ್ವಿಪ್ರೋ ವಾಸುದೇವಪರಾಯಣಃ ॥ ೧೨೭ ॥

ಅಕೃತ್ಯಂ ವೈಷ್ಣವಃ ಪಾಪಂ ಬುದ್ಧ್ಯಾ ಸಮ್ಯಕ್ ಪರಿತ್ಯಜೇತ್ ।
ಏಕಾಂತೀ ಸಂತ್ಯಜೇಚ್ಚಾಪಿ ಸ್ತ್ರಂ ದೂಷಣಾನ್ಮನಸಾಪಿ ಚ ॥ ೧೨೮ ॥

ತಥೈವ ಪರಮೈಕಾಂತೀ ಹೇಯಬುದ್ಧ್ಯಾ ಪರಿತ್ಯಜೇತ್ ।
ನಿತ್ಯಂ ನೈಮಿತ್ತಿಕಂ ಕಾಮ್ಯಂ ಕೃತ್ಯಂ ತು ತ್ರಿವಿಧಂ ಸ್ಮೃತಂ ॥ ೧೨೯ ॥

---

೧೨೬. ಪರಮೈಕಾಂತಿಯಾದವನೂ ಕೂಡ ಆ ಊರನ್ನೇ ಬಿಡಬೇಕು. ಆ ಸ್ಥಳದಲ್ಲಿಯೇ ಇರಬಾರದು. ಕರ್ಮಜ್ಞಾನ, ಭಕ್ತಿ, ಇವೇ ಮುಂತಾದುವುಗಳಿಗೆ ಸಾಧನಗಳೇ ವೈಷ್ಣವನಾಗುವುದಕ್ಕೆ ಕಾರಣಗಳು.

೧೨೭. ಹರಿಯ ಅಪ್ಪಣೆಯ ಮೇರೆಗೆ ಕರ್ಮಗಳನ್ನು ಮಾಡುತ್ತಾ ಜ್ಞಾನಿಯಾಗಿ ಆ ವಾಸುದೇವನಲ್ಲಿಯೇ ನಿರತನಾಗಿದ್ದುಕೊಂಡಿದ್ದರೆ ಅವನೇ ಏಕಾಂತಿ ಎನ್ನಿಸಿಕೊಳ್ಳುವನು.

೧೨೮. ವೈಷ್ಣವನಾದವನು ಪಾಪವನ್ನು ಮಾಡುವುದರಲ್ಲಿ ಆ ಪಾಪ ಕೆಲಸವನ್ನು ಬುದ್ಧಿಯಲ್ಲೂ ಇಟ್ಟುಕೊಳ್ಳಬಾರದು. ಏಕಾಂತಿಯಾದನು ಮನಸ್ಸಿನಿಂದಲೂ ಕೂಡ ಶಾಸ್ತ್ರದೂಷಣೆ ಪರದೂಷಣೆ ಯಾವದೂಷಣೆಯೇ ಆಗಲಿ ಅವನು ಬಿಟ್ಟು ಬಿಡಬೇಕು.

೧೨೯–೧೩೦. ಪರಮೈಕಾಂತಿಯಾದವನು ಅವೆಲ್ಲವನ್ನೂ ನಿಕೃಷ್ಟವೆಂದು ಕಾಣುತ್ತ ಅಸಹ್ಯಬುದ್ಧಿಯಿಂದ ಬಿಟ್ಟು ಬಿಡಬೇಕು. ನಿತ್ಯ, ನೈಮಿತ್ತಿಕ, ಕಾಮ್ಯ ಎಂಬುದಾಗಿ ಕರ್ಮಗಳು ಮೂರು ಬಗೆಯಾಗಿವೆ. ಜ್ಞಾನಗಳೂ ಕೂಡ

ಜ್ಞಾನಂ ತಥೈವ ಲೋಕೇಸ್ಮಿನ್ ಮುನಿಭಿಃ ಸಂಪ್ರಕೀರ್ತಿತಂ |
ಕೃತ್ಯಾಕೃತ್ಯವಿವೇಕಂ ಚ ಪರಲೋಕಸ್ಯ ಚಿಂತನಂ    || ೧೩೦ ||

ತತ್ಪ್ರಾಪ್ತಿಸಾಧನಂ ವಿಷ್ಣೋಃ ಸ್ವರೂಪಜ್ಞಾನ ಮೇವ ಚ |
ಭಕ್ತ್ಯಾನ್ವಿತೋ ಭವೇದ್ಭಕ್ತ್ಯೋ ನವಧಾ ಸಾ ಪ್ರಕೀರ್ತಿತಾ    || ೧೩೧ ||

ಸುದರ್ಶನೋರ್ಧ್ವಪುಂಡ್ರಾದಿಸಂಚಿಹ್ನೈರಂಕನಂ ಶುಭೇ |
ಸದ್ಗುರೋರ್ಮಂತ್ರಪಠನಮರ್ಚನಂ ವಿಧಿನಾ ಹರೇಃ    || ೧೩೨ ||

ಸ್ಮರಣಂ ಕೀರ್ತನಂ ವಿಷ್ಣೋಃ ಸೇವಾ ಚ ಪರಮಾತ್ಮನಃ ।
ಪ್ರಣಾಮಸ್ತಸ್ಯ ಪುರತಃ ತದೀಯಾನಾಂ ಚ ಪೂಜನಂ    || ೧೩೩ ||

ಪ್ರಸಾದತೀರ್ಥಸೇವಾ ಚ ಭಕ್ತಿರ್ನವವಿಧಾ ಸ್ಮೃತಾ |
ಯಸ್ಮಾತ್ ಪ್ರಪದ್ಯತೇ ದೇವಂ ಶರಣಂ ವೈಷ್ಣವೋ ಹರಿಃ    || ೧೩೪ ||

---

ನಿತ್ಯನೈಮಿತ್ತಿಕ ಕಾಮ್ಯವೆಂದು ಮೂರುಬಗೆಯಾಗಿದೆ. ಎಂದು ಮುನಿಗಳು ಹೇಳಿದ್ದಾರೆ. ಭಕ್ತನಾದವನು ಒಳ್ಳೆಯದು ಕೆಟ್ಟದನ್ನು ವಿವೇಚಿಸಿ ನೋಡಬೇಕು. ಪರಲೋಕದ ಚಿಂತೆಯನ್ನು ಮಾಡಬೇಕು. ಪರಲೋಕದ ಪ್ರಾಪ್ತಿಯು ಹೇಗಾಗುವುದೆಂಬುದನ್ನು ಯೋಚಿಸಬೇಕು. ಆ ವಿಷ್ಣುವಿನ ಸ್ವರೂಪವನ್ನು ತಿಳಿದುಕೊಳ್ಳಬೇಕು. ಮತ್ತು ಭಕ್ತಿಯಿಂದ ಕೂಡಿದವನಾಗಿರಬೇಕು. ಆ ಭಕ್ತಿಯೆಂಬುದು ಒಂಭತ್ತು ಬಗೆಯೆಂದು ಹಿಂದೆಯೇ ಹೇಳಿದ್ದೇವೆ. ಆ ಒಂಭತ್ತು ಬಗೆಯ ಭಕ್ತಿಯನ್ನೂ ಮಾಡಬೇಕು.

೧೩೨. ಸುದರ್ಶನದಿಂದ ಗುರುತುಮಾಡಿಸಿಕೊಂಡು ಊರ್ಧ್ವಪುಂಡ್ರವನ್ನು ಧರಿಸುವುದು ಇದು ವಿಷ್ಣುವಿನ ಅಂಕವು. ಗುರುವು ಹೇಳಿದ ಆ ಸ್ವಾಮಿಯ ಮಂತ್ರಗಳನ್ನು ಪಠಿಸುವುದು. ಹರಿಯನ್ನು ಪೂಜಿಸುವುದು.

೧೩೩–೧೩೪. ಸ್ಮರಣೆ, ಕೀರ್ತನೆ (ಭಜನೆ), ಸೇವೆ, ಸ್ವಾಮಿಯ ಎದುರಿಗೆ ನಮಸ್ಕರಿಸುವುದು, ಭಕ್ತರನ್ನೂ ತೀರ್ಥವನ್ನೂ ಪ್ರಸಾದವನ್ನೂ ಸೇವಿಸುವುದು. ಎಂಬದಾಗಿ ಭಕ್ತಿಯು ಒಂಬತ್ತು ಬಗೆಯಾಗಿರುವುದು. ವೈಷ್ಣವನಾದವನು ಹರಿಯನ್ನು ಶರಣುಹೊಂದುವುದರಿಂದ ಅದಕ್ಕೆ ಪ್ರಪತ್ತಿ ಎಂದು ಹೆಸರು ಬರುತ್ತದೆ.

ಪ್ರಪತ್ತಿಃ ಸಾ ತು ವಿಜ್ಞೇಯಾ ತ್ರಿವಿಧಾ ಸಾ ಪ್ರಕೀರ್ತಿತಾ ।
ತಾಮಸೀ ರಾಜಸೀ ಚೈವ ಸಾತ್ವಿಕೀ ತ್ರಿವಿಧಾ ಸ್ಮೃತಾ ॥ ೧೩೫ ॥

ಸಾಪಿ ತ್ರಿಧಾ ಕೃತಾ ಸಿದ್ಧಿಃ ಸಾಮಾನ್ಯಾ ಸರ್ವದೇಹಿನಾಂ ।
ಏತಚ್ಚತುಷ್ಟಯಂ ದೇವಿ ಹೇಯಂ ಸಂತ್ಯಜ್ಯ ವೈಷ್ಣವಃ ॥ ೧೩೬ ॥

ಉಪಾಯಭೂತಂ ಬ್ರಹ್ಮೈವಮವಲಂಬೇತ ವೈಷ್ಣವಃ ।
ಉಪಾಯಭಾವಾತ್ಸಂತ್ಯಜ್ಯ ಕರ್ಮಜ್ಞಾನಾದಿಕಂ ನರಃ ॥ ೧೩೭ ॥

ಕುರ್ವೀತ ಭಗವತ್ಪ್ರೀತ್ಯೈ ಮಹಾಭಾಗವತೋತ್ತಮಃ ।
ತ್ರಿಕಾಲಮರ್ಚಯೇದ್ವಿಷ್ಣುಂ ಭಕ್ತ್ಯಾ ವೈ ಪುರುಷೋತ್ತಮಂ ॥ ೧೩೮ ॥

ನೈಮಿತ್ತಿಕೇ ವಿಶೇಷೇಣ ಪೂಜಯೇದ್ವಿಧಿನಾ ಶುಭೇ ।
ಪ್ರತ್ಯಹಂ ಕಾರ್ತಿಕೇ ಮಾಸಿ ಜಾಜೀಪುಷ್ಪೈಸ್ಸಮರ್ಚಯೇತ್ ॥ ೧೩೯ ॥

---

ಆ ಪ್ರಪತ್ತಿಯು ತಾಮಸೀಪ್ರಪತ್ತಿ, ರಾಜಸೀಪ್ರಪತ್ತಿ, ಸಾತ್ವಿಕೀಪ್ರಪತ್ತಿ, ಎಂದು ಮೂರು ವಿಧವಾಗಿರುವುದು

೧೩೬. ಈ ರೀತಿಯಾಗಿ ಮೂರುಬಗೆಯಾದ ಸಿದ್ಧಿಯು ಎಲ್ಲರಿಗೂ ಸಾಮಾನ್ಯವಾಗಿ ಉಂಟಾಗುವುದು. ಇವುಗಳು ಪರಿಗ್ರಹಿಸುವುದಕ್ಕೆ ಯೋಗ್ಯವಲ್ಲ. ಆದ್ದರಿಂದ ವೈಷ್ಣವನು ಇವನ್ನು ಬಿಡಬೇಕು.

೧೩೭–೧೩೮. ಕಾರಣಭೂತವಾದ ಉಪಾಧಿಗಳಿಂದ ಬ್ರಹ್ಮನನ್ನು ವೈಷ್ಣವನಾದವನು ತಿಳಿದು ಆ ಬ್ರಹ್ಮನನ್ನೇ ಆಶ್ರಯಿಸಬೇಕು. ಕರ್ಮಜ್ಞಾನ ಗಳು ಅವಕ್ಕೆ ಉಪಾಯವಾದುದರಿಂದ ಕರ್ಮಜ್ಞಾನ ಮುಂತಾದುವನ್ನು ಬೇರೆಯ ರೀತಿಯ ಅಭಿಪ್ರಾಯವನ್ನೇ ಬಿಟ್ಟು ಆ ಭಗವಂತನ ಪ್ರೀತಿಗೋಸ್ಕರವೇ ಮಾಡಬೇಕು. ಭಕ್ತನು ಭಕ್ತಿಯಿಂದ ಮೂರುಹೊತ್ತು ವಿಷ್ಣುವನ್ನು ಪೂಜಿಸ ಬೇಕು.

೧೩೯. ನೈಮಿತ್ತಿಕ ಕಾಲಗಳಲ್ಲಿ ವಿಷ್ಣುವನ್ನು ಹೆಚ್ಚಾಗಿ ಪೂಜಿಸಬೇಕು. ಕಾರ್ತಿಕಮಾಸದಲ್ಲಿ ವಿಷ್ಣುವನ್ನು ನಿತ್ಯವೂ ಜಾಜೀಹೂವಿನಿಂದ ಪೂಜಿಸಬೇಕು.

ದದ್ಯಾದಖಂಡಂ ದೀಪಂ ಚ ನಿಯತಾತ್ಮಾ ದೃಢವ್ರತಃ ।
ಬ್ರಾಹ್ಮಣಾನ್ ಭೋಜಯಿತ್ವಾನ್ತೇ ಹರಿಸಾಯುಜ್ಯಮಾಪ್ನುಯಾತ್॥೧೪೦

ಧನುಷ್ಯುಷಸಿ ದೇವೇಶಂ ಮಾಸಮೇಕಂ ನಿರಂತರಂ ।
ಅರ್ಚಯೇದುತ್ಪಲೈರ್ದೇವಿ ಕರವೀರೈಸ್ಸಿತಾಸಿತೈಃ ॥ ೧೪೧ ॥

ಧೂಪದೀಪೈಶ್ಚ ನೈವೇದ್ಯೈರ್ಯಥಾಶಕ್ತಿ ನಿವೇದಯೇತ್ ।
ಸಮಾಪ್ತೌ ಭೋಜಯೇದ್ವಿಪ್ರಾನ್ ಮಹಾಭಾಗವತೋತ್ತಮಾನ್ ॥ ೧೪೨ ॥

ಅಶ್ವಮೇಧಸಹಸ್ರಸ್ಯ ಫಲಮಾಪ್ನೋತ್ಯಸಂಶಯಂ ।
ತಪೋಮಾಸ್ಯುದಿತೇ ಭಾನೌ ಸ್ನಾತ್ವಾ ನದ್ಯಾಂ ವಿಶೇಷತಃ ॥ ೧೪೩ ॥

ಅರ್ಚಯೇನ್ಮಾಧವಂ ಪುಷ್ಪೈರುತ್ಪಲೈಶ್ಚ ಶುಭಾನನೇ ।
ಪಾಯಸಂ ಸಘೃತಂ ದಿವ್ಯಂ ಭಕ್ತ್ಯಾ ತತ್ರ ನಿವೇದಯೇತ್ ॥ ೧೪೪ ॥

---

೧೪೦. ಕಾರ್ತಿಕಮಾಸದಲ್ಲಿ ಆ ತಿಂಗಳೆಲ್ಲವೂ ದೀಪವು ಆರದಂತೆ ಆ ಖಂಡವಾಗಿ ಉರಿಯುತ್ತಿರುವಂತೆ ಇಡಬೇಕು. ಕೊನೆಯಲ್ಲಿ ಬ್ರಾಹ್ಮಣರನ್ನು ಭೋಜನಮಾಡಿಸಬೇಕು. ಹೀಗೆ ಮಾಡಿದರೆ ಹರಿಯ ಸಾಯುಜ್ಯವನ್ನು ಹೊಂದುತ್ತಾನೆ.

೧೪೧-೧೪೨. ಧನುರ್ಮಾಸದಲ್ಲಿ ಉಷಃಕಾಲದಲ್ಲಿ ಆ ವಿಷ್ಣುವನ್ನು ಒಂದು ತಿಂಗಳವರೆಗೂ ಉತ್ಪಲಗಳಿಂದಲೂ ಕಣಿಗಲು ಹೂವುಗಳಿಂದಲೂ ಪೂಜಿಸಿ ಧೂಪ ದೀಪ ನೈವೇದ್ಯಗಳಿಂದಲೂ ಸಂತೋಷಪಡಿಸಬೇಕು. ಆ ತಿಂಗಳು ಪೂರ್ತಿಯಾಗಿ ಪೂಜೆಮಾಡಿ ಕಡೆಗೆ ಯೋಗ್ಯರಾದ ಭಾಗವತರಿಗೆ ಭೋಜನಮಾಡಿಸಬೇಕು.

೧೪೩-೧೪೪. ಹಾಗೆ ಪೂಜಿಸಿ ಅನ್ನಶಾಂತಿಯನ್ನು ಮಾಡಿದರೆ ಸಾವಿರ ಅಶ್ವಮೇಧಗಳ ಫಲವನ್ನು ಹೊಂದುತ್ತಾನೆ. ಸಂಶಯವಿಲ್ಲ. ಮಾಘಮಾಸದಲ್ಲಿ ಸೂರ್ಯೋದಯಕ್ಕೆ ಸರಿಯಾಗಿ ನದಿಯಲ್ಲಿ ಸ್ನಾನಮಾಡಿ ಮಾಧವನನ್ನು ಉತ್ಪಲ (ಕನ್ನೆದೆಲೆ)ಗಳಿಂದ ಪೂಜಿಸಬೇಕು. ತುಪ್ಪಹಾಕಿದ ಪಾಯಸವನ್ನು ಭಕ್ತಿಯಿಂದ ನಿವೇದನಮಾಡಬೇಕು.

ಸ್ನಾತ್ವಾ ಸಂಪೂಜಯೇದ್ವಿಷ್ಣುಂ ಮಾಸಮೇಕಂ ನಿರಂತರಂ ।
ಶರ್ಕರಾಂಬುಯುತಂ ನಿತ್ಯಮುದಪಾನಂ ನಿವೇದಯೇತ್ ॥ ೧೪೫ ॥

ವೈಷ್ಣವಾನ್ ಪೂಜಯೇದ್ಭಕ್ತ್ಯಾ ಮಾಸಾಂತೇ ಶುಭದರ್ಶನೇ ।
ಮಧುಮಾಸೇ ತಥಾ ನಿತ್ಯಂ ವಕುಲೈಶ್ಚಂಪಕೈರಪಿ ॥ ೧೪೬ ॥

ಪೂಜಯೇಜ್ಜಗತಾಮೀಶಂ ಗುಡಾನ್ನಂ ಚ ನಿವೇದಯೇತ್ ।
ಮಾಸಾಂತೇ ವೈಷ್ಣವಾನ್ ವಿಪ್ರಾನ್ ಭೋಜಯೇತ್ಸುಸಮಾಹಿತಃ ॥ ೧೪೭ ॥

ಸಹಸ್ರವಾರ್ಷಿಕೀಂ ಪೂಜಾಂ ಪ್ರತಿ ನಿತ್ಯಮವಾಪ್ನುಯಾತ್ ।
ಮಾಧವಂ ಪೂಜಯೇದ್ದೇವಂ ಶತಪತ್ರೈರ್ಮಹೋತ್ಪಲೈಃ । ॥ ೧೪೮ ॥

ಪೂಜಯಿತ್ವಾ ವಿಧಾನೇನ ದಧ್ಯನ್ನಂ ಫಲಸಂಯುತಂ ।
ಗುಡೋದಕಂ ಚ ಭಕ್ತ್ಯಾ ವೈ ತಸ್ಮೈ ದೇವಿ ನಿವೇದಯೇತ್ ॥ ೧೪೯ ॥

---

೧೪೫. ಆ ಮಾಘಮಾಸ ಪೂರ್ತಿಯಾಗಿ ಸ್ನಾನಮಾಡಿ ಪೂಜೆಮಾಡಿ ನಿತ್ಯವೂ ಪಾನಕವನ್ನು ನಿವೇದನಮಾಡಬೇಕು.

೧೪೬–೧೪೭. ಆ ಮಾಘಮಾಸ ಮುಗಿದಮೇಲೆ ಭಕ್ತಿಯಿಂದ ವೈಷ್ಣವ ಬ್ರಾಹ್ಮಣರಿಗೆ ಭೋಜನಮಾಡಿಸಬೇಕು. ವೈಶಾಖಮಾಸದಲ್ಲಿ ನಿತ್ಯವೂ ಪಗಡೆ ಹೂಗಳಿಂದಲೂ ಸಂಪಗೆಹೂಗಳಿಂದಲೂ ಆ ಸ್ವಾಮಿಯನ್ನು ಪೂಜಿಸಬೇಕು. ಬೆಲ್ಲದನ್ನವನ್ನು ನಿವೇದಿಸಬೇಕು. ಆ ತಿಂಗಳು ಪೂರ್ತಿಯಾದಮೇಲೆ ವೈಷ್ಣವರಿಗೆ ಭೋಜನಮಾಡಿಸಬೇಕು.

೧೪೮. ಹೀಗೆ ಪೂಜಿಸಿದರೆ ಪ್ರತಿನಿತ್ಯವೂ ಸಾವಿರವರ್ಷಗಳ ಪೂಜೆಯ ಫಲವನ್ನು ಹೊಂದುತ್ತಾನೆ. ಆ ಮಾಧವನನ್ನು ಕಮಲಗಳಿಂದಲೂ ಕನ್ನೈದಿಲೆಗಳಿಂದಲೂ ಪೂಜಿಸಬೇಕು.

೧೪೯. ಆಗ ಮೊಸರನ್ನವನ್ನೂ ಹಣ್ಣನ್ನೂ ನಿವೇದನಮಾಡಿ ಪೂಜಿಸಬೇಕು. ಪಾನಕವನ್ನು ಭಕ್ತಿಯಿಂದ ಆ ಸ್ವಾಮಿಗೆ ಆಗ ನಿವೇದಿಸಬೇಕು.

ಲಕ್ಷ್ಮ್ಯಾ ಯುಕ್ತೋ ಜಗನ್ನಾಥಃ ಪ್ರೀತೋ ಭವತಿ ಪಾರ್ವತಿ ।
ಶುಕ್ರೇ ತು ಶುಕ್ಲಕಮಲೈಃ ಪಾಟಲೈಃ ಕುಮುದೋತ್ಪಲೈಃ ॥ ೧೫೦ ॥

ಅರ್ಚಯಿತ್ವಾ ಹೃಷೀಕೇಶಮನ್ನಂ ಚೂತಫಲೈರ್ಯುತಂ ।
ನಿವೇದ್ಯ ಚ ಸುಭಕ್ತ್ಯಾ ವೈ ಗವಾಂ ಕೋಟಿಪ್ರದೋ ಭವೇತ್ ॥ ೧೫೧ ॥

ವೈಷ್ಣವಾನ್ ಭೋಜಯಿತ್ವಾಥ ಸರ್ವಮಾನಂತ್ಯಮಾಪ್ನುಯಾತ್ ।
ಆಷಾಢೇ ದೇವದೇವೇಶಂ ಲಕ್ಷ್ಮೀಭರ್ತಾರಮಚ್ಯುತಂ ॥ ೧೫೨ ॥

ಶ್ರೀಪುಷ್ಪೈರರ್ಚಯೇನ್ನಿತ್ಯಂ ಪಾಯಸಾನ್ನಂ ನಿವೇದಯೇತ್ ।
ಮಾಸಾಂತೇ ಭೋಜಯೇದ್ವಿಪ್ರಾನ್ ಮಹಾಭಾಗವತೋತ್ತಮಾನ್ ॥ ೧೫೩ ॥

ಷಷ್ಟಿವರ್ಷಸಹಸ್ರಸ್ಯ ಪೂಜಾಂ ಪ್ರಾಪ್ನೋತ್ಯಸಂಶಯಃ ।
ನಭೋಮಾಸ್ಯರ್ಚಯೇದ್ವಿಷ್ಣುಂ ಪುನ್ನಾಗೈಃ ಕೇತಕೀದಲೈಃ ॥ ೧೫೪ ॥

---

೧೫೦-೧೫೧. ಹೀಗೆ ಮಾಡಿದರೆ ಲಕ್ಷ್ಮಿಯೊಡಗೂಡಿದ ಆ ಸ್ವಾಮಿಯು ಪ್ರೀತನಾಗುತ್ತಾನೆ. ಜ್ಯೇಷ್ಠಮಾಸದಲ್ಲಿ ಬಿಳಿಯ ಕಮಲಗಳಿಂದಲೂ ಪಾದರಿಯ ಹೂಗಳಿಂದಲೂ ಆ ಸ್ವಾಮಿಯನ್ನು ಪೂಜಿಸಬೇಕು. ಮತ್ತು ಕುಮುದ ಉತ್ಪಲ ಗಳಿಂದಲೂ ಪೂಜಿಸಬೇಕು. ಹೀಗೆ ಪೂಜಿಸಿ ಮಾವಿನಕಾಯಿಯ ಅನ್ನವನ್ನು ಮಾಡಿ ನಿವೇದನ ಮಾಡಬೇಕು. ಹಾಗೆ ಮಾಡಿದರೆ ಕೋಟಿ ಗೋವುಗಳನ್ನು ದಾನಮಾಡಿದ ಫಲವು ಬರುತ್ತದೆ.

೧೫೨-೧೫೩. ಅನಂತರ ವೈಷ್ಣವರಿಗೆ ಸಮಾರಾಧನೆಮಾಡಿಸಿ ಭೋಜನ ಮಾಡಿಸಿದರೆ ಅನಂತವಾದ ಫಲವು ಬರುತ್ತದೆ. ಆಷಾಢಮಾಸದಲ್ಲಿ ದೇವ ದೇವನೂ ಲಕ್ಷ್ಮೀಪತಿಯೂ ಆದ ಆ ಅಚ್ಯುತನನ್ನು ಬಿಲ್ವಪತ್ರೆಯ ಹೂಗಳಿಂದ ಪೂಜಿಸಿ ಪಾಯಸವನ್ನೂ ಅನ್ನವನ್ನೂ ನಿವೇದನ ಮಾಡಬೇಕು. ಪಾಯಸವನ್ನು ಮಾಡಿ ಅದರಲ್ಲಿ ಅನ್ನವನ್ನು ಕಲಸಿ ನಿವೇದನ ಮಾಡಬೇಕು. ಆ ತಿಂಗಳು ಮುಗಿಯುತ್ತಲೂ ಭಾಗವತರಿಗೆ ಭೋಜನಮಾಡಿಸಬೇಕು. ಹಾಗೆ ಮಾಡಿದರೆ ಅರವತ್ತುಸಾವಿರವರ್ಷಗಳ ಪೂಜೆಯ ಫಲವನ್ನು ಹೊಂದುತ್ತಾನೆ. ಸಂಶಯವಿಲ್ಲ

೧೫೪-೧೫೫. ಶ್ರಾವಣಮಾಸದಲ್ಲಿ ಪುನ್ನಾಗ (ಸುರಹೊನ್ನೆ) ಹೂವಿನಿಂದಲೂ ತಾಳೆಯ ಹೂಗಳಿಂದಲೂ ಪೂಜಿಸಬೇಕು. ಕಡಬುಗಳನ್ನು ಮಾಡಿ

ಅರ್ಚಯಿತ್ವಾಚ್ಯುತಂ ಭಕ್ತ್ಯಾ ನ ಭೂಯೋ ಜನ್ಮಭಾಕ್ ಭವೇತ್ |
ದದ್ಯಾದಪೂಪಾನ್ ಭಕ್ತ್ಯಾಥ ಶರ್ಕರಾಘೃತಮಿಶ್ರಿತಾನ್ || ೧೫೫ ||

ಬ್ರಾಹ್ಮಣಾನ್ ಭೋಜಯೇತ್ತದ್ವತ್ ಮಹಾಭಾಗವತೋತ್ತಮಾನ್ |
ನಭಸ್ಯೇಪ್ಯರ್ಚಯೇದಿಶಂ ಕುಂದೈಃ ಕುರವಕೈರಪಿ || ೧೫೬ ||

ಕ್ಷೀರಾನ್ನಂ ಗುಡಸಮ್ಮಿಶ್ರಂ ಭಕ್ತ್ಯಾ ತತ್ರ ನಿವೇದಯೇತ್ |
ಗವಾಂ ಕೋಟಿಪ್ರದಾನಸ್ಯ ಪ್ರತ್ಯಹಂ ಫಲಮಾಪ್ನುಯಾತ್ || ೧೫೭ ||

ನಿಲೋತ್ಪಲೈರಿಷೇ ಮಾಸಿ ಪೂಜಯೇನ್ಮಧುಸೂದನಂ |
ಭಕ್ತ್ಯಾ ನಿವೇದಯೇತ್ತಸ್ಮಿನ್ ಕ್ಷೀರಮಾಪೂಪಮಿಶ್ರಿತಂ || ೧೫೮ ||

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ |
ವೈಷ್ಣವಂ ಲೋಕಮಾಪ್ನೋತಿ ಮುದಿತಃ ಸ್ವಜನೈರ್ವೃತಃ || ೧೫೯ ||

---

ಅದಕ್ಕೆ ಸಕ್ಕರೆಯನ್ನು ಒಳಕ್ಕೆ ತುಂಬಿರಬೇಕು. ತುಪ್ಪದಲ್ಲಿ ಮಾಡಿರಬೇಕು. ಇದಕ್ಕೆ ಖರ್ಜಿಕಾಯಿ ಎಂದು ಹೇಳುತ್ತಾರೆ. ಇದನ್ನು ಬ್ರಾಹ್ಮಣರಿಗೆ ಭಕ್ತಿಯಿಂದ ಕೊಟ್ಟರೆ ಮತ್ತೆ ಜನ್ಮವೆಂಬುದೇ ಬರುವುದಿಲ್ಲ.

೧೫೬–೧೫೭. ಅಂತಹ ಖರ್ಜಿಯಕಾಯಿಗಳನ್ನು ಮಾಡಿ ಭಾಗವತರಾದ ಬ್ರಾಹ್ಮಣರಿಗೆ ಬೋಜನವನ್ನು ಮಾಡಿಸಬೇಕು. ಭಾದ್ರಪದಮಾಸದಲ್ಲಿ ಕೋಲುಮಲ್ಲಿಗೆಯ ಹೂವಿನಿಂದಲೂ ಗೋರಂಟಿಯ ಹೂವಿನಿಂದಲೂ ಆ ವಿಷ್ಣುವನ್ನು ಪೂಜಿಸಬೇಕು. ಹಾಲನ್ನವನ್ನು ಚೆನ್ನಾಗಿಮಾಡಿ ಭಕ್ತಿಯಿಂದ ನಿವೇದಿಸಬೇಕು. ಹೀಗೆ ಮಾಡಿದರೆ ಕೋಟಿ ಗೋದಾನಗಳ ಫಲವನ್ನು ನಿತ್ಯವೂ ಹೊಂದುತ್ತಾನೆ.

೧೫೮. ಅಶ್ವಯುಜ ಮಾಸದಲ್ಲಿ ನೀಲೋತ್ಪಲದಿಂದ ಸ್ವಾಮಿಯನ್ನು ಪೂಜಿಸಬೇಕು. ಹಾಲನ್ನೂ ಅಪೂಪವನ್ನೂ ಭಕ್ತಿಯಿಂದ ನಿವೇದಿಸಬೇಕು.

೧೫೯. ಸಾವಿರದ ಒಂದು ನೂರುಕೋಟಿಕಲ್ಪಗಳವರೆಗೂ ಅವನು ಸಂತೋಷದಿಂದ ತಮ್ಮ ಜನಗಳಿಂದ ಕೂಡಿಕೊಂಡು ವೈಷ್ಣವಲೋಕದಲ್ಲಿ ಸುಖಿಸುತ್ತಾನೆ.

**ಊರ್ಜೇ ಮಾಸಿ ತಥಾ ದೇವಿ ಕೋಮಲೈಸ್ತುಲಸೀದಳೈಃ ।**
**ಪೂಜಯಿತ್ವಾಚ್ಯುತಂ ಭಕ್ತ್ಯಾ ತತ್ಸಾಯುಜ್ಯಮವಾಪ್ನುಯಾತ್ ॥ ೧೬೦ ॥**

**ಕ್ಷೀರಾಜ್ಯಶರ್ಕರೋಪೇತಮಿಷ್ಟಾನ್ನಂ ಪಾಯಸಂ ತಥಾ ।**
**ಅಪೂಪಂ ಚ ಕ್ರಮೇಣೈವ ಭಕ್ತ್ಯಾ ಸಮ್ಯಕ್ ನಿವೇದಯೇತ್ ॥ ೧೬೧ ॥**

**ಅಮಾಯಾಂ ಮಂದವಾರೇ ಚ ವೈಷ್ಣವರ್ಕ್ಷೇ ತಥೈವ ಚ ।**
**ರವಿಸಂಕ್ರಮೇ ವ್ಯತೀಪಾತೇ ಗ್ರಹಣೇ ಚಂದ್ರಸೂರ್ಯಯೋಃ ॥ ೧೬೨ ॥**

**ವಿಶೇಷೇಣಾರ್ಚಯೇದ್ವಿಷ್ಣುಂ ಯಥಾಶಕ್ತಿ ವರಾನನೇ ।**
**ಗುರೋರುತ್ಕ್ರಾಂತಿದಿವಸೇ ಜನ್ಮರ್ಕ್ಷೇಷು ತಥಾ ಹರೇಃ ॥ ೧೬೩ ॥**

**ಇಷ್ಟಿಂ ಚ ವೈಷ್ಣವೀಂ ಕುರ್ಯಾಚ್ಛಕ್ತ್ಯಾ ವೈ ದ್ವಿಜಸತ್ತಮಃ ।**
**ದದ್ಯಾತ್ ಪುಷ್ಪಾಂಜಲಿಂ ತತ್ರ ಪ್ರತ್ಯೃಚಂ ವೇದಸಮ್ಮಿತಂ ॥ ೧೬೪ ॥**

---

೧೬೦. ಕಾರ್ತಿಕಮಾಸದಲ್ಲಿ ಚೆನ್ನಾಗಿರುವ ತುಲಸಿಯ ದಳಗಳಿಂದ ಅಚ್ಯುತನನ್ನು ಪೂಜಿಸಿದರೆ ಆ ಸ್ವಾಮಿಯ ಸಾಯುಜ್ಯವನ್ನು ಹೊಂದುತ್ತಾನೆ.

೧೬೧. ಹಾಲು ತುಪ್ಪ ಸಕ್ಕರೆಗಳಿಂದ ಕೂಡಿದ ಮೃಷ್ಟಾನ್ನವನ್ನೂ ಪಾಯಸವನ್ನೂ ಅಪೂಪಗಳನ್ನೂ ಆ ಸ್ವಾಮಿಗೆ ನಿವೇದನ ಮಾಡಬೇಕು.

೧೬೨–೧೬೪. ಅಮಾವಾಸ್ಯೆ, ಶನಿವಾರ, ವೈಷ್ಣವ ನಕ್ಷತ್ರ, ಸೂರ್ಯನ ಸಂಕ್ರಮಣ, ವ್ಯತೀಪಾತ, ಸೂರ್ಯಚಂದ್ರಗ್ರಹಣಗಳು, ಇಂತಹ ದಿವಸಗಳಲ್ಲಿ ವಿಷ್ಣುವನ್ನು ವಿಶೇಷವಾಗಿ ಪೂಜಿಸಬೇಕು. ಗುರುವು ಒಂದುರಾಶಿಯಿಂದ ಮತ್ತೊಂದಕ್ಕೆ ಹೋಗುವ ದಿನದಲ್ಲಿ ವಿಷ್ಣುವನ್ನು ಪೂಜಿಸಬೇಕು. ಹರಿಯ ಜನ್ಮನಕ್ಷತ್ರವಾದ ರೋಹಿಣಿನಕ್ಷತ್ರದಲ್ಲಿ ವಿಷ್ಣುವನ್ನು ಪೂಜಿಸಬೇಕು. ಇಂತಹ ದಿವಸಗಳಲ್ಲಿ ಶಕ್ತಿಗನುಗುಣವಾಗಿ ವೈಷ್ಣವೇಷ್ಟಿ (ವಿಷ್ಣುವಿನ ಸಂಬಂದವಾದ ಯಾಗ) ಯನ್ನು ಮಾಡಬೇಕು. ಪುರುಷಸೂಕ್ತವನ್ನು ಹೇಳುತ್ತ ಪುಷ್ಪಾಂಜಲಿಯನ್ನು ಒಂದೊಂದು ಋಕ್ಕಿಗೂ ಕೊಡಬೇಕು. ಚರುವನ್ನಾಗಲಿ

**ಪಾರಣಂ ಚಾಪಿ ಕುರ್ವೀತ ಚರುಣಾ ಪಾಯಸೇನ ವಾ ।**
**ವೈಷ್ಣವಾನ್ ಭೋಜಯೇದ್ವಿಪ್ರಾನ್ ಶಕ್ತ್ಯಾ ದದ್ಯಾಚ್ಚ ದಕ್ಷಿಣಾಂ ॥ ೧೬೫ ॥**

**ಕುಲಕೋಟಿಂ ಸಮುದ್ಧೃತ್ಯ ವೈಷ್ಣವಂ ಪದಮಾಪ್ನುಯಾತ್ ।**
**ಸರ್ವವೇದೈರಶಕ್ತಶ್ಚೇದ್ಯಷ್ಟ್ವಾಂ ಭಾಗವತೋತ್ತಮಃ ॥ ೧೬೬ ॥**

**ವೈಷ್ಣವೈರನುವಾಕೈರ್ವಾ ಸಪ್ತರಾತ್ರಿಂ ನಿರಂತರಂ ।**
**ಪುಷ್ಪಾಂಜಲಿಸಹಸ್ರಂ ತು ಹೋಮಂ ಚ ಪ್ರತ್ಯಹಂ ಚರೇತ್ ॥ ೧೬೭ ॥**

**ಪ್ರೀತಯೇ ವಾ ಭಗವತಃ ಪ್ರತಿಶ್ಲೋಕಂ ಯಜೇದ್ಬುಧಃ ।**
**ಅಥಾರ್ಚ್ಯಂ ಮಂತ್ರರತ್ನಂ ಹಿ ಸಪ್ತರಾತ್ರಂ ನಿರಂತರಂ ॥ ೧೬೮ ॥**

**ಅಷ್ಟೋತ್ತರಸಹಸ್ರಂ ತು ಜುಹುಯಾದ್ಧವಿಷಾ ಯಜೇತ್ ।**
**ವಿಶೇಷೇಣಾರ್ಚಯೇದ್ವಿದ್ವಾನ್ ಮಹಾಭಾಗವತೋತ್ತಮಾನ್ ॥ ೧೬೯ ॥**

---

ಪಾಯಸವನ್ನಾಗಲಿ, ಸೇವಿಸಿ ಪಾರಣೆಯನ್ನು ಮಾಡಬೇಕು. ವೈಷ್ಣವರನ್ನು ಭಕ್ತಿಯಿಂದ ಭೋಜನಮಾಡಿಸಬೇಕು. ಅನಂತರ ಶಕ್ತಿಗನುಗುಣವಾಗಿ ದಕ್ಷಿಣೆಯನ್ನು ಕೊಡಬೇಕು.

೧೬೬–೧೬೭. ಹಾಗೆ ಮಾಡಿದರೆ ತನ್ನ ಕುಲಗಳನ್ನೆಲ್ಲಾ ಉದ್ಧಾರಮಾಡಿ ವೈಕುಂಠವನ್ನು ಹೊಂದುತ್ತಾನೆ. ವೇದಗಳನ್ನೆಲ್ಲಾ ಹೇಳಿಕೊಂಡು ಅದರ ಒಂದೊಂದು ಋಕ್ಕಿಗೂ ಹೋಮಮಾಡಲಾರದೆ ಹೋದರೆ ವಿಷ್ಣುವನ್ನು ಹೇಳುವ ಅನುವಾಕಗಳನ್ನು ಹೇಳಿಕೊಂಡು ಹೋಮಮಾಡಬೇಕು. ಹೀಗೆ ಹೇಳುತ್ತ ಏಳುದಿನಗಳು ಎಡೆಬಿಡದೆ ಹೋಮಮಾಡಬೇಕು. ಸಾವಿರಾರುಬಾರಿ ಪುಷ್ಪಾಂಜಲಿಗಳನ್ನು ಅರ್ಪಿಸಬೇಕು. ಪ್ರತಿನಿತ್ಯವೂ ಹೋಮವನ್ನು ಬಿಡದೆ ಮಾಡಬೇಕು.

೧೬೮–೧೬೯. ವೈಷ್ಣವಸಂಬಂಧವಾದ ಶ್ಲೋಕಗಳನ್ನು ಹೇಳುತ್ತ ಒಂದೊಂದು ಶ್ಲೋಕಕ್ಕೂ ಒಂದೊಂದು ಬಾರಿ ಹೋಮಮಾಡಬೇಕು. ಆಮೇಲೆ ವಿಷ್ಣುವಿನ ಮೂಲಮಂತ್ರವನ್ನು ಹೇಳುತ್ತ ಏಳುರಾತ್ರಿಗಳು ನಿತ್ಯವೂ ಸಾವಿರದ ಎಂಟುಬಾರಿ ಹವಿಸ್ಸಿನಿಂದ ಹೋಮಮಾಡಬೇಕು. ಅನಂತರ ಭಾಗವತರನ್ನು ಚೆನ್ನಾಗಿ ಗೌರವಿಸಬೇಕು. ಮತ್ತು ತೃಪ್ತಿಪಡಿಸಬೇಕು.

**ಅಂತೇ ಚಾವಭೃತಂ ಕುರ್ಯಾತ್ ಯಥಾವಿಭವಸಾರತಃ ।**
**ವೈಷ್ಣವೈರನುವಾಕ್ಯೈಶ್ಚ ಕುರ್ಯಾದವಭೃಥಂ ದ್ವಿಜಃ ॥ ೧೭೦ ॥**

**ತತ್ರ ಸ್ನಾತ್ವಾ ವಿಧಾನೇನ ಯಥಾಶಕ್ತಿ ದ್ವಿಜೋತ್ತಮಃ ।**
**ಶುಭೇ ಪಾತ್ರಾಂತರೇ ರಮ್ಯೇ ಪಾದೌ ಪ್ರಕ್ಷಾಳ್ಯ ಭಕ್ತಿತಃ ॥ ೧೭೧ ॥**

**ಅರ್ಚಯೇದ್ಗಂಧಪುಷ್ಪಾದ್ಯೈರ್ವಸ್ತ್ರೈರಾಭರಣಾದಿಭಿಃ ।**
**ತಾಂಬೂಲೇನ ಫಲೈರ್ವಾಪಿ ಯಥಾಶಕ್ತಿ ಸಮರ್ಚಯೇತ್ ॥ ೧೭೨ ॥**

**ಭೋಜಯಿತ್ವಾನ್ನಪಾನಾದ್ಯೈಃ ಪ್ರಣಮ್ಯ ಚ ಪುನಃ ।**
**ಆಸೀಮಾಂತಮನುವ್ರಜ್ಯ ನಮಸ್ಕೃತ್ಯ ವಿಸರ್ಜಯೇತ್ ॥ ೧೭೩ ॥**

**ಪುನಃ ಪ್ರಣಮ್ಯ ಭಕ್ತ್ಯಾಥ ಶನೈಸ್ತತ್ರ ನಿವರ್ತಿತಃ ।**
**ಗೃಹಂ ಪ್ರವಿಶ್ಯ ದೇವೇಶಂ ಪೂಜಯೇತ್ಪ್ರಯತಾತ್ಮವಾನ್ ॥ ೧೭೪ ॥**

---

೧೭೦. ಕೊನೆಯಲ್ಲಿ ಅವಭೃತವನ್ನು ಮಾಡಬೇಕು. ಅವಭೃತವೆಂದರೆ ಮುಕ್ತಾಯ ಸ್ನಾನ. ಆ ಅವಭೃತವನ್ನು ತನ್ನ ಯೋಗ್ಯತೆಯನ್ನು ಅನುಸರಿಸಿ ಮಾಡಬೇಕು.

೧೭೧. ಶಾಸ್ತ್ರದಲ್ಲಿ ಹೇಳಿರುವಂತೆ ಆ ಅವಭೃತದಲ್ಲಿ ಶಕ್ತಿಗನುಗುಣವಾಗಿ ಸ್ನಾನಮಾಡಬೇಕು. ಅನಂತರ ಒಳ್ಳೆಯ ಮತ್ತೊಂದು ಪಾತ್ರೆಯಲ್ಲಿ ಕಾಲುಗಳನ್ನು ತೊಳೆದುಕೊಳ್ಳಬೇಕು.

೧೭೨. ಅನಂತರ ಋತ್ವಿಕ್ಕುಗಳನ್ನು ಹೂವು, ಗಂಧ, ವಸ್ತ್ರ, ಆಭರಣಗಳಿಂದ ಪೂಜಿಸಬೇಕು. ತಾಂಬೂಲವನ್ನು ಸಮರ್ಪಿಸಿ ಫಲಗಳನ್ನು ನಿವೇದನ ಮಾಡಬೇಕು.

೧೭೩. ಅನ್ನಪಾನಗಳಿಂದ ತೃಪ್ತಿಯಾಗುವಂತೆ ಭೋಜನ ಮಾಡಿಸಿ ನಮಸ್ಕರಿಸಿ ತನ್ನ ಗ್ರಾಮದ ಎಲ್ಲೆಯ ಕಳೆಯುವವರಿಗೂ ಅವರನ್ನು ಅನುಸರಿಸಿ ಹೋಗಿ ನಮಸ್ಕರಿಸಿ ಕಳುಹಿಸಬೇಕು.

೧೭೪. ಮತ್ತೆ ನಮಸ್ಕರಿಸಿ ಮೆಲ್ಲಗೆ ಹಿಂದುರುಗಬೇಕು. ಮತ್ತೆ ಮನೆಗೆ ಬಂದು ಸ್ವಾಮಿಯನ್ನು ಪೂಜಿಸಬೇಕು.

ಏವಮಭ್ಯರ್ಚಯೇದ್ವಿಷ್ಣುಂ ಯಾವಜ್ಜೀವಮತಂದ್ರಿತಃ ।
ತದೀಯಾಂಶ್ಚ ವಿಶೇಷೇಣ ಪೂಜಯೇತ್ಸರ್ವದಾ ಶುಭೇ ॥ ೧೭೫॥

ಆರಾಧನಾನಾಂ ಸರ್ವೇಷಾಂ ವಿಷ್ಣೋರಾರಾಧನಂ ಪರಂ ।
ತಸ್ಮಾತ್ಪರತರಂ ದೇವಿ ತದೀಯಾನಾಂ ಸಮರ್ಚನಂ ॥ ೧೭೬ ॥

ಅರ್ಚಯಿತ್ವಾಥ ಗೋವಿಂದಂ ತದೀಯಾನ್ನಾರ್ಚಯೇತ್ಪುನಃ ।
ನ ಸ ಭಾಗವತೋ ಜ್ಞೇಯಃ ಕೇವಲಂ ದಾಂಭಿಕೋ ಹಿ ಸಃ ॥ ೧೭೭ ॥

ತಸ್ಮಾತ್ಸರ್ವಪ್ರಯತ್ನೇನ ವೈಷ್ಣವಾನ್ ಪೂಜಯೇತ್ಸದಾ ।
ಸರ್ವಂ ತರತಿ ದುಃಖೌಘಂ ಮಹಾಭಾಗವತಾರ್ಚನಾತ್ ॥ ೧೭೮ ॥

ಏವಮುಕ್ತಂ ಮಯಾ ದೇವಿ ವಿಷ್ಣೋರಾರಾಧನಂ ಪರಂ ।
ನಿತ್ಯನೈಮಿತ್ತಿಕಂ ಚೈವ ತದೀಯಾನಾಂ ಚ ಪೂಜನಂ ॥ ೧೭೯ ॥

---

೧೭೫. ಈ ರೀತಿಯಾಗಿ ವಿಷ್ಣುವನ್ನೂ ಅವನ ಭಕ್ತರನ್ನೂ ಜೀವವಿರುವವರೆಗೂ ಪೂಜಿಸಬೇಕು ಅವನ ಭಕ್ತರನ್ನು ವಿಶೇಷವಾಗಿ ಭಕ್ತಿಯಿಂದ ಪೂಜಿಸಬೇಕು.

೧೭೬. ಪೂಜೆಗಳೊಳಗೆಲ್ಲಾ ವಿಷ್ಣುವಿನ ಪೂಜೆಯೇ ಉತ್ತಮವಾದುದು. ಈ ವಿಷ್ಣುವಿನ ಅರ್ಚನೆಗಿಂತಲೂ ವಿಷ್ಣುಭಕ್ತರ ಅರ್ಚನೆಯೇ ಉತ್ತಮೋತ್ತಮವಾದುದು. ವೈಕುಂಠವನ್ನು ಕೊಡುತ್ತದೆ.

೧೭೭. ಗೋವಿಂದನ ಪೂಜೆಯನ್ನು ಮಾಡಿದ ಮೇಲೆ ಗೋವಿಂದನ ಭಕ್ತರನ್ನು ಪೂಜಿಸಬಾರದು. ಹಾಗೆ ಪೂಜಿಸಿದರೆ ಅವನು ಭಾಗವತರಲ್ಲಿ ಬೂಟಾಟಿಗೆಯನ್ನು ಮಾಡುವ ಡಾಂಭಿಕನೇ ಸರಿ.

೧೭೮. ಆದ್ದರಿಂದ ಪ್ರಯತ್ನಪಟ್ಟು ಮೊದಲೇ ಯಾವಾಗಲೂ ವೈಷ್ಣವರನ್ನು ಪೂಜಿಸಬೇಕು. ಆ ಭಗವದ್ಭಕ್ತರ ಪೂಜೆಯು ದುಃಖವನ್ನೆಲ್ಲಾ ನಾಶಮಾಡುತ್ತದೆ.

೧೭೯. ಎಲೈ ದೇವಿಯೆ! ಈ ರೀತಿಯಾಗಿ ವಿಷ್ಣುವಿನ ನಿತ್ಯನೈಮಿತ್ತಿಕ ಪೂಜೆಗಳನ್ನೂ ಅವನ ಭಕ್ತರ ಆರಾಧನೆಯನ್ನೂ ಹೇಳಿದ್ದೇನೆ.

**ಪೌರುಷಂ ತಸ್ಯ ಯಾಥಾತ್ಮ್ಯಂ ಫಲಸಾಧನಮೇವ ಚ |**
**ತಸ್ಯಾವಸಥದೇಹಂ ಚ ಕರ್ಮಾದ್ಯಾಪಿ ಚತುಷ್ಟಯಂ**
**ಏವ ಪ್ರೋಕ್ತಂ ಮಯಾ ದೇವಿ ಕಿಮನ್ಯಚ್ಛ್ರೋತುಮಿಚ್ಛಸಿ || ೧೮೦ ||**

**ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ಕೃಷ್ಣ ಚರಿತೇ ವಿಷ್ಣುಪೂಜಾ ವಿಧಾನ ವೈಷ್ಣವಾಚಾರ ಕಥನಂ ನಾಮ ಅಶೀತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ**

---

೧೮೦. ಆ ಸ್ವಾಮಿಯ ಸರಿಯಾದ ಪೌರುಷ, ಫಲವನ್ನು ಹೊಂದುವ ಉಪಾಯ, ಅವನು ಹೊಂದುವ ಮತ್ತು ಇರುವ ದೇಹ, ಅವನ ಕರ್ಮ, ಈ ನಾಲ್ಕನ್ನೂ ಹೇಳಿದ್ದೇನೆ. ಇನ್ನೇನನ್ನು ಕೇಳಬೇಕೆಂದು ಇದ್ದೀಯೆ ? ಕೇಳು. ಹೇಳುತ್ತೇನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ಶ್ರೀ ಕೃಷ್ಣ ಚರಿತ್ರೆಯಲ್ಲಿ ವಿಷ್ಣುಪೂಜಾ ವಿಧಾನ ವೈಷ್ಣವಾಚಾರ ಕಥನವೆಂಬ ಇನ್ನೂರ ಎಂಭತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## ॥ ಏಕಾಶೀತ್ಯಧಿಕದ್ವಿಶತತಮೋಽಧ್ಯಾಯಃ ॥



॥ ವಸಿಷ್ಠ ಉವಾಚ ॥

**ಏವಮುಕ್ತ್ವಾ ತು ಸಾ ದೇವೀ ಪತಿನಾ ಶೂಲಪಾಣಿನಾ ।**
**ಪ್ರಣಿಪತ್ಯ ಮಹಾತ್ಮಾನಮುವಾಚ ಪ್ರಾಂಜಲಿಸ್ತದಾ ॥ ೧ ॥**

॥ ಪಾರ್ವತ್ಯುವಾಚ ॥

**ಸಾಧೂಕ್ತಂ ಹಿ ತ್ವಯಾ ನಾಥ ವೈಷ್ಣವಂ ಧರ್ಮಮುತ್ತಮಂ ।**
**ಗುಹ್ಯಾದ್ಗುಹ್ಯತಮಂ ವಿಷ್ಣೋಃ ಸ್ವರೂಪಂ ಪರಮಾತ್ಮನಃ ॥ ೨ ॥**

**ಧನ್ಯಾಸ್ಮಿ ಕೃತಕೃತ್ಯಾಸ್ಮಿ ಸರ್ವದೇವನಮಸ್ಕೃತ ।**
**ತವ ಪ್ರಸಾದಾದ್ದೇವೇಶಮರ್ಚಯಾಮಿ ಸನಾತನಂ ॥ ೩ ॥**

---

### ಇನ್ನೂರ ಎಂಭತ್ತೊಂದನೆಯ ಅಧ್ಯಾಯವು



೧. ವಸಿಷ್ಠನು ಹೇಳಿದನು–ಶಿವನು ಹೀಗೆಂದು ಹೇಳುತ್ತಲೂ ಪಾರ್ವತಿಯು ಇದನ್ನು ಕೇಳಿ ಅವನಿಗೆ ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದಳು.

೨. ಪಾರ್ವತಿಯು ಹೇಳಿದಳು–ಎಲೈ ನಾಥನೇ! ನೀನು ಬಹು ಗುಟ್ಟಾಗಿರುವ ವೈಷ್ಣವ ಧರ್ಮಗಳೆಲ್ಲವನ್ನೂ ವಿವರಿಸಿದೆ. ಅದರ ಸ್ವರೂಪವೆಲ್ಲವೂ ಚೆನ್ನಾಗಿ ತಿಳಿಯುವಂತೆ ಮಾಡಿದೆ.

೩. ನಾನು ಧನ್ಯಳಾದೆನು. ಕೃತಕೃತ್ಯಳಾದೆನು. ಸರ್ವದೇವ ನಮಸ್ಕೃತನಾದ ಸ್ವಾಮಿಯೆ! ನಿನ್ನ ಅನುಗ್ರಹದಿಂದ ಆ ಮಹಾವಿಷ್ಣುವನ್ನು ಪೂಜಿಸುತ್ತೇನೆ.

॥ ವಸಿಷ್ಠ ಉವಾಚ ॥

ತತಸ್ತದ್ವಚನಂ ಶ್ರುತ್ವಾ ಭವಸ್ತ್ರಿಪುರಘಾತಕಃ ।
ಸಮಾಶ್ಲಿಷ್ಯಾವದದ್ದೇವೀಂ ಪ್ರಹೃಷ್ಟೇನಾಂತರಾತ್ಮನಾ ॥ ೪ ॥

॥ ರುದ್ರ ಉವಾಚ ॥

ಸಾಧು ಸಾಧು ಮಹಾದೇವಿ ಸಾಧು ಸಾಧು ವರಾನನೇ ।
ಅರ್ಚಯಸ್ವ ಹೃಷೀಕೇಶಂ ಲಕ್ಷ್ಮೀಭರ್ತಾರಮಚ್ಯುತಂ ॥ ೫ ॥

ಕೃತಕೃತ್ಯೋಽಸ್ಮ್ಯಹಂ ಭದ್ರೇ ವೈಷ್ಣವ್ಯಾ ಭಾರ್ಯಯಾ ತ್ವಯಾ ।
ಗುರುಣಾ ತವ ಚಾರ್ವಂಗಿ ವಾಮದೇವೇನ ಧೀಮತಾ ॥ ೬ ॥

ಅನುಜ್ಞಾತಾರ್ಚಯಸ್ವೇಶಂ ಪುರಾಣಂ ಪುರುಷೋತ್ತಮಂ ।
ಗುರೂಪದೇಶ ಮಾರ್ಗೇಣ ಪೂಜಯಿತ್ವೈವ ಕೇಶವಂ ।
ಪ್ರಾಪ್ನೋತಿ ವಾಂಛಿತಂ ಸರ್ವಂ ನಾನ್ಯಥಾ ಭೂಧರಾತ್ಮಜೇ ॥ ೭ ॥

---

೪. ವಸಿಷ್ಠನು ಹೇಳಿದನು–ಪಾರ್ವತಿಯ ಈ ಮಾತನ್ನು ಕೇಳಿ ತ್ರಿಪುರಾರಿಯಾದ ಶಿವನು ಆ ದೇವಿಯನ್ನು ಆಲಂಗಿಸಿಕೊಂಡು ಸಂತೋಷದಿಂದ ಮತ್ತೆ ಇಂತೆಂದನು.

೫. ರುದ್ರನು ಹೇಳಿದನು–ಎಲೈ ದೇವಿಯೆ ! ಸಾಧು. ಸಾಧು. ಬಹಳ ಒಳ್ಳೆಯದು. ಬಹಳ ಒಳ್ಳೆಯದು. ಆ ಲಕ್ಷ್ಮೀಪತಿಯನ್ನು ಚೆನ್ನಾಗಿ ಪೂಜಿಸು.

೬–೭. ಎಲೈ ಭದ್ರೆಯೆ ! ಮಂಗಳಕರಳಾದ ವಿಷ್ಣು ಭಕ್ತೆಯಾದ ನೀನು ನನಗೆ ಹೆಂಡತಿಯಾಗಿರುವುದರಿಂದ ನಾನು ಧನ್ಯನಾದೆನು. ಎಲೈ ಪಾರ್ವತಿಯೆ ! ನಿನ್ನ ಗುರುವಾದ ವಾಮದೇವನ ಅನುಜ್ಞೆಯನ್ನು ತೆಗೆದುಕೊಂಡು ಆ ಪುರುಷೋತ್ತಮನನ್ನು ಪೂಜಿಸು. ಗುರುವು ಹೇಳಿದ ರೀತಿಯಲ್ಲಿ ಆ ಕೇಶವನನ್ನು ಪೂಜಿಸಿದರೆ ನಿನ್ನ ಇಷ್ಟಾರ್ಥಗಳು ಕೈಗೂಡುವುವೇ ಹೊರತು ಇಲ್ಲದಿದ್ದರೆ ಇಲ್ಲವು.

|| ವಸಿಷ್ಠ ಉವಾಚ ||

ಏವಮುಕ್ತ್ವಾ ತದಾ ದೇವೀ ವಾಮದೇವಾನ್ತಿಕಂ ನೃಪ |
ಜಗಾಮ ಸಹಸಾ ಹೃಷ್ಟಾ ವಿಷ್ಣುಪೂಜನಲಾಲಸಾ || ೮ ||

ಸಮೇತ್ಯ ತಂ ಗುರುಂ ದೇವೀ ಪೂಜಯಿತ್ವಾ ಪ್ರಣಮ್ಯ ಚ |
ವಿನತಾ ಪ್ರಾಂಜಲಿರ್ಭೂತ್ವಾ ಉವಾಚ ಮುನಿಸತ್ತಮಂ || ೯ ||

|| ಪಾರ್ವತ್ಯುವಾಚ ||

ಭಗವನ್ ತ್ವತ್ಪ್ರಸಾದೇನ ಸಮ್ಯಗಾರಾಧನಂ ಹರೇಃ |
ಕರಿಷ್ಯಾಮಿ ದ್ವಿಜಶ್ರೇಷ್ಠ ತ್ವಮನುಜ್ಞಾತುಮರ್ಹಸಿ || ೧೦ ||

|| ವಸಿಷ್ಠ ಉವಾಚ ||

ಇತ್ಯುಕ್ತಸ್ತು ತಯಾ ದೇವ್ಯಾ ವಾಮದೇವೋ ಮಹಾಮುನಿಃ |
ತಸ್ಯೈ ಮಂತ್ರವರಶ್ರೇಷ್ಠಂ ದದೌ ಸ ವಿಧಿನಾ ಗುರುಃ || ೧೧ ||

---

೮. ವಸಿಷ್ಠನು ಹೇಳಿದನು–ಶಿವನು ಪಾರ್ವತಿಯನ್ನು ಕುರಿತು ಹೀಗೆ ಹೇಳುತ್ತಲೂ ಆಕೆಯು ಒಡನೆಯೇ ವಿಷ್ಣುವನ್ನು ಪೂಜಿಸಬೇಕೆಂಬ ಆಸೆಯಿಂದ ವಾಮದೇವನ ಬಳಿಗೆ ಹೋದಳು.

೯. ಆ ಪಾರ್ವತಿಯು ಗುರುವಾದ ವಾಮದೇವನ ಬಳಿಗೆ ಹೋಗಿ ಅವನಿಗೆ ನಮಸ್ಕರಿಸಿ ಕೈಮುಗಿದುಕೊಂಡು ವಿನಯದಿಂದ ಇಂತೆಂದಳು.

೧೦. ಪಾರ್ವತಿಯು ಹೇಳಿದಳು-ಎಲೈ ಪೂಜ್ಯನೆ ! ನಿನ್ನ ಅನುಗ್ರಹದಿಂದ ಹರಿಯನ್ನು ಪೂಜಿಸಬೇಕೆಂದು ಇದ್ದೇನೆ. ನನಗೆ ಅನುಜ್ಞೆಯನ್ನು ಕೊಡು.

೧೧. ವಸಿಷ್ಠನು ಹೇಳಿದನು–ಆ ದೇವಿಯು ವಾಮದೇವನನ್ನು ಹೀಗೆಂದು ಕೇಳಲು ಆ ಗುರುವು ಆ ಪಾರ್ವತಿಗೆ ಕ್ರಮವಾಗಿ ಮಂತ್ರವನ್ನು ಉಪದೇಶಿಸಿದನು.

ನಾಮ್ನಾಂ ಸಹಸ್ರಂ ವಿಷ್ಣೋಶ್ಚ ಪ್ರೋಕ್ತವಾನ್ ಮುನಿಸತ್ತಮಃ ।
ನಿವೇದಯಿತ್ವಾ ಪೂಜಾಯಾ ವಿಧಾನಮಪಿ ದೇಶಿಕಃ
ಉವಾಚ ಪರಮಪ್ರೀತ್ಯಾ ಪಾರ್ವತೀಂ ಶಂಸಿತವ್ರತಾಂ　　|| ೧೨ ||

|| ವಾಮದೇವ ಉವಾಚ ||

ಅರ್ಚಯಿತ್ವಾ ಹೃಷೀಕೇಶಂ ಪ್ರಾತರ್ನಿತ್ಯಂ ವರಾನನೇ ।
ಸಹಸ್ರನಾಮಪಠನಂ ಕುರುಷ್ವ ತದನಂತರಂ　　|| ೧೩ ||

|| ವಸಿಷ್ಠ ಉವಾಚ ||

ಇತ್ಯುಕ್ತಾ ತೇನ ಗುರುಣಾ ಪ್ರಹೃಷ್ಟೇನಾಂತರಾತ್ಮನಾ ।
ಪೂಜಯಿತ್ವಾ ನಮಸ್ಕೃತ್ಯ ಪುನರಾಯಾತ್ ಸ್ವಮಾಲಯಂ　　|| ೧೪ ||

ಶಿಕ್ಷಿತಾ ಗುರುಣಾ ತೇನ ವಾಮದೇವೇನ ಪಾರ್ವತೀ ।
ತತಃ ಕತಿಪಯಾಹಸ್ಸು ದ್ವಾದಶ್ಯಾಂ ವೃಷಭಧ್ವಜಃ　　|| ೧೫ ||

---

೧೨. ಆ ವಿಷ್ಣುವಿನ ಸಹಸ್ರನಾಮಗಳನ್ನು ಪಾರ್ವತಿಗೆ ಹೇಳಿದನು. ಮತ್ತು ಆ ಪೂಜೆಯ ರೀತಿಯೆಲ್ಲವನ್ನೂ ಉಪದೇಶಿಸಿದನು. ಅನಂತರ ವ್ರತದಲ್ಲಿ ಆಸಕ್ತಳಾದ ಆ ಪಾರ್ವತಿಯನ್ನು ಕುರಿತು ಇಂತೆಂದನು.

೧೩. ವಾಮದೇವನು ಹೇಳಿದನು–ಎಲೈ ಪಾರ್ವತಿಯೆ ! ಬೆಳಗಿನ ಹೊತ್ತಿನಲ್ಲಿ ಪ್ರತಿದಿನವೂ ವಿಷ್ಣುವನ್ನು ಪೂಜಿಸಿ ಅನಂತರ ಸಹಸ್ರನಾಮಗಳನ್ನು ಹೇಳು.

೧೪. ವಸಿಷ್ಠನು ಹೇಳಿದನು–ಆ ಗುರುವು ಹೀಗೆಂದು ಹೇಳುತ್ತಲೂ ಸಂತೋಷದಿಂದ ಆ ಗುರುವನ್ನು ಪೂಜಿಸಿ ನಮಸ್ಕರಿಸಿ ಮತ್ತೆ ತನ್ನ ಮನೆಗೆ ಬಂದಳು.

೧೫-೧೬. ವಾಮದೇವನು ಈ ರೀತಿಯಾಗಿ ಪೂಜಾವಿಧಾನವನ್ನು ಉಪದೇಶಿಸಿದಮೇಲೆ ಒಂದುದಿನ ದ್ವಾದಶಿಯು ಬರಲು ಶಂಕರನು ರಮ್ಯವಾದ

ಕೈಲಾಸಶಿಖರೇ ರಮ್ಯೇ ವಿಷ್ಣುಮಾರಾಧ್ಯ ಶಂಕರಃ ।
ಉಪವಿಷ್ಟಸ್ತತೋ ಭೋಕ್ತುಂ ಪಾರ್ವತೀಂ ಶಂಕರೋಽಬ್ರವೀತ್ ॥ ೧೬ ॥

॥ ಶಂಕರ ಉವಾಚ ॥

ಪಾರ್ವತ್ಯೇಹಿ ಮಯಾ ಸಾರ್ಧಂ ಭೋಕ್ತುಂ ಭುವನವಂದಿತೇ ॥ ೧೭ ॥

॥ ವಸಿಷ್ಠ ಉವಾಚ ॥

ತಮಾಹ ಪಾರ್ವತೀ ದೇವೀ ಜಪ್ತ್ವಾ ನಾಮಸಹಸ್ರಕಂ ।
ತತೋ ಭೋಕ್ಷ್ಯಾಮ್ಯಹಂ ದೇವ ಭುಜ್ಯತಾಂ ಭವತಾ ಪ್ರಭೋ ॥ ೧೮ ॥

॥ ವಸಿಷ್ಠ ಉವಾಚ ॥

ತತಸ್ತಾಂ ಪಾರ್ವತೀಂ ಪ್ರಾಹ ಪ್ರಹಸನ್ ಪರಮೇಶ್ವರಃ ॥ ೧೯ ॥

॥ ಶಂಕರ ಉವಾಚ ॥

ಧನ್ಯಾಸಿ ಕೃತಪುಣ್ಯಾಸಿ ವಿಷ್ಣುಭಕ್ತಾಸಿ ಪಾರ್ವತಿ ।
ದುರ್ಲಭಾ ವೈಷ್ಣವೀಭಕ್ತಿಃ ಭಾಗಧೇಯಂ ವಿನೇಶ್ವರೀ ॥ ೨೦ ॥

---

ಕೈಲಾಸಪರ್ವತದಲ್ಲಿ ಶ್ರೀವಿಷ್ಣುವನ್ನು ಪೂಜಿಸಿ ಊಟಕ್ಕೆ ಕುಳಿತುಕೊಂಡನು. ಆಗ ಪಾರ್ವತಿಯನ್ನು ಕುರಿತು ಇಂತೆಂದನು.

೧೭. ಶಂಕರನು ಹೇಳಿದನು–ಎಲೈ ಪಾರ್ವತಿಯೆ ! ಭುವನವಂದಿತೆಯೆ ! ನನ್ನೊಡನೆ ನೀನು ಊಟಮಾಡು. ಬಾ.

೧೮. ವಸಿಷ್ಠನು ಹೇಳಿದನು–ಆಗ ಪಾರ್ವತಿಯು ಎಲೈ ಸ್ವಾಮಿಯೆ ! ನಾನು ಸಹಸ್ರನಾಮವನ್ನು ಹೇಳಿ ಆಮೇಲೆ ಊಟಮಾಡುತ್ತೇನೆ. ನೀನು ಊಟಮಾಡು ಎಂದಳು.

೧೯. ವಸಿಷ್ಠನು ಹೇಳಿದನು–ಆಗ ಪರಮೇಶ್ವರನು ನಗುತ್ತಾ ಪಾರ್ವತಿಯನ್ನು ಕುರಿತು ಇಂತೆಂದನು.

೨೦. ಶಂಕರನು ಹೇಳಿದನು–ಎಲೈ ಪಾರ್ವತಿಯೆ ! ನೀನೇ ಧನ್ಯಳು. ಪುಣ್ಯವಂತಳು. ವಿಷ್ಣುಭಕ್ತಳಾಗಿದ್ದೀಯೆ. ಅದೃಷ್ಟವಿಲ್ಲದಿದ್ದರೆ ವಿಷ್ಣುವಿನಲ್ಲಿ ಭಕ್ತಿಯುಂಟಾಗುವುದಿಲ್ಲ.

ರಾಮ ರಾಮೇತಿ ರಾಮೇತಿ ರಮೇ ರಾಮೇ ಮನೋರಮೇ ।
ಸಹಸ್ರನಾಮ ತತ್ತುಲ್ಯಂ ರಾಮನಾಮ ವರಾನನೇ ॥ ೨೧ ॥

ರಕಾರಾದೀನಿ ನಾಮಾನಿ ಶೃಣ್ವತೋ ಮಮ ಪಾರ್ವತಿ ।
ಮನಃ ಪ್ರಸನ್ನತಾಂ ಯಾತಿ ರಾಮಾನಾಮಾಭಿಶಂಕಯಾ
ರಾಮೇತ್ಯುಕ್ತ್ವಾ ಮಹಾದೇವಿ ಭುಂಕ್ಷ್ವ ಸಾರ್ಧಂ ಮಯಾಽಧುನಾ ॥ ೨೨ ॥

॥ ವಸಿಷ್ಠ ಉವಾಚ ॥

ತತೋ ರಾಮೇತಿ ನಾಮೋಕ್ತ್ವಾ ಸಹಾಭುಂಕ್ತಾಥ ಪಾರ್ವತೀ ।
ತತೋ ಭುಕ್ತ್ವಾ ಮಹಾದೇವೀ ಶಂಭುನಾ ಸಹ ಸಂಸ್ಥಿತಾ
ಪಪ್ರಚ್ಛ ತಂ ಮಹಾದೇವಂ ಪ್ರೀತಿಪ್ರವಣಮಾನಸಾ ॥ ೨೩ ॥

---

೨೧. ಎಲೈ ಪಾರ್ವತಿಯೆ ! ರಾಮ, ರಾಮ, ಎಂಬುದಾಗಿ ಆ ಮನೋಹರವಾದ ರಾಮಮಂತ್ರದಲ್ಲಿ ನಾನು ರಮಿಸುತ್ತೇನೆ ಆ ರಾಮ ಎಂಬ ನಾಮವು ಈ ಸಹಸ್ರನಾಮಗಳಿಗೆ ಸಮವಾಗಿರುತ್ತದೆ.

೨೨. ಎಲೈ ಪಾರ್ವತಿಯೆ ! ರಕಾರವೇ ಆದಿಯಾಗಿರುವ ನಾಮಗಳನ್ನು ಕೇಳಿದರೆ ನನಗೆ ಇದು ರಾಮನವೆಂದೆಂಬ ಸಂದೇಹದಿಂದ ಮನಸ್ಸು ಹರ್ಷವಾಗುತ್ತದೆ. ನೀನು ಈಗ ಆ ಸಹಸ್ರನಾಮಗಳಿಗೆ ಸಮವಾದ ರಾಮ ಎಂಬ ನಾಮವನ್ನು ಹೇಳಿ ನನ್ನೊಡನೆ ಊಟಮಾಡು.

೨೩. ವಸಿಷ್ಠನು ಹೇಳಿದನು–ಆಗ ಪಾರ್ವತಿಯು ರಾಮ ಎಂಬ ನಾಮವನ್ನು ಹೇಳಿ ಶಂಭುವಿನ ಜೊತೆಯಲ್ಲಿ ಊಟಕ್ಕೆ ಕುಳಿತುಕೊಂಡಳು. ಶಂಭುವಿನ ಜೊತೆಯಲ್ಲಿ ಕುಳಿತುಕೊಂಡು ಊಟಮಾಡುತ್ತಾ ಪ್ರೀತಿಯಿಂದ ಅತನನ್ನು ಕುರಿತು ಇಂತೆಂದಳು.

॥ ಪಾರ್ವತ್ಯುವಾಚ ॥

ಸಹಸ್ರನಾಮಭಿಸ್ತುಲ್ಯಂ ರಾಮನಾಮ ತ್ವಯೋದಿತಂ ।
ತಸ್ಯಾಪರಾಣಿ ನಾಮಾನಿ ಸಂತಿ ಚೇದ್ರಾವಣದ್ವಿಷಃ
ಕಥ್ಯತಾಂ ಮಮ ದೇವೇಶ ತತ್ರ ಮೇ ಭಕ್ತಿರುತ್ಥಿತಾ ॥ ೨೪ ॥

॥ ಶ್ರೀ ಮಹಾದೇವ ಉವಾಚ ॥

ಶೃಣು ನಾಮಾನಿ ವಕ್ಷ್ಯಾಮಿ ರಾಮಚಂದ್ರಸ್ಯ ಪಾರ್ವತಿ ।
ಲೌಕಿಕಾಃ ವೈದಿಕಾಃ ಶಬ್ದಾಃ ಯೇ ಕೇಚಿತ್ ಸಂತಿ ಪಾರ್ವತಿ ॥ ೨೫ ॥

ನಾಮಾನಿ ರಾಮಚಂದ್ರಸ್ಯ ಸಹಸ್ರಂ ತೇಷು ಚಾಧಿಕಂ ।
ತೇಷು ಚಾತ್ಯಂತಮುಖ್ಯಂ ಹಿ ನಾಮ್ನಾಮಷ್ಟೋತ್ತರಂ ಶತಂ ॥ ೨೬ ॥

ವಿಷ್ಣೋರೇಕೈಕನಾಮ್ನೈವ ಸರ್ವವೇದಾಧಿಕಂ ಮತಂ ।
ತಾದೃಙ್ನಾಮ ಸಹಸ್ರಾಣಿ ರಾಮನಾಮ ಸಮಂ ಮತಂ ॥ ೨೭ ॥

---

೨೪. ಪಾರ್ವತಿಯು ಹೇಳಿದಳು–ಎಲೈ ಶಿವನೆ ! ರಾಮ ಎಂಬ ನಾಮವು ಸಹಸ್ರನಾಮಗಳಿಗೆ ಸಮವಾದುದು. ಎಂದು ನೀನು ಹೇಳಿದೆ. ಆ ರಾವಣಾಂತಕನಾದ ರಾಮನ ನಾಮಗಳು ಇನ್ನೂ ಅನೇಕವಾಗಿವೆಯಲ್ಲ ! ಅವುಗಳಲ್ಲಿ ಈ ರಾಮನಾಮದಂತೆ ಉತ್ತಮವಾದುದು ಇದ್ದರೆ ಅದನ್ನು ಹೇಳು. ಅದರಲ್ಲಿ ನನಗೆ ಭಕ್ತಿಯು ಹುಟ್ಟಿದೆ.

೨೫-೨೬. ಶ್ರೀಮಹಾದೇವನು ಹೇಳಿದನು–ಎಲೈ ಪಾರ್ವತಿಯೆ ! ರಾಮಚಂದ್ರನ ನಾಮಗಳನ್ನು ಹೇಳುತ್ತೇನೆ. ಕೇಳು. ಲೋಕದಲ್ಲಿ ಲೌಕಿಕ ವೈದಿಕ ಶಬ್ದಗಳು ಎಷ್ಟಿವೆಯೋ ಅವುಗಳಲ್ಲೆಲ್ಲಾ ರಾಮ ಸಹಸ್ರನಾಮವು ಶ್ರೇಷ್ಠವಾದುದು. ಆ ಸಹಸ್ರನಾಮದಲ್ಲಿಯೂ ರಾಮಾಷ್ಟೋತ್ತರವು ಬಹು ಮುಖ್ಯವಾದುದು.

೨೭. ವಿಷ್ಣುವಿನ ಒಂದೊಂದು ನಾಮವೂ ಎಲ್ಲಾ ವೇದಗಳಿಗಿಂತಲೂ ಹೆಚ್ಚಿನವು. ಅಂತಹ ಸಾವಿರ ನಾಮಗಳು ರಾಮ ಎಂಬ ಒಂದು ನಾಮಕ್ಕೆ ಸಮವು.

ಜಪತಃ ಸರ್ವಮಂತ್ರಾಂಶ್ಚ ಸರ್ವವೇದಾಂಶ್ಚ ಪಾರ್ವತಿ ।
ತಸ್ಮಾತ್ ಕೋಟಿಗುಣಂ ಪುಣ್ಯಂ ರಾಮನಾಮ್ನೈವ ಲಭ್ಯತೇ ॥ ೨೮ ॥

ನಾಮಾನಿ ಶೃಣು ರಾಮಸ್ಯ ಮುಖ್ಯಾನಿ ಶುಭದರ್ಶನೇ ।
ಋಷಿಭಿಃ ಪರಿಗೀತಾನಿ ತಾನಿ ವಕ್ಷ್ಯಾಮಿ ತೇ ಪ್ರಿಯೇ ॥ ೨೯ ॥

ಓಂ ಶ್ರೀರಾಮೋ ರಾಮಚಂದ್ರಶ್ಚ ರಾಮಭದ್ರಶ್ಚ ಶಾಶ್ವತಃ ।
ರಾಜೀವಲೋಚನಃ ಶ್ರೀಮಾನ್ ರಾಜೇಂದ್ರೋ ರಘುಪುಂಗವಃ ॥ ೩೦ ॥

ಜಾನಕೀವಲ್ಲಭೋ ಜೈತ್ರೋ ಜಿತಾಮಿತ್ರೋ ಜನಾರ್ದನಃ ।
ವಿಶ್ವಾಮಿತ್ರಪ್ರಿಯೋ ದಾನ್ತಃ ಶರಣ್ಯತ್ರಾಣತತ್ಪರಃ ॥ ೩೧ ॥

---

೨೮. ಎಲ್ಲಾ ಮಂತ್ರಗಳನ್ನು ಜಪಿಸಿದರೂ ಎಲ್ಲಾ ವೇದಗಳನ್ನು ಹೇಳಿದರೂ ಯಾವ ಪುಣ್ಯವು ಬರುತ್ತದೆಯೋ ಅದರ ಕೋಟಿಯಷ್ಟು ಹೆಚ್ಚು ಪುಣ್ಯವು ಈ ರಾಮನಾಮದ ಜಪದಿಂದ ಬರುತ್ತದೆ.

೨೯. ಎಲೈ ಪಾರ್ವತಿಯೆ ! ಆ ಶ್ರೀರಾಮನ ಮುಖ್ಯವಾದ ನಾಮಗಳನ್ನು ಕೇಳು. ಅವೆಲ್ಲವನ್ನೂ ಋಷಿಗಳು ಹೇಳಿದ್ದಾರೆ. ಅದನ್ನು ನಿನಗೆ ಹೇಳುತ್ತೇನೆ.

೩೦. ಯೋಗಿಗಳು ಇವನಲ್ಲಿ ರಮಿಸುತ್ತಾರೆ. ಚಂದ್ರನಂತೆ ಈ ರಾಮನು ಆಹ್ಲಾದಕರನು. ಮಂಗಳಕರನಾದ ರಾಮನು ಯಾವಾಗಲೂ ಇರುವವನು. ಕಮಲದಂತೆ ಕಣ್ಣುಳ್ಳವನು ಲಕ್ಷ್ಮಿಯೊಡಗೂಡಿದವನು ರಾಜರಿಗೆ ಇಂದ್ರನು. (ರಾಜರಲ್ಲಿ ಶ್ರೇಷ್ಠನು) ರಘುಗಳಲ್ಲಿ ಶ್ರೇಷ್ಠನು.

೩೧–೩೨. ಜನಕನ ಮಗಳಿಗೆ ಗಂಡನು. ಜಯವೇ ಸ್ವಭಾವವಾಗಿಯು ಳ್ಳವನು. ಶತ್ರುಗಳನ್ನು ಜಯಿಸಿದವನು. ಜನಗಳ ಪಾಪ ನಾಶಕನು ವಿಶ್ವಾ ಮಿತ್ರನಿಗೆ ಪ್ರೀತಿಪಾತ್ರನು. ಇಂದ್ರಿಯನಿಗ್ರಹವುಳ್ಳವನು. ಶರಣಾಗತರನ್ನು ಕಾಪಾಡುವುದರಲ್ಲಿ ಆಸಕ್ತನು. ವಾಲಿಯನ್ನು ಕೊಂದವನು. ಮಾತನ್ನು

ವಾಲಿಪ್ರಮಥನೋ ವಾಗ್ಮೀ ಸತ್ಯವಾಕ್ ಸತ್ಯವಿಕ್ರಮಃ |
ಸತ್ಯವ್ರತೋ ವ್ರತಫಲಃ ಸದಾ ಹನುಮದಾಶ್ರಯಃ ॥ ೩೨ ॥

ಕೌಸಲೇಯಃ ಖರಧ್ವಂಸೀ ವಿರಾಧವಧಪಂಡಿತಃ |
ವಿಭೀಷಣಪರಿತ್ರಾತಾ ದಶಗ್ರೀವಶಿರೋಹರಃ ॥ ೩೩ ॥

ಸಪ್ತತಾಳಪ್ರಭೇತ್ತಾ ಚ ಹರಕೋದಂಡಖಂಡನಃ |
ಜಾಮದಗ್ನ್ಯಮಹಾದರ್ಪದಳನಸ್ತಾಟಕಾನ್ತಕೃತ್ ॥ ೩೪ ॥

ವೇದಾಂತಪಾರೋ ವೇದಾತ್ಮಾ ಭವಬಂಧೈಕಭೇಷಜಃ |
ದೂಷಣತ್ರಿಶಿರೋರಿಶ್ಚ ತ್ರಿಮೂರ್ತಿಸ್ತ್ರಿಗುಣಸ್ತ್ರಯೀ ॥ ೩೫ ॥

---

ಚೆನ್ನಾಗಿ ಬಲ್ಲವನು. ಎಂದರೆ ಮಾತನ್ನು ಚನ್ನಾಗಿ ಆಡುವವನು. ಸತ್ಯವಾದ ಮಾತನ್ನು ಆಡುವವನು. ನಿಜವಾದ ಪರಾಕ್ರಮ ಉಳ್ಳವನು. ಸ್ಥಿರವಾದ ಸತ್ಯವಾದ ನಿಯಮವುಳ್ಳವನು. ವ್ರತಗಳಿಗೆ ಫಲಗಳನ್ನು ಕೊಡುವವನು. ಯಾವಾಗಲೂ ಹನುಮಂತನಿಂದ ಆಶ್ರಯಿಸಲ್ಪಟ್ಟವನು.

೩೩-೩೪. ಕೌಸಲ್ಯೆಯ ಮಗನು. ಖರನನ್ನು ನಾಶಮಾಡಿದವನು. ವಿರಾಧನನ್ನು ವಧಿಸಿದವನು. ವಿಭೀಷಣನನ್ನು ಕಾಪಾಡಿದವನು. ದಶಗ್ರೀವನ ತಲೆಗಳನ್ನು ಕಡಿದವನು. ಏಳು ತಾಳೆಯ ಮರಗಳನ್ನು ಕತ್ತರಿಸಿದವನು. ಶಿವನ ಧನುಸ್ಸನ್ನು ಮುರಿದವನು. ಜಾಮದಗ್ನಿರಾಮನ ದರ್ಪವನ್ನು ನಾಶಮಾಡಿದವನು. ತಾಟಕೆಯನ್ನು ಕೊಂದವನು.

೩೫. ವೇದಾಂತದ ಕೊನೆಯಲ್ಲಿ ಉಕ್ತನಾಗಿರುವ ಪರಮಾತ್ಮನು. ವೇದಕ್ಕೆ ಆತ್ಮನಾಗಿರುವವನು. ಸಂಸಾರವೆಂಬ ಬಂಧಕ್ಕೆ ವೈದ್ಯನು. ದೂಷಣ ತ್ರಿಶಿರರನ್ನು ಕೊಂದವನು. ತ್ರಿಮೂರ್ತಿ ಸ್ವರೂಪನು. ವೇದಸ್ವರೂಪನು. ಸತ್ವರಜಸ್ತಮೋಗುಣರೂಪನು.

ತ್ರಿವಿಕ್ರಮಸ್ತ್ರಿಲೋಕಾತ್ಮಾ ಪುಣ್ಯಚಾರಿತ್ರಕೀರ್ತನಃ ।
ತ್ರಿಲೋಕರಕ್ಷಕೋ ಧನ್ವೀ ದಂಡಕಾರಣ್ಯವಾಸಕೃತ್ ॥ ೩೬ ॥

ಅಹಲ್ಯಾಪಾವನಶ್ಚೈವ ಪಿತೃಭಕ್ತೋ ವರಪ್ರದಃ ।
ಜಿತೇಂದ್ರಿಯೋ ಜಿತಕ್ರೋಧೋ ಜಿತಲೋಭೋ ಜಗದ್ಗುರುಃ ॥ ೩೭ ॥

ಋಕ್ಷವಾನರಸಂಘಾತೀ ಚಿತ್ರಕೂಟಸಮಾಶ್ರಯಃ ।
ಜಯಂತತ್ರಾಣವರದಃ ಸುಮಿತ್ರಾಪುತ್ರಸೇವಿತಃ ॥ ೩೮ ॥

ಸರ್ವದೇವಾಧಿದೇವಶ್ಚ ಮೃತವಾನರ ಜೀವನಃ ।
ಮಾಯಾಮಾರೀಚಹಂತಾ ಚ ಮಹಾಭಾಗೋ ಮಹಾಭುಜಃ ॥ ೩೯ ॥

ಸರ್ವದೇವಸ್ತುತಃ ಸೌಮ್ಯೋ ಬ್ರಹ್ಮಣ್ಯೋ ಮುನಿಸತ್ತಮಃ ।
ಮಹಾಯೋಗೀ ಮಹೋದಾರಃ ಸುಗ್ರೀವಸ್ಥಿರರಾಜ್ಯದಃ ॥ ೪೦ ॥

---

೩೬-೩೭. ತ್ರಿವಿಕ್ರಮಾವತಾರ ಮಾಡಿದವನು. ಮೂರು ಲೋಕಕ್ಕೂ ಆತ್ಮರೂಪನು. ಪುಣ್ಯಚರಿತ್ರೆಯುಳ್ಳವನು. ಮೂರು ಲೋಕಕ್ಕೂ ರಕ್ಷಕನು. ಉತ್ತಮವಾದ ಧನುರಾಳಿಯು. ದಂಡಕಾರಣ್ಯದಲ್ಲಿ ವಾಸಮಾಡಿದವನು. ಅಹಲ್ಯೆಯನ್ನು ಪಾವನ ಮಾಡಿದವನು. ಪಿತೃಭಕ್ತನು. ವರವನ್ನು ಕೊಡುವವನು. ಲೋಭವನ್ನು ಜಯಿಸಿರುವವನು. ಜಗತ್ತಿಗೇನೇ ಗುರುವು.

೩೮. ಕಪಿ ಕರಡಿಗಳ ಗುಂಪುಗಳನ್ನು ಸೇರಿಸಿಕೊಂಡಿರುವವನು. ಚಿತ್ರಕೂಟದಲ್ಲಿ ಇರುವವನು. ಜಯಂತನಿಗೆ ಶಕ್ತಿ ಬರುವಂತೆ ವರವನ್ನು ಕೊಟ್ಟವನು. ಸುಮಿತ್ರೆಯ ಪುತ್ರನಾದ ಲಕ್ಷ್ಮಣನಿಂದ ಸೇವಿಸಲ್ಪಟ್ಟವನು.

೩೯-೪೦. ಎಲ್ಲಾ ದೇವರಿಗೂ ದೊಡ್ಡ ದೇವರು. ಸತ್ತ ಕಪಿಗಳನ್ನು ಬದುಕಿಸಿದವನು. ಮಾಯಾ ಮಾರೀಚನನ್ನು ಕೊಂದವನು. ಮಹಾಭಾಗನು. ಮಹಾಭುಜನು. ಎಲ್ಲಾ ದೇವತೆಗಳಿಂದ ಹೊಗಳಲ್ಪಡುವವನು. ಸೌಮ್ಯನು. ಬ್ರಾಹ್ಮಣರಿಗೆ ಹಿತವನ್ನುಂಟುಮಾಡುವವನು. ಮುನಿಗಳಲ್ಲಿ ಉತ್ತಮನು. ಮಹಾಯೋಗಿಯು. ಬಹುವಾದ ಉದಾರವಾದ ಮನಸ್ಸುಳ್ಳವನು. ಸುಗ್ರೀವನಿಗೆ ಸ್ಥಿರವಾಗಿರುವಂತೆ ರಾಜ್ಯವನ್ನು ಕೊಟ್ಟವನು.

ಸರ್ವಪುಣ್ಯಾಧಿಕಫಲಃ ಸ್ಮೃತಸರ್ವಾಘನಾಶನಃ ।
ಆದಿಪುರುಷೋ ಮಹಾಪುರುಷಃ ಪರಮಃ ಪುರುಷಸ್ತಥಾ ॥ ೪೧ ॥

ಪುಣ್ಯೋದಯೋ ಮಹಾಸಾರಃ ಪುರಾಣಃ ಪುರುಷೋತ್ತಮಃ ।
ಸ್ಮಿತವಕ್ತ್ರೋ ಮಿತಭಾಷೀ ಪೂರ್ವಭಾಷೀ ಚ ರಾಘವಃ ॥ ೪೨ ॥

ಅನಂತಗುಣಗಂಭೀರೋ ಧೀರೋ ದಾಂತಗುಣೋತ್ತರಃ
ಮಾಯಾಮಾನುಷಚಾರಿತ್ರೋ ಮಹಾದೇವಾಭಿಪೂಜಿತಃ ॥ ೪೩ ॥

ಸೇತುಕೃಜ್ಜಿತವಾರೀಶಃ ಸರ್ವತೀರ್ಥಮಯೋ ಹರಿಃ ।
ಶ್ಯಾಮಾಂಗಃ ಸುಂದರಃ ಶೂರಃ ಪೀತವಾಸಾ ಧನುರ್ಧರಃ ॥ ೪೪ ॥

ಸರ್ವಯಜ್ಞಾಧಿಪೋ ಯಜ್ಞೋ ಜರಾಮರಣವರ್ಜಿತಃ ।
ಶಿವಲಿಂಗಪ್ರತಿಷ್ಠಾತಾ ಸರ್ವಾಘಗಣವರ್ಜಿತಃ ॥ ೪೫ ॥

---

೪೧-೪೨. ಎಲ್ಲಾ ಪುಣ್ಯಗಳಿಗೂ ಹೆಚ್ಚು ಫಲವನ್ನು ಕೊಡುವವನು. ಸ್ಮರಿಸಿದರೆ ಎಲ್ಲಾ ಪಾಪಗಳನ್ನೂ ನಾಶಮಾಡುವವನು. ಆದಿಪುರುಷನು. ಮಹಾಪುರುಷನು. ಪರಮ ಪುರುಷನು. ಪುಣ್ಯೋದಯನು. ಮಹಾಸಾರನು. ಪುರಾಣಪುರುಷನು. ಪುರುಷೋತ್ತಮನು. ನಗುಮುಖವುಳ್ಳವನು. ಮಿತವಾಗಿ ಮಾತನಾಡುವವನು. ಮೊದಲೇ ಮಾತನಾಡುವವನು. ರಘುವಂಶದವನು

೪೩-೪೪. ಬಹುವಾದ ಗುಣಗಳುಳ್ಳವನು. ಧೀರನು. ಇಂದ್ರಿಯನಿಗ್ರಹವುಳ್ಳವನು. ಇಂದ್ರಿಯಗಳನ್ನು ನಿಗ್ರಹಿಸಿದವನು. ಮಾಯಾಮನುಷ್ಯನ ಚರಿತ್ರೆಯುಳ್ಳವನು. ಮಹಾದೇವನಿಂದ ಪೂಜಿತನಾದವನು. ಸೇತುವೆಯನ್ನು ಕಟ್ಟಿದವನು. ಸಮುದ್ರವನ್ನು ಜಯಿಸಿದವನು. ಎಲ್ಲಾ ತೀರ್ಥಗಳ ಸ್ವರೂಪನು. ಶ್ಯಾಮಾಂಗನು. ಶೂರನು. ಹೊಂಬಣ್ಣದ ಬಟ್ಟೆಯುಳ್ಳವನು. ಧನುರ್ಧರನು.

೪೫. ಎಲ್ಲಾ ಯಜ್ಞಗಳಿಗೂ ಅಧಿಪನು. ಯಜ್ಞಸ್ವರೂಪನು. ಮುಪ್ಪು ಸಾವುಗಳಿಲ್ಲದವನು. ಶಿವಲಿಂಗವನ್ನು ಪ್ರತಿಷ್ಠೆಮಾಡಿದವನು. ಎಲ್ಲಾ ರೀತಿಯಾದ ಪಾಪಗಳಿಂದಲೂ ಬಿಡಲ್ಪಟ್ಟವನು.

ಪರಮಾತ್ಮಾ ಪರಂ ಬ್ರಹ್ಮ ಸಚ್ಚಿದಾನಂದವಿಗ್ರಹಃ ।
ಪರಂ ಜ್ಯೋತಿಃ ಪರಂ ಧಾಮ ಪರಾಕಾಶಃ ಪರಾತ್ಪರಃ ॥ ೪೬ ॥

ಪರೇಶಃ ಪಾರಗಃ ಪಾರಃ ಸರ್ವಭೂತಾತ್ಮಕಃ ಶಿವಃ ।
ಇತಿ ಶ್ರೀರಾಮಚಂದ್ರಸ್ಯ ನಾಮ್ನಾಮಷ್ಟೋತ್ತರಂ ಶತಂ ॥ ೪೭ ॥

ಗುಹ್ಯಾದ್ಗುಹ್ಯತರಂ ದೇವಿ ತವ ಸ್ನೇಹಾತ್ಪ್ರಕೀರ್ತಿತಂ ।
ಯಃ ಪಠೇಚ್ಛೃಣುಯಾದ್ವಾಪಿ ಭಕ್ತಿಯುಕ್ತೇನ ಚೇತಸಾ ॥ ೪೮ ॥

ಸ ಸರ್ವೈರ್ಮುಚ್ಯತೇ ಪಾಪೈಃ ಕಲ್ಪಕೋಟಿಶತೋದ್ಭವೈಃ ।
ಜಲಾನಿ ಸ್ಥಲತಾಂ ಯಾಂತಿ ಶತ್ರವೋ ಯಾಂತಿ ಮಿತ್ರತಾಂ ॥ ೪೯ ॥

ರಾಜಾನೋ ದಾಸತಾಂ ಯಾಂತಿ ವಹ್ನಯೋ ಯಾಂತಿ ಸೌಮ್ಯತಾಂ ।
ಆನುಕೂಲ್ಯಂ ಚ ಭೂತಾನಿ ಸ್ಥೈರ್ಯಂ ಯಾನ್ತಿ ಚಲಾಶ್ಶ್ರಿಯಃ ॥ ೫೦ ॥

---

೪೬–೪೭. ಪರಮಾತ್ಮನು. ಪರಬ್ರಹ್ಮನು. ಸಚ್ಚಿದಾನಂದ ವಿಗ್ರಹನು. ಪರ ಜ್ಯೋತಿಸ್ಸ್ವರೂಪನು. ಉತ್ತಮವಾದ ಲೋಕಸ್ವರೂಪನು. ಪರಾಕಾಶ ಸ್ವರೂಪನು. ಯಾವುದು ಉತ್ಕೃಷ್ಟವೋ ಅದಕ್ಕಿಂತಲೂ ಉತ್ಕೃಷ್ಟನು. ಉತ್ತಮೋತ್ತಮನಾದ ಕೊನೆಗಂಡವನು. ಕೊನೆಯವನು. ಸರ್ವಭೂತಗಳಲ್ಲಿಯೂ ಇರುವನು. ಮಂಗಳ ರೂಪನು. ಈ ರೀತಿಯಾದ ಇವು ಶ್ರೀರಾಮನ ನೂರೆಂಟು ನಾಮಗಳು.

೪೮. ಎಲೈ ದೇವಿಯೆ ! ಇದು ಗುಹ್ಯಕ್ಕಿಂತಲೂ ಗುಹ್ಯತಮವು. ನಿನ್ನಲ್ಲಿರುವ ಸ್ನೇಹದಿಂದ ಹೇಳಿದ್ದೇನೆ. ಇವುಗಳನ್ನು ಭಕ್ತಿಯಿಂದ ಯಾವನು ಕೇಳುತ್ತಾನೆಯೋ, ಯಾವನು ಓದುತ್ತಾನೆಯೋ ಅವರು ನೂರು ಕೋಟಿ ಕಲ್ಪಗಳ ವರೆಗೂ ಮಾಡಿದ ಎಲ್ಲಾ ಪಾಪಗಳಿಂದಲೂ ಬಿಡಲ್ಪಡುತ್ತಾರೆ.

೪೯–೫೦. ಇದನ್ನು ಪಠಿಸಿದರೆ ನೀರು ಇರುವ ಜಾಗವು ಭೂಮಿಯಾಗ ಬೇಕಾದರೆ ಆಗುತ್ತದೆ. ಶತ್ರುಗಳು ಮಿತ್ರರಾಗುತ್ತಾರೆ. ರಾಜರು ದಾಸರಾಗುತ್ತಾರೆ. ಬೆಂಕಿಯು ತಣ್ಣಗಾಗುತ್ತದೆ. (ಆರಿಹೋಗುತ್ತದೆ) ಪ್ರಾಣಿಗಳು ತಮಗೆ ಅನುಕೂಲವಾಗುತ್ತವೆ. ಚಂಚಲವಾದ ಸಂಪತ್ತು ಸ್ಥಿರವಾಗುತ್ತದೆ.

ಅನುಗ್ರಹಂ ಗ್ರಹಾ ಯಾನ್ತಿ ಶಾನ್ತಿಮಾಯಾಂತ್ಯುಪದ್ರವಾಃ ।
ಪಠತೋ ಭಕ್ತಿಭಾವೇನ ನರಸ್ಯ ಗಿರಿಸಂಭವೇ ॥ ೫೧ ॥

ಯಃ ಪಠೇತ್ಪರಯಾ ಭಕ್ತ್ಯಾ ತಸ್ಯ ವಶ್ಯಂ ಜಗತ್ತ್ರಯಂ ।
ಯಂ ಯಂ ಕಾಮಂ ಪ್ರಕುರುತೇ ತಂ ತಮಾಪ್ನೋತಿ ಕೀರ್ತನಾತ್ ॥ ೫೨ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ ।
ವೈಕುಂಠೇ ಮೋದತೇ ನಿತ್ಯಂ ದಶಪೂರ್ವೈರ್ದಶಾಪರೈಃ ॥ ೫೩ ॥

ರಾಮಂ ದೂರ್ವಾದಳಶ್ಯಾಮಂ ಪದ್ಮಾಕ್ಷಂ ಪೀತವಾಸಸಂ ।
ಸ್ತುವಂತಿ ನಾಮಭಿರ್ದಿವ್ಯೈಃ ನ ತೇ ಸಂಸಾರಿಣೋ ಜನಾಃ ॥ ೫೪ ॥

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥ ೫೫ ॥

---

೫೧. ಗ್ರಹಗಳೆಲ್ಲವೂ ಅನುಗ್ರಹ ಮಾಡುತ್ತವೆ. ಕಷ್ಟಗಳು ಶಾನ್ತವಾಗುತ್ತವೆ. ಈ ರಾಮಾಷ್ಟೋತ್ತರವನ್ನು ಭಕ್ತಿಯಿಂದ ಪಠಿಸಿದರೆ ಈ ಮೇಲೆ ಹೇಳಿದಂತೆ ಆಗುತ್ತದೆ.

೫೨. ಯಾವನು ಇದನ್ನು ಭಕ್ತಿಯಿಂದ ಓದುತ್ತಾನೆಯೋ ಅವನಿಗೆ ಮೂರು ಲೋಕವೂ ವಶವಾಗುತ್ತವೆ. ಯಾವ ಯಾವುದನ್ನು ಅಪೇಕ್ಷಿಸುತ್ತಾನೆಯೋ ಅವೆಲ್ಲವನ್ನೂ ಹೊಂದುತ್ತಾನೆ.

೫೩. ಇದನ್ನು ಓದುವವನು ಹತ್ತು ಜನ ಹಿಂದಿನವರೊಡನೆಯೂ ಹತ್ತು ಜನ ಮುಂದಿನವರೊಡನೆಯೂ ಸಾವಿರದ ನೂರು ಕಲ್ಪಗಳವರೆಗೆ ವೈಕುಂಠದಲ್ಲಿ ಸುಖಿಸುತ್ತಾನೆ.

೫೪. ದೂರ್ವೆಯದಳದಂತೆ ಬಣ್ಣವುಳ್ಳ, ಪದ್ಮದಂತೆ ಕಣ್ಣುಳ್ಳ, ಹೊಂಬಣ್ಣದ ಬಟ್ಟೆಯುಳ್ಳ, ರಾಮನನ್ನು ಈ ನಾಮಗಳಿಂದ ಸ್ತುತಿಸಿದರೆ ಅವರು ಮತ್ತೆ ಸಂಸಾರಿಗಳಾಗುವುದಿಲ್ಲ. ಎಂದರೆ ಜನ್ಮವೆತ್ತುವುದಿಲ್ಲ.

೫೫-೫೬ ರಾಮನಿಗೆ ನಮಸ್ಕಾರವು. ರಾಮಭದ್ರನಿಗೆ ನಮಸ್ಕಾರವು. ರಾಮಚಂದ್ರನಿಗೆ ನಮಸ್ಕಾರವು. ರಘುನಾಥನಿಗೆ ನಮಸ್ಕಾರವು. ನಾಥನಿಗೆ

ಇಮಂ ಮಂತ್ರಂ ಮಹಾದೇವಿ ಜಪನ್ನೇವ ದಿವಾನಿಶಂ ।
ಸರ್ವಪಾಪವಿನಿರ್ಮುಕ್ತೋ ವಿಷ್ಣುಸಾಯುಜ್ಯಮಾಪ್ನುಯಾತ್ ॥ ೫೬ ॥

ಇತಿ ತೇ ರಾಮಚಂದ್ರಸ್ಯ ಮಾಹಾತ್ಮ್ಯಂ ವೇದಸಮ್ಮಿತಂ ।
ಕಥಿತಂ ತೇ ಮಯಾ ಸುಭ್ರೂಸ್ತವ ಪ್ರೀತ್ಯಾ ಶುಭಾಹ್ವಯಂ ॥ ೫೭ ॥

॥ ವಸಿಷ್ಠ ಉವಾಚ ॥

ತಚ್ಛ್ರುತ್ವಾ ಶಂಕರೇಣೋಕ್ತಂ ಮಾಹಾತ್ಮ್ಯಂ ಪರಮಾತ್ಮನಃ ।
ಪ್ರಹರ್ಷಮತುಲಂ ಲೇಭೇ ಆನಂದಾಶ್ರುಜಲಾಪ್ಲುತಾ
ಪ್ರಣಮ್ಯ ಪ್ರಾಹ ದೇವೇಶಂ ಭರ್ತಾರಂ ವೃಷಭಧ್ವಜಂ ॥ ೫೮ ॥

॥ ಪಾರ್ವತ್ಯುವಾಚ ॥

ಅಹೋ ಮಾಹಾತ್ಮ್ಯಮತುಲಂ ರಾಮಸ್ಯ ಪರಮಾತ್ಮನಃ ।
ಶ್ರೋತ್ರತೃಪ್ತಿರ್ಹಿ ಮೇ ನ ಸ್ಯಾತ್ ಕಲ್ಪಾಯುತಶತೈರಪಿ ॥ ೫೯ ॥

---

ನಮಸ್ಕಾರವು. ಸೀತಾಪತಿಗೆ ನಮಸ್ಕಾರವು. ಈ ಮಂತ್ರವನ್ನು ಹಗಲೂ ರಾತ್ರಿಯೂ ಜಪಿಸಿದರೆ ವಿಷ್ಣುಸಾಯುಜ್ಯವನ್ನು ಹೊಂದುತ್ತಾನೆ.

೫೭. ಎಲೈ ಪಾರ್ವತಿಯೆ ! ವೇದಕ್ಕೆ ಸಮವಾದ ರಾಮಚಂದ್ರನ ಮಹಿಮೆಯನ್ನು ನಿನ್ನಲ್ಲಿರುವ ಪ್ರೀತಿಯಿಂದ ನಿನಗೆ ಹೇಳಿದ್ದೇನೆ.

೫೮. ವಸಿಷ್ಠನು ಹೇಳಿದನು—ಶಂಕರನು ಈ ರಾಮನ ಮಹಿಮೆಯನ್ನು ಹೇಳಿದುದನ್ನು ಕೇಳಿ ಪಾರ್ವತಿಯು ಬಹು ಸಂತೋಷಗೊಂಡು ಆನಂದಾಶ್ರುವನ್ನು ಕಣ್ಣಿನಲ್ಲಿ ತಂದುಕೊಂಡಳು. ಅನಂತರ ವೃಷಭಧ್ವಜನನ್ನು ನಮಸ್ಕರಿಸಿ ಇಂತೆಂದಳು.

೫೯. ಪಾರ್ವತಿಯು ಹೇಳಿದಳು—ಶ್ರೀರಾಮನ ಮಹಿಮೆಯು ಬಹು ಉತ್ಕೃಷ್ಟವಾದುದು. ಆಶ್ಚರ್ಯವಾದುದು ಇದನ್ನು ಕೇಳುತ್ತಿದ್ದರೆ ಕೋಟಿ ವರ್ಷಗಳಾದರೂ ಕಿವಿಗೆ ತೃಪ್ತಿಯೆಂಬುದು ಸ್ವಲ್ಪವೂ ಉಂಟಾಗುವುದಿಲ್ಲ.

ಧನ್ಯಾಹಂ ಕೃತಕೃತ್ಯಾಸ್ಮಿ ಸರ್ವಭೂತಭಯಾನಕೆ |
ತ್ವತ್ಪ್ರಸಾದಾದ್ಧರೇರ್ಭಕ್ತಿರ್ಜನ್ಮಜನ್ಮನಿ ಚಾಸ್ತು ಮೇ || ೬೦ ||

॥ ವಸಿಷ್ಠ ಉವಾಚ ॥

ಏವಮುಕ್ತ್ವಾ ಸ್ವಭರ್ತಾರಂ ಗೌರೀ ಭಾಗವತೋತ್ತಮಂ |
ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ || ೬೧ ||

ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ |
ಇಮಮೇವ ಜಪನ್ಮಂತ್ರಂ ಸರ್ವಾವಸ್ಥಾಸು ಪಾರ್ವತಿ || ೬೨ ||

ಉವಾಸ ಚ ಸುಖೇನೈವ ಕೈಲಾಸೇ ಪತಿನಾ ಸಹ |
ಏತತ್ತೇ ವೃತ್ತಮಾಖ್ಯಾತಂ ಗುಹ್ಯಾದ್ಗುಹ್ಯತರಂ ನೃಪ || ೬೩ ||

ರುದ್ರಪ್ರೋಕ್ತಾನಿ ಶಾಸ್ತ್ರಾಣಿ ತಾಮಸನ್ಯೇವ ಪಾರ್ಥಿವ |
ಸಮ್ಮೋಹನಾರ್ಥಂ ಲೋಕಾನಾಂ ಪ್ರೋಕ್ತಾನ್ಯಾರ್ವೃಷಭಧ್ವಜಃ || ೬೪ ||

---

೬೦. ನಾನು ಧನ್ಯಳು. ಕೃತಕೃತ್ಯಳು. ಎಲ್ಲಾ ಪ್ರಾಣಿಗಳಿಗೂ ಭಯವನ್ನುಂಟುಮಾಡುವ ಶಿವನೆ! ನಿನ್ನ ಅನುಗ್ರಹದಿಂದ ನನಗೆ ಜನ್ಮ ಜನ್ಮದಲ್ಲಿಯೂ ಈ ಹರಿಯ ಭಕ್ತಿಯು ಉಂಟಾಗುತ್ತಿರಲಿ.

೬೧-೬೩. ಭಾಗವತೋತ್ತಮನಾದ ಶಿವನಿಗೆ ಗೌರಿಯು ಹೀಗೆಂದು ಹೇಳಿ "ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ" ಎಂಬ ಮಂತ್ರವನ್ನು ಯಾವಾಗಲೂ ಜಪಿಸುತ್ತ ಕೈಲಾಸಪರ್ವತದಲ್ಲಿ ಗಂಡನೊಡನೆ ಸುಖವಾಗಿದ್ದಳು. ಎಲೈ ದೊರೆಯೇ! ಇದು ಬಹು ರಹಸ್ಯವಾದುದು. ಇದನ್ನು ನಿನಗೆ ಹೇಳಿದ್ದೇನೆ.

೬೪. ರುದ್ರನು ಹೇಳಿರುವ ಶಾಸ್ತ್ರಗಳೆಲ್ಲವೂ ತಾಮಸಗುಣದಿಂದ ಕೂಡಿರತಕ್ಕವುಗಳೇ. ಅವನ್ನು ಲೋಕಕ್ಕೆ ಅಜ್ಞಾನವುಂಟಾಗುವಂತೆ ಮಾಡುವುದಕ್ಕೆ ಹೇಳಿದ್ದಾನೆ.

ರಹಸಿ ಪ್ರೋಕ್ತವಾನ್ ದೇವ್ಯಾ ಇದಮೇಕಂ ಹರಃ ಪ್ರಭುಃ ।
ಯಥಾರ್ಥಮರ್ಥಗುಪ್ತಂ ಚ ಸಾರಂ ಮಂತ್ರಸ್ಯ ಭೂಪತೇ || ೬೫ ||

ದೇವ್ಯಾಃ ಪ್ರೀತ್ಯೈ ಮಹಾದೇವಃ ಕಥಯಾಮಾಸ ತತ್ಪರಃ |
ಉಮಾಮಹೇಶ್ವರಂ ರಾಜನ್ ಸಂವಾದಮಿಮಮದ್ಭುತಂ || ೬೬ ||

ಯಃ ಪಠೇತ್ ಶೃಣುಯಾದ್ವಾಪಿ ಭಕ್ತಿಯುಕ್ತೇನ ಚೇತಸಾ ।
ಸ ಸರ್ವವಂದ್ಯಃ ಸರ್ವಜ್ಞಃ ಮಹಾಭಾಗವತೋ ಭವೇತ್ || ೬೭ ||

ಸರ್ವಧರ್ಮವಿನಿರ್ಮುಕ್ತಃ ಪ್ರಾಪ್ನೋತಿ ಪರಮಂ ಪದಂ ।
ಧನ್ಯಃ ಖಲು ಭವಾಂಲ್ಲೋಕೇ ಪಾರ್ಥಿವೇಂದ್ರ ಮಹಾಬಲ || ೬೮ ||

ತ್ವದನ್ವಯೇ ಹರಿಃ ಶ್ರೀಮಾನ್ ಪುರಾಣಪುರುಷೋತ್ತಮಃ ।
ಉತ್ಪತ್ಸ್ಯತೇ ದಾಶರಥಿಃ ಸರ್ವಲೋಕ ಹಿತಾಯ ವೈ || ೬೯ ||

---

೬೫-೬೯. ಆದರೆ ಪ್ರಭುವಾದ ಹರನು ಇದೊಂದನ್ನು ಮಾತ್ರ ದೇವಿಗೆ ಗುಟ್ಟಾಗಿ ಹೇಳಿರುವನು. ನಿಶ್ಚಯವಾದುದಾಗಿಯೂ ಅರ್ಥವುಳ್ಳದಾಗಿಯೂ, ಮಂತ್ರಗಳ ಸಾರರೂಪವಾಗಿಯೂ, ಇರುವ ಇದನ್ನು ಮಹಾದೇವನು ದೇವಿಯ ಲ್ಲಿರುವ ಪ್ರೀತಿಯಿಂದ ಹೇಳಿರುವನು. ಈ ಅದ್ಭುತವಾದ ಉಮಾಮಹೇಶ್ವರರು ಮಾತನಾಡಿರುವ ಈ ಚರಿತ್ರೆಯನ್ನು ಯಾವನು ಭಕ್ತಿಯಿಂದ ಓದುತ್ತಾನೆಯೋ ಅಥವಾ ಕೇಳುತ್ತಾನೆಯೋ ಅವನು ಎಲ್ಲರಿಂದಲೂ ನಮಸ್ಕೃತನಾಗಿ ಎಲ್ಲವನ್ನೂ ತಿಳಿದವನಾಗಿ ಮಹಾಭಾಗವತನಾಗುವನು. ಈ ರೀತಿಯಾಗಿ ಭಾಗವತೋತ್ತಮ ನಾಗಿ ವೈಕುಂಠವನ್ನು ಹೊಂದುತ್ತಾನೆ. ಎಲೈ ಮಹಾಬಲಿಷ್ಠನಾದ ಪಾರ್ಥಿ ವೇಂದ್ರನೆ ! ನೀನೇ ಧನ್ಯನು. ಪುರಾಣನೂ ಪುರುಷೋತ್ತಮನೂ ಆದ ಹರಿಯು ನಿನ್ನ ವಂಶದಲ್ಲಿ ದಶರಥನಿಗೆ ಮಗನಾಗಿ ಸರ್ವಲೋಕಗಳಿಗೂ ಹಿತವನ್ನು ಮಾಡಲು ಹುಟ್ಟುವನು.

ತಸ್ಮಾದಿಕ್ಷ್ವಾಕವಃ ಪೂಜ್ಯಾಃ ಸುರಾಣಾಮಪಿ ಪಾರ್ಥಿವ ।
ಯೇಷಾಂ ಜಾತೋ ಹಿ ಭಗವಾನ್ ರಾಮೋ ರಾಜೀವಲೋಚನಃ ॥ ೭೦ ॥

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ಶ್ರೀ ರಾಮಚಂದ್ರಾಷ್ಟೋತ್ತರಶತನಾಮ ಕಥನಂ ನಾಮ ಏಕಾಶೀತ್ಯಧಿಕದ್ವಿಶತತಮೋಧ್ಯಾಯಃ

---

೭೦. ಎಲೈ ದಿಲೀಪನೆ ! ಈ ರಾಮನು ಹುಟ್ಟುವುದರಿಂದಲೇ ಇಕ್ಷ್ವಾಕು ವಂಶದವರು ದೇವತೆಗಳಿಗೂ ಪೂಜ್ಯರು. ಅವರ ವಂಶದಲ್ಲಿ ರಾಜೀವಲೋಚನನಾದ ಹರಿಯು ಹುಟ್ಟುತ್ತಾನೆ.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದಲ್ಲಿ ಶ್ರೀ ರಾಮಚಂದ್ರಾಷ್ಟೋತ್ತರಶತನಾಮ ಕಥನವೆಂಬ ಇನ್ನೂರ ಎಂಭತ್ತೊಂದನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

–x–

# ಅಥ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ

## || ದ್ವ್ಯಶೀತ್ಯಧಿಕದ್ವಿಶತತಮೋಽಧ್ಯಾಯಃ ||



|| ದಿಲೀಪ ಉವಾಚ ||

**ಕಥಿತಂ ಭವತಾ ಬ್ರಹ್ಮನ್ ಸರ್ವಧರ್ಮಮಶೇಷತಃ ।**
**ಸಾಮಾನ್ಯಂ ಚ ವಿಶಿಷ್ಟಂ ಚ ಸ್ವರೂಪಂ ಪರದೇವಯೋಃ || ೧ ||**

**ಸ್ವರ್ಗಾಪವರ್ಗೌ ಕಥಿತೌ ಸಾಧನಂ ಚ ತಯೋರಪಿ ।**
**ಧನ್ಯೋಽಸ್ಮ್ಯಹಂ ದ್ವಿಜಶ್ರೇಷ್ಠ ತ್ವತ್ಪ್ರಸಾದಾತ್ಸದಾ ಗುರೋ || ೨ ||**

**ಏಕಸ್ತು ಸಂಶಯಶ್ಚಿತ್ತೇ ಮಮಾಸ್ತಿ ದ್ವಿಜಸತ್ತಮ ।**
**ಕಥಮನ್ಯಾಂ ದ್ವಿಜಶ್ರೇಷ್ಠ ಪೃಚ್ಛಾಮಿ ತ್ವಾಂ ಕುತೂಹಲಾತ್ || ೩ ||**

---

### ಇನ್ನೂರ ಎಂಭತ್ತೆರಡನೆಯ ಅಧ್ಯಾಯವು



೧–೩. ದಿಲೀಪನು ಹೇಳಿದನು–ಎಲೈ ಬ್ರಾಹ್ಮಣನೆ! ನೀನು ಎಲ್ಲಾ ಧರ್ಮವನ್ನೂ ಕ್ರಮವಾಗಿ ಹೇಳಿದೆ. ಅವುಗಳಲ್ಲಿ ಸಾಮಾನ್ಯಧರ್ಮ ವಿಶೇಷ ಧರ್ಮಗಳನ್ನೂ ಹೇಳಿದ್ದೀಯೆ. ಪರಮಾತ್ಮ ಜೀವಾತ್ಮಗಳ ಸ್ವರೂಪಗಳನ್ನೂ ಹೇಳಿದ್ದೀಯೆ. ಸ್ವರ್ಗಮೋಕ್ಷಗಳ ವಿಷಯಗಳನ್ನೂ ನೀನು ಹೇಳಿದ್ದೀಯೆ. ಆ ಸ್ವರ್ಗಮೋಕ್ಷಗಳಿಗೆ ಕಾರಣವನ್ನೂ ಹೇಳಿದ್ದೀಯೆ. ಆದ್ದರಿಂದ ಎಲೈ ಬ್ರಾಹ್ಮಣೋತ್ತಮನೆ! ನಿನ್ನ ಅನುಗ್ರಹದಿಂದ ನಾನು ಧನ್ಯನಾಗಿದ್ದೇನೆ.

೩. ಎಲೈ ದ್ವಿಜಶ್ರೇಷ್ಠನೆ! ನನ್ನ ಮನಸ್ಸಿನಲ್ಲಿ ಒಂದು ಸಂಶಯವಿದೆ. ಆ ಕಥೆಯನ್ನು ಕೇಳಬೇಕೆಂದು ನನಗೆ ಬಹಳ ಕುತೂಹಲವಿದೆ.

ಕಥಯಸ್ವ ಯಥಾತಥ್ಯಮಪಿ ವಾತ್ಸಲ್ಯಗೌರವಾತ್ ।
ಮಹಾಭಾಗವತಶ್ರೇಷ್ಠೋ ರುದ್ರಸ್ತ್ರಿಪುರಘಾತಕಃ ॥ ೪ ॥

ಕಸ್ಮಾದ್ವಿಗರ್ಹಿತಂ ರೂಪಂ ಪ್ರಾಪ್ತವಾನ್ ಸಹ ಭಾರ್ಯಯಾ ।
ಯೋನಿಲಿಂಗಸ್ವರೂಪಂ ಚ ಕಥಂ ಸ್ಯಾತ್ ಸುಮಹಾತ್ಮನಃ ॥ ೫ ॥

ಪಂಚವಕ್ತ್ರಶ್ಚತುರ್ಬಾಹುಃ ಶೂಲಪಾಣಿಸ್ತ್ರಿಲೋಚನಃ ।
ಕಥಂ ವಿಗರ್ಹಿತಂ ರೂಪಂ ಪ್ರಾಪ್ತವಾನ್ ದ್ವಿಜಪುಂಗವ ॥
ಏತತ್ಸರ್ವಂ ಸಮಾಚಕ್ಷ್ವ ಮಿತ್ರಾವರುಣನಂದನ ॥ ೬ ॥

॥ ವಸಿಷ್ಠ ಉವಾಚ ॥

ಶೃಣು ರಾಜನ್ ಪ್ರವಕ್ಷ್ಯಾಮಿ ಯನ್ಮಾಂ ಪೃಚ್ಛಸಿ ಗೌರವಾತ್ ।
ವಿಶುದ್ಧಹೃದಯೇ ಪುಂಸಾಂ ಬುದ್ಧಿಶ್ಶ್ರೇಯಸಿ ಜಾಯತೇ ॥ ೭ ॥

---

೪. ನನ್ನಲ್ಲಿರುವ ಪ್ರೀತಿಯಿಂದ ಸರಿಯಾದ ವಿಷಯವನ್ನು ಹೇಳು. ತ್ರಿಪುರಘಾತಕನಾದ ರುದ್ರನು ಭಾಗವತರಲ್ಲಿ ಉತ್ತಮನಾಗಿರುವನಷ್ಟೆ !

೫. ಆ ರುದ್ರನು ಹೆಂಡತಿಯೊಡನೆ ತಿರಸ್ಕೃತವಾದ ರೂಪವನ್ನು ಏಕೆ ಹೊಂದಿದನು ? ಆ ಮಹಾತ್ಮನಾದ ರುದ್ರನಿಗೆ ಯೋನಿ ಲಿಂಗ ಸ್ವರೂಪಗಳು ಬರಲು ಕಾರಣವೇನು ?

೬. ಆ ರುದ್ರನು ಐದು ಮುಖವುಳ್ಳವನು. ನಾಲ್ಕು ತೋಳುಗಳುಳ್ಳವನು. ಕೈಯ್ಯಲ್ಲಿ ಶೂಲವನ್ನು ಹಿಡಿದಿರುವವನು. ಮೂರು ಕಣ್ಣುಗಳನ್ನುಳ್ಳವನು. ಎಲೈ ವಸಿಷ್ಠನೆ ! ಅವನು ಈ ರೀತಿಯಾದ ನಿಂದಿತರೂಪವನ್ನು ಹೊಂದಲು ಕಾರಣವೇನು ? ಮಿತ್ರಾವರುಣನ ನಂದನನೆ ! ಇದೆಲ್ಲವನ್ನೂ ನನಗೆ ಹೇಳು.

೭. ವಸಿಷ್ಠನು ಹೇಳಿದನು–ಎಲೈ ರಾಜನೆ ! ನನ್ನಲ್ಲಿ ಗೌರವವಿಟ್ಟುಕೊಂಡಿದ್ದೀಯೆ. ಆದ್ದರಿಂದ ನೀನು ಕೇಳಿದುದನ್ನು ನಾನು ಹೇಳುತ್ತೇನೆ. ಕೇಳು. ಮನುಷ್ಯರಿಗೆ ಹೃದಯವು ಶುದ್ಧವಾಗಿದ್ದರೆ ಶ್ರೇಯಸ್ಸಿನಲ್ಲೂ ಬುದ್ಧಿ ಹುಟ್ಟುತ್ತದೆ.

ಸ್ವಾಯಂಭುವೋ ಮನುಃ ಪೂರ್ವಂ ಮಂದರೇ ಪರ್ವತೋತ್ತಮೇ ।
ಜಗಾಮ ಮುನಿಭಿಸ್ಸಾರ್ಧಂ ದೀರ್ಘಸತ್ರಮನುತ್ತಮಂ ॥ ೮ ॥

ತಸ್ಮಿನ್ ಸಮಾಗತಾಃ ಸರ್ವೇ ಮುನಯಃ ಸಂಶಿತವ್ರತಾಃ ।
ನಾನಾಶಾಸ್ತ್ರವಿದಃ ಶ್ರೇಷ್ಠಾಃ ಬಾಲಸೂರ್ಯಾನಲಪ್ರಭಾಃ ॥ ೯ ॥

ಸರ್ವವೇದವಿದೋ ವಿಪ್ರಾಃ ಸರ್ವಧರ್ಮಪರಾಯಣಾಃ ।
ವರ್ತಮಾನೇ ಮಹಾಸತ್ರೇ ಮುನಯಃ ಕ್ಷೀಣಕಲ್ಮಷಾಃ ।
ಅನ್ವೇಷ್ಟುಂ ದೇವತಾತತ್ವಂ ಮಿಥಃ ಪ್ರೋಚುಸ್ತಪೋಧನಾಃ ॥ ೧೦ ॥

॥ ಋಷಯ ಊಚುಃ ॥

ವಿಪ್ರಾಣಾಂ ವೇದವಿದುಷಾಂ ಕಃ ಪೂಜ್ಯೋ ದೇವತಾಂ ವರಃ ।
ಬ್ರಹ್ಮವಿಷ್ಣುಮಹೇಶಾನಾಂ ಕಃ ಸ್ತುತೋ ಮುಕ್ತಿದೋ ನೃಣಾಂ ॥ ೧೧ ॥

---

೮. ಪೂರ್ವದಲ್ಲಿ ಸ್ವಾಯಂಭುವ ಮನುವು ಮಂದರಪರ್ವತದಲ್ಲಿ ಮುನಿಗಳನ್ನು ಕರೆದುಕೊಂಡು ದೊಡ್ಡದಾದ ಯಾಗವನ್ನು ಮಾಡಲು ಹೋದನು.

೯. ಆ ಯಾಗಕ್ಕೆ ಎಲ್ಲಾ ಋಷಿಗಳೂ ಬಂದರು. ಅವರೆಲ್ಲರೂ ವ್ರತದಲ್ಲಿ ಆಸಕ್ತರು. ಬಗೆಬಗೆಯ ಶಾಸ್ತ್ರಗಳನ್ನೂ ಬಲ್ಲವರು. ಶ್ರೇಷ್ಠರು. ಬಾಲ ಸೂರ್ಯನಂತೆ ತೇಜಸ್ಸುಳ್ಳವರು. ಅಗ್ನಿಯಂತೆ ಶ್ರೇಷ್ಠರು.

೧೦. ಅವರೆಲ್ಲರೂ ವೇದವನ್ನು ಬಲ್ಲವರು. ಯೋಗ್ಯರು. ಎಲ್ಲಾ ಧರ್ಮಗಳನ್ನೂ ಬಲ್ಲವರು. ಅವುಗಳಲ್ಲಿ ಆಸಕ್ತರು. ಆ ಮುನಿಗಳೆಲ್ಲರೂ ಪಾಪಗಳನ್ನು ಕಳೆದುಕೊಂಡವರು. ಈ ದೊಡ್ಡ ಯಾಗವು ನಡೆಯುತ್ತಿರಲು ಪರದೇವತೆಯ ವಿಷಯವನ್ನು ತಿಳಿಯಲು ಅವರೆಲ್ಲರೂ ಒಬ್ಬರಿಗೊಬ್ಬರು ಚರ್ಚಿಸಲು ಉಪಕ್ರಮಿಸಿದರು.

೧೧. ಋಷಿಗಳು ಹೇಳಿದರು–ವೇದವನ್ನು ಬಲ್ಲ ಯೋಗ್ಯರಾದ ವಿಪ್ರರಿಗೆ ಬ್ರಹ್ಮ ವಿಷ್ಣು ಮಹೇಶರಲ್ಲಿ ಯಾವನು ಪೂಜ್ಯನು ? ಆ ತ್ರಿಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶರಲ್ಲಿ ಯಾವನನ್ನು ಸ್ತುತಿಸಿದರೆ ಮನುಷ್ಯರಿಗೆ ಮುಕ್ತಿಯು ಸಿಕ್ಕುತ್ತದೆ ?

ಕಸ್ಯ ಪಾದೋದಕಂ ಸೇವ್ಯಂ ಭುಕ್ತ್ಯೋಚ್ಛಿಷ್ಟಂ ಚ ಪಾವನಂ ।
ಕೋಽವ್ಯಯಃ ಪರಮಂ ಧಾಮ ಪರಮಾತ್ಮಾ ಸನಾತನಃ
ಕಸ್ಯ ಪ್ರಸಾದಸ್ತೀರ್ಥಂ ಚ ಪಿತೃಣಾಂ ತೃಪ್ತಿದಂ ಭವೇತ್ ॥ ೧೨ ॥

॥ ವಸಿಷ್ಠ ಉವಾಚ ॥

ತೇಷಾಂ ಸಮುಪವಿಷ್ಟಾನಾಮಿತಿ ವಾದೋ ಮಹಾನಭೂತ್ ।
ರುದ್ರಮೇಕಮಿತಿ ಪ್ರೋಚುಃ ಕೇಚಿದತ್ರ ಮಹರ್ಷಯಃ ॥ ೧೩ ॥

ಬ್ರಹ್ಮೈವ ಪೂಜ್ಯ ಇತ್ಯನ್ಯೇ ವದಂತಿ ಮುನಿಸತ್ತಮಾಃ ।
ಸೂರ್ಯ ಏವಾತ್ಮನಾಂ ಪೂಜ್ಯ ಇತ್ಯನ್ಯೇ ಪ್ರಾಹುರರ್ಚಕಾಃ ॥ ೧೪ ॥

ಯೋಽಸೌ ಸರ್ವಗತಃ ಶ್ರೀಮಾನ್ ಶ್ರೀಪತಿಃ ಪುರುಷೋತ್ತಮಃ ।
ಅವ್ಯಯಃ ಪುಂಡರೀಕಾಕ್ಷೋ ವಾಸುದೇವಃ ಪರಾತ್ಪರಃ ॥ ೧೫ ॥

---

೧೨. ಅವರಲ್ಲಿ ಯಾವನ ಪಾದೋದಕವು ಪಾವನವು? ಯಾವನ ನಿವೇದನವನ್ನು ತಿನ್ನಬೇಕು? ಯಾವನು ನಾಶರಹಿತನು? ಯಾವನು ಉತ್ತಮವಾದ ತೇಜಸ್ಸುಳ್ಳವನು? ಸನಾತನನೂ ಪರಮಾತ್ಮನೂ ಆದವನು ಯಾರು? ಯಾವನ ತೀರ್ಥಪ್ರಸಾದಗಳು ಪಿತೃಗಳಿಗೆ ತೃಪ್ತಿಯನ್ನುಂಟುಮಾಡುತ್ತವೆ?

೧೩. ವಸಿಷ್ಠನು ಹೇಳಿದನು–ಹೀಗೆ ಕುಳಿತುಕೊಂಡು ಮಾತನಾಡುತ್ತಿದ್ದವರಿಗೆ ವಾದ ವಿವಾದಗಳು ಬಹುವಾಗಿ ನಡೆಯುತ್ತಿದ್ದುವು. ಈರೀತಿ ಎಲ್ಲವನ್ನೂ ಕೊಡುವವನು ಮತ್ತು ಉತ್ತಮನಾಗಿರುವವನು ರುದ್ರನು ಎಂದು ಕೆಲವು ಮಹರ್ಷಿಗಳು ಹೇಳಿದರು.

೧೪. ಬ್ರಹ್ಮನೇ ಪೂಜ್ಯನು. ಎಂಬುದಾಗಿ ಕೆಲವು ಮುನಿಗಳು ಹೇಳಿದರು. ಸೂರ್ಯನೇ ಪೂಜ್ಯನು ಎಂಬುದಾಗಿ ಅವನ ಭಕ್ತರು ಕೆಲವರು ಹೇಳಿದರು.

೧೫. ಪುರುಷೋತ್ತಮನಾದ ಲಕ್ಷ್ಮೀರಮಣನೇ ಎಲ್ಲರಲ್ಲಿಯೂ ಇದ್ದುಕೊಂಡು ಇರತಕ್ಕವನು. ಅವನು ಶ್ರೇಷ್ಠನಾದವನು. ಆ ಪುಂಡರೀಕಾಕ್ಷನೇ ಅವ್ಯಯನು. ಆ ವಾಸುದೇವನೇ ಪರಾತ್ಪರನು. ಎಂದು ಕೆಲವರು ಹೇಳಿದರು.

ಅನಾದಿನಿಧನೋ ವಿಷ್ಣುಃ ಸ ಏವ ಪರಮೇಶ್ವರಃ ।
ಸಂಪೂಜ್ಯೋ ದೇವತಾಶ್ರೇಷ್ಠ ಇತ್ಯೇಕೇ ಪ್ರೋಚಿರೇ ದ್ವಿಜಾಃ
ತೇಷಾಂ ವಿವದತಾಂ ತತ್ರ ಮನುಃ ಸ್ವಾಯಂಭುವೋಽಬ್ರವೀತ್　　॥ ೧೬ ॥

॥ ಮನುರುವಾಚ ॥

ಶುದ್ಧಸತ್ವಮಯೋ ಯೋಽಸೌ ಕಲ್ಯಾಣಗುಣವಾನ್ ಪ್ರಭುಃ ।
ಪುಂಡರೀಕೇಕ್ಷಣಃ ಶ್ರೀಮಾನ್ ಶ್ರೀಪತಿಃ ಪುರುಷೋತ್ತಮಃ　　॥ ೧೭ ॥

ವಿಪ್ರಾಣಾಂ ವೇದವಿದುಷಾಮೇಕ ಏವಾರ್ಚಿತಃ ಪ್ರಭುಃ ।
ವಿಪ್ರಾಣಾಂ ನೇತರೇ ಪೂಜ್ಯಾ ರಜಸ್ತಮೋವಿಮಿಶ್ರಿತಾಃ　　॥ ೧೮ ॥

॥ ವಸಿಷ್ಠ ಉವಾಚ ॥

ಇತಿ ತಸ್ಯ ವಚಶ್ಶ್ರುತ್ವಾ ಸರ್ವ ಏವ ಮಹರ್ಷಯಃ ।
ಭೃಗುಂ ತಪೋನಿಧಿಂ ವಿಪ್ರಂ ಪ್ರೋಚುಃ ಪ್ರಾಂಜಲಯಸ್ತಥಾ　　॥ ೧೯ ॥

---

೧೬. ಆ ವಿಷ್ಣುವು ಆದಿಅಂತ್ಯಗಳಿಲ್ಲದವನು. ಅವನೇನೆ ಎಲ್ಲವನ್ನೂ ಕೊಡುವವನು. ಅವನನ್ನೇ ಪೂಜಿಸಬೇಕು. ಎಂದು ಕೆಲವರು ಹೇಳಿದರು. ಅವರೆಲ್ಲರೂ ಹೀಗೆ ವಾಗ್ವಾದದಲ್ಲಿ ತೊಡಗಿರಲು ಆಗ ಸ್ವಾಯಂಭುವಮನುವು ಇಂತೆಂದು ಹೇಳಿದನು.

೧೭-೧೮. ಮನುವು ಹೇಳಿದನು-ಶುದ್ಧಸತ್ವದಿಂದ ಕೂಡಿಕೊಂಡಿರುವನೂ, ಕಲ್ಯಾಣಗುಣವುಳ್ಳವನೂ, ಪ್ರಭುವೂ, ಪುಂಡರೀಕಾಕ್ಷನೂ, ಶ್ರೀಮಂತನೂ, ಲಕ್ಷ್ಮೀಪತಿಯೂ ಪುರುಷೋತ್ತಮನೂ, ಆದ ಆ ವಿಷ್ಣುವನ್ನೇ ವೇದ ವೇದಾಂತ ವನ್ನು ಬಲ್ಲವರು ಪೂಜಿಸಿರುವರು. ಪೂಜಿಸುತ್ತಿರುತ್ತಾರೆ. ಆದ್ದರಿಂದ ಆ ವಿಷ್ಣುವನ್ನೇ ಪೂಜಿಸಬೇಕೇ ಹೊರತು ವಿಪ್ರರಾದವರು ರಜಸ್ಸು ತಮಸ್ಸು ಇವು ಗಳಿಂದ ಕೂಡಿರುವವರನ್ನು ನಿಜವಾಗಿಯೂ ಪೂಜಿಸಲೇ ಬಾರದು.

೧೯. ವಸಿಷ್ಠನು ಹೇಳಿದನು-ಆ ಮನುವು ಹೀಗೆ ಹೇಳಿದುದನ್ನು ಕೇಳಿ ಆ ಮಹರ್ಷಿಗಳೆಲ್ಲರೂ ತಪೋನಿಧಿಯಾದ ಭೃಗುವನ್ನು ಕುರಿತು ಕೈಮುಗಿದು ಕೊಂಡು ಇಂತೆಂದರು.

॥ ಋಷಯ ಊಚುಃ ॥

ಅಸ್ಮಾಕಂ ಸಂಶಯಂ ಛೇತ್ತುಂ ತ್ವಂ ಸಮರ್ಥೋಽಸಿ ಸುವ್ರತ |
ಬ್ರಹ್ಮವಿಷ್ಣುಮಹೇಶಾನಾಮಂತಿಕಂ ವ್ರಜ ಸುವ್ರತ ॥ ೨೦ ॥

ಗತ್ವಾ ತೇಷಾಂ ಸಮೀಪಂ ತು ತಥಾ ದೃಷ್ಟ್ವಾ ತು ವಿಗ್ರಹಾನ್ |
ಶುದ್ಧಸತ್ವಗುಣಂ ತೇಷಾಂ ಯಸ್ಮಿನ್ ಸಂವಿದ್ಯತೇ ಮುನೇ ॥ ೨೧ ॥

ಸ ಏವ ಪೂಜ್ಯೋ ವಿಪ್ರಾಣಾಂ ನೇತರಸ್ತು ಕದಾಚನ |
ಶುದ್ಧಸತ್ವಮಯಃ ಸಾಕ್ಷಾತ್ ಬ್ರಹ್ಮಣ್ಯಃ ಸ ಭವಿಷ್ಯತಿ ॥ ೨೨ ॥

ತೀರ್ಥಪ್ರಸಾದವಾನ್ ಲೋಕೇ ವಿಪ್ರಾಣಾಂ ಸ ಭವಿಷ್ಯತಿ |
ದೇವತಾನಾಂ ಪಿತೄಣಾಂ ಚ ತಸ್ಯೋಚ್ಛಿಷ್ಟಂ ಸುಪಾವನಂ ॥ ೨೩ ॥

ತಸ್ಮಾತ್ ಯಾಹಿ ಮುನಿಶ್ರೇಷ್ಠ ವಿಬುಧಾನಾಂ ನಿವಾಸನಂ |
ಕ್ಷಿಪ್ರಂ ಕುರು ಮುನಿಶ್ರೇಷ್ಠ ಸರ್ವಲೋಕಹಿತಂ ಪ್ರಭೋ ॥ ೨೪ ॥

---

೨೦. ಋಷಿಗಳು ಹೇಳಿದರು-ಎಲೈ ಭೃಗುವೆ! ನೀನು ನಮ್ಮಗಳ ಸಂಶಯವನ್ನು ನಾಶಮಾಡಲು ಸಮರ್ಥನಾಗಿದ್ದೀಯೆ. ಆದ್ದರಿಂದ ನೀನು ಬ್ರಹ್ಮ ವಿಷ್ಣು ಮಹೇಶರ ಬಳಿಗೆ ಹೋಗು.

೨೧-೨೨. ನೀನು ಅವರ ಬಳಿಗೆ ಹೋಗು. ಹೋಗಿ ಅವರ ಆಕಾರಗಳನ್ನು ನೋಡು. ಮತ್ತು ಅವರಲ್ಲಿರುವ ಶುದ್ಧಸತ್ವಗುಣವನ್ನು ನೋಡು ಅದು ಯಾರಲ್ಲಿದೆ ಎಂಬುದನ್ನು ತಿಳಿದು ಬಾ. ಅವನೇ ವಿಪ್ರರಿಗೆ ಪೂಜ್ಯನು. ಮತ್ತೊಬ್ಬನನ್ನು ಪೂಜೆ ಮಾಡಲೇ ಕೂಡದು. ಶುದ್ಧಸತ್ವದಿಂದ ಕೂಡಿದವನೇ ಆ ಬ್ರಹ್ಮನು ಎಂದು ಹೇಳಬೇಕು.

೨೩. ಆ ಶುದ್ಧಸತ್ವಮಯವಾದ ದೇವರೇ ತೀರ್ಥವನ್ನು ಕೊಡುವುದಕ್ಕೂ ಪ್ರಸಾದವನ್ನು ಕೊಡುವುದಕ್ಕೂ ಯೋಗ್ಯನಾಗುತ್ತಾನೆ. ದೇವತೆಗಳಿಗೂ ಪಿತೃಗಳಿಗೂ ಅಂತಹ ಸ್ವಾಮಿಯ ಎಂಜಲೇ ಪವಿತ್ರವಾದುದು.

೨೪. ಆದ್ದರಿಂದ ಎಲೈ ಮುನಿ ಶ್ರೇಷ್ಠನೇ! ನೀನು ಜಾಗ್ರತೆಯಾಗಿ ದೇವಲೋಕಕ್ಕೆ ಹೋಗು. ಎಲೈ ವಿಭುವೇ! ಲೋಕಹಿತವಾದ ಈ ಕೆಲಸವನ್ನು ಜಾಗ್ರತೆಯಾಗಿ ಮಾಡು.

॥ ವಸಿಷ್ಠ ಉವಾಚ ॥

ಏವಮುಕ್ತಸ್ತತಸ್ತೂರ್ಣಂ ಕೈಲಾಸಂ ಮುನಿಸತ್ತಮಃ ।
ಜಗಾಮ ವಾಮದೇವೇನ ಯತ್ರಾಸ್ತೇ ವೃಷಭಧ್ವಜಃ ॥ ೨೫ ॥

ಗೃಹದ್ವಾರಮುಪಾಗಮ್ಯ ಶಂಕರಸ್ಯ ಮಹಾತ್ಮನಃ ।
ಶೂಲಹಸ್ತಂ ಮಹಾರೌದ್ರಂ ನಂದಿಂ ದೃಷ್ಟ್ವಾಬ್ರವೀದ್ದ್ವಿಜಃ ॥ ೨೬ ॥

॥ ಭೃಗುರುವಾಚ ॥

ಸಂಪ್ರಾಪ್ತೋಽಹಂ ಭೃಗುರ್ವಿಪ್ರೋ ಹರಂ ದ್ರಷ್ಟುಂ ಸುರೋತ್ತಮಂ ।
ನಿವೇದಯಸ್ವ ಮಾಂ ಶೀಘ್ರಂ ಶಂಕರಾಯ ಮಹಾತ್ಮನೇ ॥ ೨೭ ॥

॥ ವಸಿಷ್ಠ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ನಂದಿಃ ಸರ್ವಗಣೇಶ್ವರಃ ।
ಉವಾಚ ಪರುಷಂ ವಾಕ್ಯಂ ಮಹರ್ಷಿಮಮಿತೌಜಸಂ ॥ ೨೮ ॥

---

೨೫. ವಸಿಷ್ಠನು ಹೇಳಿದನು-ಆಗ ಆ ಭೃಗುವು ಋಷಿಗಳ ಮಾತನ್ನು ಕೇಳಿ ಕೈಲಾಸಕ್ಕೆ ವಾಮದೇವನೊಡನೆ ಹೋಗಿ ಆ ವೃಷಭಧ್ವಜನನ್ನು ನೋಡಲು ಬಾಗಿಲಿಗೆ ಹೋದನು.

೨೬. ಆ ಕೈಲಾಸದಲ್ಲಿ ಶಂಕರನ ಮನೆಗೆ ಹೋಗಲು ಶೂಲವನ್ನು ಕೈಯ್ಯಲ್ಲಿ ಹಿಡಿದು ಭಯಂಕರನಾಗಿ ಅವನ ಮನೆಯ ಬಾಗಿಲಲ್ಲಿರುವ ನಂದಿಯನ್ನು ನೋಡಿ ಇಂತೆಂದನು.

೨೭. ಭೃಗುವು ಹೇಳಿದನು-ಎಲೈ ನಂದಿಯೆ ! ನಾನು ಭೃಗುವೆಂಬುವನು. ಸುರೋತ್ತಮನಾದ ಹರನನ್ನು ನೋಡಲು ಬಂದಿದ್ದೇನೆ. ಆ ಮಹಾತ್ಮನಾದ ಶಂಕರನಿಗೆ ನಾನು ಬಂದಿರುವುದನ್ನು ಶೀಘ್ರವಾಗಿ ತಿಳಿಸು.

೨೮. ವಸಿಷ್ಠನು ಹೇಳಿದನು-ಸರ್ವಗಣೇಶನಾದ ನಂದಿಯು ಆ ಭೃಗುವಿನ ಮಾತನ್ನು ಕೇಳಿ ಆ ಶಕ್ತನಾದ ಮಹರ್ಷಿಯನ್ನು ಕುರಿತು ಇಂತೆಂದು ಕಠಿಣವಾಗಿ ಹೇಳಿದನು.

॥ ನಂದ್ಯುವಾಚ ॥

ಅಸಾನ್ನಿಧ್ಯಂ ಪ್ರಭೋಸ್ತಸ್ಯ ದೇವ್ಯಾ ಕ್ರೀಡತಿ ಶಂಕರಃ ।
ನಿವರ್ತಸ್ವ ನಿವರ್ತಸ್ವ ಯದಿ ಜೀವಿತುಮಿಚ್ಛಸಿ ॥ ೨೯ ॥

॥ ವಸಿಷ್ಠ ಉವಾಚ ॥

ಏವಂ ನಿರಾಕೃತಸ್ತೇನ ತತ್ರಾತಿಷ್ಠನ್ಮಹಾತಪಾಃ ।
ಬಹೂನಿ ಚ ದಿನಾನ್ಯಸ್ಮಿನ್ ಗೃಹದ್ವಾರೇಽಪಿ ಶಾಂಕರೇ ॥ ೩೦ ॥

॥ ಭೃಗುರುವಾಚ ॥

ನಾರೀಸಂಗಮುಮುಗ್ನೋಽಸೌ ಯುಸ್ಮಾನ್ಮಾಮವಮನ್ಯತೇ ।
ಯೋನಿಲಿಂಗಸ್ವರೂಪಂ ವೈ ತಸ್ಮಾತ್ತಸ್ಯ ಭವಿಷ್ಯತಿ ॥ ೩೧ ॥

ಬ್ರಾಹ್ಮಣಂ ಮಾಂ ನ ಜಾನಾತಿ ತಮಸಾ ಸಮುಪಾಗತಃ ।
ಅಬ್ರಹ್ಮಣ್ಯತ್ವಮಾಪನ್ನೋ ಹ್ಯಪೂಜ್ಯೋಽಸೌ ದ್ವಿಜನ್ಮನಾಂ ॥ ೩೨ ॥

---

೨೯. ನಂದಿಯು ಹೇಳಿದನು–ಎಲೈ ಮುನಿಯೆ ! ಆ ಪ್ರಭುವನ್ನು ನೋಡ ಲಾಗುವುದಿಲ್ಲ. ಈ ಶಂಕರನು ದೇವಿಯೊಡನೆ ಕ್ರಿಡಿಸುತ್ತಿರುವನು. ಹಿಂದಿರುಗು. ಹಿಂದಿರುಗು. ನಿನಗೆ ಬದುಕಿರಲು ಆಸೆಯಿರುವ ಪಕ್ಷದಲ್ಲಿ ಹಿಂದಿರುಗು.

೩೦. ವಸಿಷ್ಠನು ಹೇಳಿದನು– ಆ ನಂದಿಯು ಹೀಗೆ ನಿರಾಕರಿಸಿದರೂ ಮಹಾತಪಸ್ವಿಯಾದ ಆ ಭೃಗುವು ಬಹಳ ದಿನಗಳವರೆಗೂ ಆ ಶಂಕರನ ಮನೆಯ ಬಾಗಿಲಿನಲ್ಲಿಯೇ ಕುಳಿತಿದ್ದನು.

೩೧. ಭೃಗುವು ಹೇಳಿದನು–ಈ ಶಿವನು ಹೆಂಗಸಿನಲ್ಲಿ ಆಸಕ್ತನಾಗಿ ನಾನು ಬಂದಿರುವುದನ್ನು ಗಮನಿಸದೆ ತಿರಸ್ಕರಿಸುತ್ತಿರುವನು. ಅದ್ದರಿಂದ ಇವನಿಗೆ ಯೋನಿ ಮತ್ತು ಲಿಂಗಗಳು ಸೇರಿದ ಶರೀರವೇ ಆಗಲಿ.

೩೨. ಈ ಶಂಕರನು ತಮೋಗುಣದಿಂದ ಕೂಡಿಕೊಂಡು ಇಲ್ಲಿಗೆ ಬಂದಿರುವ ಬ್ರಾಹ್ಮಣನಾದ ನನ್ನನ್ನು ತಿರಸ್ಕರಿಸುತ್ತಲಿದ್ದಾನೆ. ಇವನು ಬ್ರಹ್ಮನ ವಿಷಯ ವನ್ನು ತಿಳಿಯದೆ ಅದರಲ್ಲಿ ಅಸ್ತನಾಗದಿರುವುದರಿಂದ ಇವನು ಬ್ರಾಹ್ಮಣರಿಂದ ಪೂಜೆಯನ್ನು ಹೊಂದದವನಾಗಲಿ.

ತಸ್ಮಾದನ್ನಂ ಜಲಂ ಪುಷ್ಪಂ ತಸ್ಮೈ ದತ್ತಂ ಹವಿಸ್ತಥಾ ।
ನಿರ್ಮಾಲ್ಯಮಸ್ಯ ತತ್ಸರ್ವಂ ಭವಿಷ್ಯತಿ ನ ಸಂಶಯಃ　　॥ ೩೩ ॥

॥ ವಸಿಷ್ಠ ಉವಾಚ ॥

ಏವಂ ಶಪ್ತ್ವಾ ಮಹಾತೇಜಾಃ ಶಂಕರಂ ಲೋಕಪೂಜಿತಂ ।
ಉವಾಚ ಗಣಮುತ್ಯುಗ್ರಂ ನಂದಿಂ ಶೂಲಧರಂ ನೃಪ　　॥ ೩೪ ॥

॥ ಭೃಗುರುವಾಚ ॥

ರುದ್ರಭಕ್ತಾಶ್ಚ ಯೇ ಲೋಕೇ ಭಸ್ಮಲಿಂಗಾಸ್ಥಿಧಾರಿಣಃ ।
ತೇ ಪಾಷಂಡತ್ವಮಾಪನ್ನಾ ವೇದಬಾಹ್ಯಾ ಭವಂತು ವೈ　　॥ ೩೫ ॥

॥ ವಸಿಷ್ಠ ಉವಾಚ ॥

ಏವಂ ಶಪ್ತ್ವಾ ಮುನಿಸ್ತತ್ರ ರುದ್ರಂ ತ್ರಿಪುರಘಾತಕಂ ।
ಜಗಾಮ ಬ್ರಹ್ಮಲೋಕಂ ವೈ ಸರ್ವಲೋಕನಮಸ್ಕೃತಂ　　॥ ೩೬ ॥

---

೩೩. ಅವನು ಪೂಜೆಗೆ ಯೋಗ್ಯನಲ್ಲದಿರುವುದರಿಂದ ಅವನಿಗೆ ಸಮರ್ಪಿಸಿದ ಅನ್ನ, ನೀರು, ಹೂವು, ಎಲ್ಲವೂ ನಿರ್ಮಾಲ್ಯವಾಗಲಿ. (ಎಂದರೆ ಸ್ವೀಕರಿಸುವುದಕ್ಕೆ ಅಯೋಗ್ಯವಾಗಲಿ.) ಸಂಶಯವಿಲ್ಲ.

೩೪. ವಸಿಷ್ಠನು ಹೇಳಿದನು–ಭೃಗುವು ಲೋಕ ಪೂಜಿತನಾದ ಶಂಕರನಿಗೆ ಈ ರೀತಿಯಾಗಿ ಶಾಪವನ್ನು ಕೊಟ್ಟು ಆ ಉಗ್ರನೂ ಶೂಲಧರನೂ ಆದ ನಂದಿಯನ್ನು ಕುರಿತು ಇಂತೆಂದನು.

೩೫. ಭೃಗುವು ಹೇಳಿದನು–ಲೋಕದಲ್ಲಿ ಯಾರು ರುದ್ರ ಭಕ್ತರಾಗಿ ಭಸ್ಮ ಲಿಂಗ ಅಸ್ಥಿಗಳನ್ನು ಧರಿಸಿರುವರೋ ಅವರೆಲ್ಲರೂ ಪಾಷಂಡಿಗಳಾಗಿ ವೇದ ಬಾಹ್ಯರಾಗಲಿ.

೩೬. ವಸಿಷ್ಠನು ಹೇಳಿದನು–ಭೃಗುವು ತ್ರಿಪುರಾರಿಯಾದ ಶಂಕರನನ್ನು ಹೀಗೆ ಶಪಿಸಿ ಅನಂತರ ಸರ್ವಲೋಕ ನಮಸ್ಕೃತವಾದ ಬ್ರಹ್ಮಲೋಕವನ್ನು ಕುರಿತು ಹೋದನು.

ತತ್ರ ದೇವೈಸ್ಸಹಾಸೀನಂ ಬ್ರಹ್ಮಾಣಂ ಪರಮೇಷ್ಠಿನಂ ।
ದೃಷ್ಟ್ವಾ ಪ್ರಾಂಜಲಿನಾ ದೇವಂ ಪ್ರಣನಾಮ ಮಹಾಮತಿಃ ॥ ೩೭ ॥

ಪ್ರಣಮ್ಯ ಪುರತಸ್ತಸ್ಯ ತೂಷ್ಣೀಮಾಸ ಮಹಾತಪಾಃ ।
ತಂ ದೃಷ್ಟ್ವಾ ಮುನಿಶಾರ್ದೂಲಂ ರಜೋಗುಣಸಮಾವೃತಃ ॥ ೩೮ ॥

ನಾರ್ಚಯಾಮಾಸ ಧಾತಾಸೌ ಮಹರ್ಷಿಂ ಸಮುಪಾಗತಂ ।
ಪ್ರತ್ಯುತ್ಥಾನಂ ಪ್ರಿಯಂ ವಾಕ್ಯಂ ನ ಕೃತಂ ತಸ್ಯ ವೇಧಸಾ ॥ ೩೯ ॥

ಐಶ್ವರ್ಯೇಣೈವ ಮಹತಾ ತಸ್ಥೌ ತತ್ರಾಂಬುಜಾಸನಃ ।
ತಂ ದೃಷ್ಟ್ವಾ ರಜಸೋದ್ರಿಕ್ತಂ ಮಹರ್ಷಿಃ ಪಂಕಜಾಸನಂ ।
ವ್ಯಾಜಹಾರ ಮಹಾತೇಜಾ ವಾಕ್ಯಂ ಲೋಕಪಿತಾಮಹಂ ॥ ೪೦ ॥

---

೩೭. ಆ ಬ್ರಹ್ಮಲೋಕದಲ್ಲಿ ದೇವತೆಗಳೊಡನೆ ಕುಳಿತಿರುವ ಅತ್ಯುಚ್ಚನಾದ ಬ್ರಹ್ಮನನ್ನು ನೋಡಿ ಕೈಮುಗಿದುಕೊಂಡು ನಮಸ್ಕರಿಸಿದನು.

೩೮–೩೯. ಆ ಬ್ರಹ್ಮನ ಎದುರಿಗೆ ನಮಸ್ಕರಿಸಿ ಆ ಮಹಾತಪಸ್ವಿಯಾದ ಭೃಗುವು ಸುಮ್ಮನೆ ನಿಂತುಕೊಂಡನು. ರಜೋಗುಣದಿಂದ ಕೂಡಿದ ಆ ಬ್ರಹ್ಮನು ಆ ಋಷಿಶ್ರೇಷ್ಠನಾದ ಭೃಗುವನ್ನು ನೋಡಿ ಕರೆದು ಪೂಜಿಸಲಿಲ್ಲ. ಗೌರವಿಸಲಿಲ್ಲ. ಎದುರುಗೊಳ್ಳಲಿಲ್ಲ. ಪ್ರಿಯವಾದ ಮಾತನ್ನೂ ಆಡಲಿಲ್ಲ. ಯಾವರೀತಿಯಲ್ಲಾಗಲೀ ಉಪಚರಿಸಲಿಲ್ಲ.

೪೦. ಅವನು ಬಹುವಾದ ಐಶ್ವರ್ಯದಿಂದಲೂ ಆಧಿಕ್ಯದಿಂದಲೂ ಕೊಬ್ಬಿದ್ದನು. ಆದ್ದರಿಂದ ಆ ರೀತಿಯಾಗಿ ಹೆಮ್ಮೆಯಿಂದ ಕುಳಿತಿದ್ದನು. ಆ ಕಮಲಾಸನನಾದ ಬ್ರಹ್ಮನು ರಜೋಗುಣದಿಂದ ಕೂಡಿರುವುದನ್ನು ನೋಡಿ ಮಹರ್ಷಿಯಾದ ಭೃಗುವು ಅವನನ್ನು ಕುರಿತು ಇಂತೆಂದನು.

|| ಭೃಗುರುವಾಚ ||

ರಜಸಾ ಮಹತೋದ್ರಿಕ್ತೋ ಯಸ್ಮಾನ್ಮಾಮವಮನ್ಯಸೇ ।
ತಸ್ಮಾತ್ತ್ವಂ ಸರ್ವಲೋಕಾನಾಮಪೂಜ್ಯತ್ವಂ ಸಮಾಪ್ನುಹಿ || ೪೧ ||

|| ವಸಿಷ್ಠ ಉವಾಚ ||

ಏವಂ ಶಪ್ತ್ವಾ ಮಹಾತ್ಮಾನಂ ಬ್ರಹ್ಮಾಣಂ ಲೋಕಪೂಜಿತಂ ।
ಜಗಾಮ ಸಹಸಾ ವಿಪ್ರೋ ಭಗವನ್ಮಂದಿರಂ ಭೃಗುಃ || ೪೨ ||

ಪ್ರವಿಶ್ಯ ವೈಷ್ಣವಂ ಲೋಕಂ ಕ್ಷಿರಾಬ್ಧೇರುತ್ತರೇ ತಟೇ ।
ತತ್ರ ಸ್ಥಿತೈರ್ಮಹಾಭಾಗೈಃ ಪೂಜ್ಯಮಾನೋ ಯಥಾರ್ಹತಃ || ೪೩ ||

ತತ್ರಾನಿವಾರ್ಯಮಾಣಸ್ತು ನಿವಿಷ್ಟೋಂತಃಪುರಂ ದ್ವಿಜಃ ।
ಪ್ರವಿಶ್ಯ ತಸ್ಮಿನ್ ವಿಮಲೇ ವಿಮಾನೇ ರವಿಸನ್ನಿಭೇ || ೪೪ ||

---

೪೧. ಭೃಗುವು ಹೇಳಿದನು–ಎಲೈ ಬ್ರಹ್ಮನೆ ! ನೀನು ಬಹುವಾದ ರಜೋಗುಣದಿಂದ ಕೂಡಿಕೊಂಡು ನನ್ನನ್ನು ತಿರಸ್ಕರಿಸುತ್ತಿದ್ದೀಯೆ. ಆದ್ದರಿಂದ ನೀನು ಲೋಕದಲ್ಲಿ ಒಬ್ಬರಿಂದಲೂ ಪೂಜೆಯನ್ನು ಹೊಂದಬೇಡ.

೪೨. ವಸಿಷ್ಠನು ಹೇಳಿದನು–ಲೋಕಪೂಜಿತನೂ ಮಹಾತ್ಮನೂ ಆದ ಬ್ರಹ್ಮನನ್ನು ಭೃಗುವು ಹೀಗೆ ಶಪಿಸಿ ಅಲ್ಲಿಂದ ಹೊರಟು ಹರಿಯ ಮನೆಗೆ ಹೋದನು.

೪೩–೪೫. ಕ್ಷೀರಸಮುದ್ರದ ಉತ್ತರದಡದಲ್ಲಿರುವ ವೈಷ್ಣವಲೋಕಕ್ಕೆ ಹೋಗಿ ಅಲ್ಲಲ್ಲಿರುವ ಮಹಾತ್ಮರಿಂದ ಪೂಜೆಯನ್ನು ಹೊಂದುತ್ತಾ ಹೊರಟನು. ಒಬ್ಬರೂ ತಡೆಯಲೇ ಇಲ್ಲ. ಕೊನೆಗೆ ವಿಷ್ಣುವಿನ ಅಂತಃಪುರವನ್ನು ಹೊಕ್ಕನು. ಆ ಭೃಗುವು ಪ್ರಕಾಶಮಾನವಾದ ನಾಗಪರ್ಯಂಕದಲ್ಲಿ ಮಲಗಿರುವ

ಶಯಾನಂ ನಾಗಪರ್ಯಂಕೇ ದದರ್ಶ ಕಮಲಾಪತಿಂ ।
ಲಕ್ಷ್ಮೀಕರಸರೋಜಾಭ್ಯಾಂ ಮೃಜ್ಯಮಾನಪದದ್ವಯಂ ॥ ೪೫ ॥

ತಂ ದೃಷ್ಟ್ವಾ ಮುನಿಶಾರ್ದೂಲೋ ಭೃಗುಃ ಕೋಪಸಮನ್ವಿತಃ ।
ಸವ್ಯಂ ಪಾದಂ ಪ್ರಚಿಕ್ಷೇಪ ವಿಷ್ಣೋರ್ವಕ್ಷಸಿ ಶೋಭಿತೇ ॥ ೪೬ ॥

ತೂರ್ಣಮುತ್ಥಾಯ ಭಗವಾನ್ ಧನ್ಯೋಽಸ್ಮೀತಿ ವದನ್ ಮುದಾ ।
ಹಸ್ತಾಭ್ಯಾಂ ಚರಣಂ ತಸ್ಯ ಪೀಡಯಾಮಾಸ ಹರ್ಷಿತಃ ।
ಶನೈರ್ಮೃದಿತ್ವಾ ತತ್ಪಾದಂ ಮಧುರಂ ವಾಕ್ಯಮಬ್ರವೀತ್ ॥ ೪೭ ॥

॥ ವಿಷ್ಣುರುವಾಚ ॥

ಧನ್ಯೋಽಸ್ಮ್ಯದ್ಯೈವ ವಿಪ್ರರ್ಷೇ ಕೃತಕೃತ್ಯೋಽಸ್ಮಿ ಸರ್ವದಾ ।
ತ್ವತ್ಪಾದಸ್ಪರ್ಶನಾದ್ದೇಹೇ ಮಂಗಳಂ ಮೇ ಭವಿಷ್ಯತಿ ॥ ೪೮ ॥

---

ಶ್ರೀಲಕ್ಷ್ಮೀಪತಿಯನ್ನು ನೋಡಿದನು. ಲಕ್ಷ್ಮಿಯು ಆ ಸ್ವಾಮಿಯ ಪಾದಗಳನ್ನು ಅಮುಕುತ್ತಿದ್ದಳು.

೪೬. ಹೀಗೆ ಮಲಗಿಕೊಂಡು ಹೆಂಡತಿಯ ಕೈಯ್ಯಲ್ಲಿ ಕಾಲನ್ನು ಒತ್ತಿಸಿ ಕೊಳ್ಳುತ್ತಿರುವ ವಿಷ್ಣುವನ್ನು ನೋಡಿ ಭೃಗುವಿಗೆ ಕೋಪಬಂದಿತು. ಒಡನೆಯೇ ಎಡಗಾಲನ್ನು ಮೇಲಕ್ಕೆ ಎತ್ತಿಕೊಂಡು ಆ ವಿಷ್ಣುವಿನ ಮನೋಹರವಾದ ಎದೆಗೆ ಒದ್ದನು.

೪೭. ಒಡನೆಯೇ ವಿಷ್ಣುವು ಮೇಲಕ್ಕೆದ್ದು ಧನ್ಯನಾದೆನೆಂದು ಸಂತೋಷ ದಿಂದ ಹೇಳುತ್ತಾ ಅವನ ಕಾಲನ್ನು ಕೈಗಳಿಂದ ಹಿಡಿದುಕೊಂಡು ಒತ್ತಲು ಮೊದಲುಮಾಡಿದನು. ಮತ್ತು ಆ ಕಾಲುಗಳನ್ನು ಅಮುಕುತ್ತಾ ಮೆಲ್ಲಗೆ ಇಂತೆಂದನು.

೪೮. ವಿಷ್ಣುವು ಹೇಳಿದನು–ಎಲೈ ಬ್ರಹ್ಮರ್ಷಿಯೆ ! ಈಗ ಧನ್ಯನಾದೆನು. ಕೃತಕೃತ್ಯನಾದೆನು. ನಿನ್ನ ಪಾದದ ಸ್ಪರ್ಶವು ನನ್ನ ದೇಹಕ್ಕೆ ಆದುದರಿಂದ ನನಗೆ ಮಂಗಳವು ಸಂದೇಹವಿಲ್ಲದೆ ಉಂಟಾಗುತ್ತದೆ.

ಸಮಸ್ತಸಂಪತ್ಸಮವಾಪ್ತಿಹೇತವಃ ।
ಸಮುತ್ಥಿತಾಪತ್ಕುಲಧೂಮಕೇತವಃ
ಅಪಾರಸಂಸಾರಸಮುದ್ರಸೇತವಃ ।
ಪುನಂತು ಮಾಂ ಬ್ರಾಹ್ಮಣಪಾದಪಾಂಸವಃ ॥ ೪೯ ॥

ವಿಪ್ರಪಾದರಜೋ ಯಸ್ಯ ದೇಹೇ ತಿಷ್ಠತಿ ಸರ್ವದಾ ।
ಗಂಗಾದಿಸರ್ವತೀರ್ಥಾನಿ ತಸ್ಯ ತಿಷ್ಠಂತ್ಯಸಂಶಯಂ ॥ ೫೦ ॥

॥ ವಸಿಷ್ಠ ಉವಾಚ ॥

ಇತ್ಯುಕ್ತ್ವಾ ಸಹಸೋತ್ಥಾಯ ದೇವ್ಯಾ ಸಾರ್ಧಂ ಜನಾರ್ದನಃ ।
ಭಕ್ತ್ಯಾ ಸಮರ್ಚಯಾಮಾಸ ದಿವ್ಯಸ್ರಕ್‌ಚಂದನಾದಿಭಿಃ ॥ ೫೧ ॥

---

೪೯. ಬ್ರಾಹ್ಮಣರ ಪಾದಧೂಳಿಗಳು ಸಮಸ್ತವಾದ ಸಂಪತ್ತುಗಳನ್ನೂ ಹೊಂದಿಸುವುದಕ್ಕೆ ಕಾರಣಗಳು. ಬರತಕ್ಕ ಆಪತ್ತುಗಳ ಸಮೂಹವನ್ನೇ ನಾಶಮಾಡುವುದರಲ್ಲಿ ಬೆಂಕಿಯಂತಿರತಕ್ಕವು. ಅಗಾಧವಾಗಿಯೂ ಬಹುವಾಗಿಯೂ ಇರತಕ್ಕ ಈ ಸಂಸಾರವೆಂಬ ಸಮುದ್ರವನ್ನು ದಾಟುವುದಕ್ಕೆ ಸೇತುವೆಯಂತೆ ಇರತಕ್ಕುವುಗಳು. ಇಂತಹ ಬ್ರಾಹ್ಮಣ ಪಾದಧೂಳಿಗಳು ನನ್ನನ್ನು ಪವಿತ್ರವನ್ನಾಗಿ ಮಾಡಲಿ.

೫೦. ಬ್ರಾಹ್ಮಣನ ಪಾದಧೂಳಿಗಳು ಯಾವಾಗಲೂ ಯಾವನಲ್ಲಿರುತ್ತದೆಯೋ ಅವನ ದೇಹದಲ್ಲಿ ಗಂಗಾದಿಸರ್ವತೀರ್ಥಗಳೂ ವಾಸಿಸುತ್ತವೆ. ಸಂಶಯವೇ ಇಲ್ಲ.

೫೧. ವಸಿಷ್ಠನು ಹೇಳಿದನು–ಹೀಗೆಂದು ಹೇಳುತ್ತಾ ಆ ಸ್ವಾಮಿಯು ಬೇಗನೆ ಮೇಲಕ್ಕೆದ್ದು ಹೂವು ಗಂಧ ನೀರು ಮುಂತಾದುವನ್ನು ತಂದು ಲಕ್ಷ್ಮಿಯೊಡನೆ ಪೂಜಿಸಿದನು.

ತಂ ದೃಷ್ಟ್ವಾ ಮುನಿಶಾರ್ದೂಲೋ ಹರ್ಷಪೂರ್ಣಾಶ್ರುಲೋಚನಃ ।
ಉತ್ಥಾಯಾಸನಮುಖ್ಯಾತ್ತಂ ಪ್ರಣನಾಮ ದಯಾನಿಧಿಂ
ಕೃತಾಂಜಲಿಪುಟೋ ಭೂತ್ವಾ ಹರ್ಷಾತ್ಪ್ರಾಹ ಮಹಾತಪಾಃ ॥ ೫೨ ॥

॥ ಭೃಗುರುವಾಚ ॥

ಅಹೋ ರೂಪಮಹೋ ಶಾನ್ತಿಃ ಅಹೋ ಜ್ಞಾನಮಹೋ ದಯಾ ।
ಅಹೋ ಸುನಿರ್ಮಲಾ ಕ್ಷಾನ್ತಿಃ ಅಹೋ ಸತ್ವಗುಣೋ ಹರೇಃ ॥ ೫೩ ॥

ನೈಸರ್ಗಿಕಂ ಶುಭಂ ಸತ್ವಂ ತಥೈವ ಗುಣವಾರಿಧೇಃ ।
ನಾನ್ಯೇಷಾಂ ವಿದ್ಯತೇ ಕಿಂಚಿತ್ ಸರ್ವೇಷಾಂ ತ್ರಿದಿವೌಕಸಾಂ ॥ ೫೪ ॥

ಬ್ರಹ್ಮಣ್ಯಶ್ಚ ಶರಣ್ಯಶ್ಚ ತ್ವಮೇವ ಪುರುಷೋತ್ತಮಃ ।
ಬ್ರಾಹ್ಮಣಾನಾಂ ತ್ವಮೇವೇಶೋ ನಾನ್ಯಃ ಪೂಜ್ಯಃ ಸುರಃ ಕ್ವಚಿತ್ ॥ ೫೫ ॥

---

೫೨. ವಿಷ್ಣುವು ಹೀಗೆ ಉಪಚರಿಸುವುದನ್ನು ಆ ಬ್ರಹ್ಮರ್ಷಿಯಾದ ಭೃಗುವು ನೋಡಿ ಸಂತೋಷದಿಂದ ಕಣ್ಣಿನಲ್ಲಿ ನೀರನ್ನು ತಂದುಕೊಂಡು ತಾನು ಕುಳಿತಿದ್ದ ಪೀಠದಿಂದ ಎದ್ದು ದಯಾನಿಧಿಯಾದ ವಿಷ್ಣುವಿಗೆ ನಮಸ್ಕರಿಸಿದನು. ಮತ್ತು ಕೈಮುಗಿದುಕೊಂಡು ಇಂತೆಂದನು.

೫೩. ಭೃಗುವು ಹೇಳಿದನು—ಈ ಹರಿಯ ರೂಪವೂ ಶಾಂತಿಯೂ ಜ್ಞಾನವೂ ದಯೆಯೂ ಕ್ಷಮಾಗುಣವೂ ಸತ್ವಗುಣವೂ ಬಹು ಅದ್ಭುತವಾದುವು. ಆಶ್ಚರ್ಯವಾಗಿವೆ.

೫೪. ಈ ಉತ್ತಮಗುಣಗಳಿಗೆ ಸಮುದ್ರದಂತಿರುವ ಈ ಸ್ವಾಮಿಯ ಸತ್ವಗುಣವು ಶುಭವಾದುದು. ಸ್ವಾಭಾವಿಕವಾದುದು, ಇವು ಮತ್ತಾವ ದೇವತೆಗಳಲ್ಲಾಗಲೀ ಸ್ವಲ್ಪವೂ ಇರುವುದಿಲ್ಲ.

೫೫. ನೀನೇ ಬ್ರಹ್ಮವನ್ನು ಬಲ್ಲವನು. ಲೋಕರಕ್ಷಕನು. ಪುರುಷೋತ್ತಮನು ಬ್ರಹ್ಮನನ್ನು ಬಲ್ಲ ಬ್ರಾಹ್ಮಣರಿಗೆ ನೀನೇ ಒಡೆಯನು. ಮತ್ತಾವ ದೇವತೆಯೂ ಬ್ರಾಹ್ಮಣರಿಗೆ ಪೂಜ್ಯನಲ್ಲ.

**ಯೇಽರ್ಚಯನ್ತಿ ಸುರಾನನ್ಯಾನ್ ತ್ವಾಂ ವಿನಾ ಪುರುಷೋತ್ತಮ ।**
**ತೇ ಪಾಷಂಡತ್ವಮಾಪನ್ನಾಃ ಸರ್ವಲೋಕವಿಗರ್ಹಿತಾಃ ॥ ೫೬ ॥**

**ವಿಪ್ರಾಣಾಂ ವೇದವಿದುಷಾಂ ತ್ವಮೇವೇಜ್ಯೋ ಜನಾರ್ದನಃ ।**
**ನಾನ್ಯಃ ಕಶ್ಚಿತ್ ಸುರಾಣಾಂ ಚ ಪೂಜನೀಯಃ ಕದಾಚನ ॥ ೫೭ ॥**

**ಅನರ್ಚ್ಯಾ ಬ್ರಹ್ಮರುದ್ರಾದ್ಯಾ ರಜಸ್ತಮೋವಿಮಿಶ್ರಿತಾಃ ।**
**ತ್ವಂ ಶುದ್ಧಸತ್ವಗುಣವಾನ್ ಪೂಜನೀಯೋಽಗ್ರಜನ್ಮನಾಂ ॥ ೫೮ ॥**

**ತ್ವತ್ಪಾದಸಲಿಲಂ ಸೇವ್ಯಂ ಪಿತೄಣಾಂ ಚ ದಿವೌಕಸಾಂ ।**
**ಸರ್ವೇಷಾಂ ಭೂಸುರಾಣಾಂ ಚ ಮುಕ್ತಿದಂ ಕಲ್ಮಷಾಪಹಂ ॥ ೫೯ ॥**

---

೫೬. ಎಲೈ ಪುರುಷೋತ್ತಮನೆ! ಯಾರು ಪುರುಷೋತ್ತಮನಾದ ನಿನ್ನನ್ನು ಬಿಟ್ಟು ಬೇರೆ ದೇವತೆಗಳನ್ನು ಪೂಜಿಸುವರೋ ಅವರು ಪಾಷಂಡಿಗಳಾಗಿ ಎಲ್ಲರ ನಿಂದೆಗೂ ಪಾತ್ರರಾಗುವರು.

೫೭. ಜನಾರ್ದನನಾದ ನಿನ್ನನ್ನು ವೇದವಾದಿಗಳಾದ ವಿಪ್ರರು ಪೂಜಿಸಬೇಕೇ ಹೊರತು ದೇವತೆಗಳಲ್ಲಿ ಮತ್ತಾರನ್ನೂ ಪೂಜಿಸಬಾರದು.

೫೮. ರಜೋಗುಣಗಳಿಂದ ಮಿಶ್ರವಾಗಿರುವ ಆ ಬ್ರಹ್ಮರುದ್ರಾದಿ ದೇವತೆಗಳು ಪೂಜೆಗೆ ಯೋಗ್ಯರು. ನೀನಾದರೋ ಶುದ್ಧವಾದ ಸತ್ವಗುಣದಿಂದಲೇ ಕೂಡಿಕೊಂಡಿದ್ದೀಯೆ. ಅದ್ದರಿಂದ ದ್ವಿಜರಿಗೆ ಪೂಜಿಸಲು ನೀನು ಅರ್ಹನಾಗಿದ್ದೀಯೆ.

೫೯. ನಿನ್ನ ಪಾದೋದಕವು ಪಿತೃಗಳಿಗೂ ದೇವತೆಗಳಿಗೂ ಸೇವನೆ ಮಾಡುವುದಕ್ಕೆ ಯೋಗ್ಯವು. ಎಲ್ಲಾ ಬ್ರಾಹ್ಮಣರೂ ನಿನ್ನ ಪಾದೋದಕವನ್ನು ಸೇವಿಸಬೇಕು. ಈ ನಿನ್ನ ಪಾದೋದಕವು ಪಾಪವನ್ನು ನಾಶಮಾಡುತ್ತದೆ. ಮುಕ್ತಿಯನ್ನು ಕೊಡುತ್ತದೆ.

ತ್ವದ್ಭುಕ್ತೋಚ್ಛಿಷ್ಟಶೇಷಂ ವೈ ಪಿತೄಣಾಂ ಚ ದಿವೌಕಸಾಂ |
ಭೂಸುರಾಣಾಂ ಚ ಸೇವ್ಯಂ ಸ್ಯಾತ್ ನಾನ್ಯೇಷಾಂ ತು ಕದಾಚನ || ೬೦ ||

ಇತರೇಷಾಂ ತು ದೇವನಾಮನ್ನಂ ಪುಷ್ಪಂ ಜಲಂ ತಥಾ |
ಅಸ್ಪೃಶ್ಯಂ ತು ಭವೇತ್ಸರ್ವಂ ನಿರ್ಮಾಲ್ಯಂ ಸುರಯಾ ಸಮಂ || ೬೧ ||

ತಸ್ಮಾದ್ವೈ ಬ್ರಾಹ್ಮಣೋ ನಿತ್ಯಂ ಪೂಜಯಿತ್ವಾ ಸನಾತನಂ |
ತ್ವತ್ತೀರ್ಥಂ ಭುಕ್ತಮನ್ನಂ ಚ ಭಜೇತ್ಯೈವಾನಿಶಂ ಬುಧಃ || ೬೨ ||

ನಾನ್ಯಂ ದೇವಂ ತು ವೀಕ್ಷೇತ ಬ್ರಾಹ್ಮಣೋ ನ ಚ ಪೂಜಯೇತ್ |
ನಾನ್ಯಪ್ರಸಾದಂ ಭುಂಜೀತ ನಾನ್ಯಸ್ಯಾಯತನಂ ವಿಶೇತ್ || ೬೩ ||

---

೬೦. ನೀನು ಊಟಮಾಡಿ ಮಿಕ್ಕುದು ಪಿತೃಗಳಿಗೂ ದೇವತೆಗಳಿಗೂ ಬ್ರಾಹ್ಮಣರಿಗೂ ಸೇವಿಸಲು ಯೋಗ್ಯವಾದುದು. ಉಳಿದವರು ತಿಂದು ಮಿಕ್ಕುದನ್ನು ಸೇವಿಸಲೇ ಬಾರದು.

೬೧. ನಿನ್ನ ಹೊರತಾಗಿ ಉಳಿದ ದೇವತೆಗಳು ಅನುಭವಿಸಿದ ಅನ್ನ ನೀರು ಹೂವುಗಳೆಲ್ಲವೂ ಮುಟ್ಟುವುದಕ್ಕೂ ಅನರ್ಹವಾದುವು. ಅವು ನಿರ್ಮಾಲ್ಯವು. ಸುರೆಗೆ ಸಮವಾದುವು.

೬೨. ಆದ್ದರಿಂದ ಬ್ರಾಹ್ಮಣರಾದವರು ಸನಾತನನಾದ ನಿನ್ನನ್ನು ನಿತ್ಯವೂ ಪೂಜಿಸಿ ನಿನ್ನ ತೀರ್ಥವನ್ನೂ ನೀನು ತಿಂದು ಮಿಕ್ಕ ಅನ್ನವನ್ನೂ ಯಾವಾಗಲೂ ಸೇವಿಸಬೇಕು.

೬೩. ಬ್ರಾಹ್ಮಣನಾದವನು ಮತ್ತೊಂದು ದೇವರನ್ನು ನೋಡಬಾರದು. ಪೂಜಿಸಲೂ ಕೂಡದು. ಬೇರೇ ದೇವರ ಪ್ರಸಾದವನ್ನು ತಿನ್ನಲೇಕೂಡದು. ಬೇರೆ ದೇವರ ದೇವಸ್ಥಾನಕ್ಕೆ ಹೋಗಲೇ ಬಾರದು.

ನ ದದಾತಿ ಹಿ ಯೋ ವಿಪ್ರಃ ಪಿತೄಣಾಂ ಶ್ರಾದ್ಧಕರ್ಮಣೀ ।
ತದ್ಭುಕ್ತಮನ್ನಂ ತೀರ್ಥಂ ಚ ತತ್ಸರ್ವಂ ನಿಷ್ಫಲಂ ಭವೇತ್ ॥ ೬೪ ॥

ಕಲ್ಪಕೋಟಿಸಹಸ್ರಾಣಿ ಕಲ್ಪಕೋಟಿಶತಾನಿ ಚ
ಪತಂತಿ ಪಿತರಸ್ತಸ್ಯ ನರಕೇ ಪೂಯಶೋಣಿತೇ ॥ ೬೫ ॥

ನಿವೇದಿತಂ ತವ ವಿಭೋ ಯೋ ಜುಹೋತಿ ದದಾತಿ ವಾ ।
ದೇವತಾನಾಂ ಪಿತೄಣಾಂ ಚ ತೃಪ್ತಿಮಾನನ್ತ್ಯಮಶ್ನುತೇ ॥ ೬೬ ॥

ತಸ್ಮಾತ್ತ್ವಮೇವ ವಿಪ್ರಾಣಾಂ ಪೂಜ್ಯೋ ನಾನ್ಯೋಽಸ್ತಿ ಕಶ್ಚನ ।
ಮೋಹಾದ್ಯಃ ಪೂಜಯೇದನ್ಯಾನ್ ಸ ಪಾಷಂಡೀ ಭವಿಷ್ಯತಿ ॥ ೬೭ ॥

---

೬೪. ಯಾವನು ತನ್ನ ಪಿತೃಗಳ ಶ್ರಾದ್ಧದಲ್ಲಿ ವಿಷ್ಣುವು ತಿಂದು ಮಿಕ್ಕ ಹವಿಸ್ಸನ್ನೂ ತೀರ್ಥವನ್ನೂ ಕೊಡುವುದಿಲ್ಲವೋ ಅವನು ಮಾಡಿದ ಶ್ರಾದ್ಧದಲ್ಲಿ ಬ್ರಾಹ್ಮಣರ ಭೋಜನವೂ ಪಾನಗಳೂ ಒಟ್ಟಿನಲ್ಲಿ ಅವನು ದಾನಮಾಡಿದುದೆಲ್ಲವೂ ಫಲವಿಲ್ಲದೇನೇ ಹೋಗುತ್ತವೆ.

೬೫. ಅವನ ಪಿತೃಗಳೂ ಕೂಡ ರಕ್ತ ಕೀವುಗಳಿಂದ ಕೂಡಿದ ನರಕದಲ್ಲಿ ಸಾವಿರದ ನೂರುಕೋಟಿ ಕಲ್ಪಗಳವರೆಗೂ ಬೀಳುತ್ತಾರೆ.

೬೬. ಎಲೈ ವಿಷ್ಣುವೆ ! ನಿನಗೆ ಸಮರ್ಪಿಸಿದುದನ್ನು ದಾನಮಾಡಿದರೂ ಹೋಮಮಾಡಿದರೂ ಅದು ದೇವತೆಗಳಿಗೂ ಪಿತೃಗಳಿಗೂ ಅನಂತವಾದ ತೃಪ್ತಿಯನ್ನು ಉಂಟುಮಾಡುತ್ತದೆ.

೬೭. ಆದ್ದರಿಂದ ನಿನ್ನನ್ನೇ ವಿಪ್ರರಾದವರು ಪೂಜಿಸಬೇಕು. ಆ ವಿಪ್ರರಿಗೆ ಪೂಜೆಗೆ ಅರ್ಹನಾದವನು ಮತ್ತೊಬ್ಬನಿಲ್ಲ. ಯಾವನಾದರೂ ಮೋಹದಿಂದ ಬೇರೆಯ ದೇವರನ್ನು ಪೂಜಿಸಿದರೆ ಅವನು ಪಾಷಂಡಿಯಾಗುವನು.

ತ್ವಂ ಹಿ ನಾರಾಯಣಃ ಶ್ರೀಮಾನ್ ವಾಸುದೇವಃ ಸನಾತನಃ ।
ವಿಷ್ಣುಸ್ಸರ್ವಗತೋ ನಿತ್ಯಃ ಪರಮಾತ್ಮಾ ಮಹೇಶ್ವರಃ ॥ ೬೮ ॥

ತ್ವಮೇವ ಸೇವ್ಯೋ ವಿಪ್ರಾಣಾಂ ಬ್ರಹ್ಮಣ್ಯಃ ಶುದ್ಧಸತ್ವವಾನ್ ।
ಪೂಜ್ಯತ್ವಾದ್ಬ್ರಾಹ್ಮಣಾನಾಂ ವೈ ಶುದ್ಧಸತ್ವಗುಣಾದಪಿ ॥ ೬೯ ॥

ಸರ್ವೇಷಾಮೇವ ದೇವಾನಾಂ ಬ್ರಾಹ್ಮಣತ್ವಮವಾಪ್ನುಹಿ ।
ತ್ವಾಮೇವ ಹಿ ಸದಾ ವಿಪ್ರಾ ಭಜಂತಿ ಪುರುಷೋತ್ತಮಂ ॥ ೭೦ ॥

ಬ್ರಾಹ್ಮಣಾಸ್ತೇ ಬಭೂವುಸ್ತು ನಾನ್ಯಾಸ್ತತ್ರ ನ ಸಂಶಯಃ ।
ಬ್ರಹ್ಮಣ್ಯೋ ದೇವಕೀಪುತ್ರೋ ಬ್ರಹ್ಮಣ್ಯೋ ಮಧುಸೂದನಃ ॥ ೭೧ ॥

ಬ್ರಹ್ಮಣ್ಯಃ ಪುಂಡರೀಕಾಕ್ಷೋ ಬ್ರಹ್ಮಣ್ಯೋ ವಿಷ್ಣುರವ್ಯಯಃ ।
ಬ್ರಹ್ಮಣ್ಯೋ ಭಗವಾನ್ ಕೃಷ್ಣೋ ವಾಸುದೇವೋಽಚ್ಯುತೋ ಹರಿಃ ॥ ೭೨ ॥

---

೬೮. ನೀನೇ ಶ್ರೀಮಂತನಾದ ನಾರಾಯಣನು. ಸನಾತನನು. ವಾಸುದೇವನು. ವಿಷ್ಣುವು. ಎಲ್ಲರಲ್ಲಿಯೂ ಇರತಕ್ಕವನು. ಪರಮಾತ್ಮನು. ಮಹೇಶ್ವರನು.

೬೯-೭೦. ಬ್ರಾಹ್ಮಣರಿಗೆ ನೀನೇ ಸೇವ್ಯನು. ಬ್ರಹ್ಮನನ್ನು ಬಲ್ಲವನು. ಶುದ್ಧಸತ್ವರೂಪನು. ನೀನು ಬ್ರಾಹ್ಮಣರಿಗೆ ಪೂಜ್ಯನಾಗಿರುವುದರಿಂದಲೂ ಶುದ್ಧ ಸತ್ವಗುಣವನ್ನು ಹೊಂದಿರುವುದರಿಂದಲೂ ಎಲ್ಲಾ ದೇವತೆಗಳಿಗಿಂತಲೂ ನೀನೇ ಬ್ರಹ್ಮನನ್ನು ತಿಳಿದವನಾಗು. (ದೊಡ್ಡವನಾಗು) ವಿಪ್ರರಾದವರು ನಿನ್ನನ್ನೇ ಯಾವಾಗಲೂ ಪೂಜಿಸುತ್ತಾರೆ. ನೀನೇ ಪುರುಷೋತ್ತಮನು.

೭೧-೭೨. ನಿನ್ನನ್ನು ಪೂಜಿಸುವವರೇ ಬ್ರಾಹ್ಮಣರು. ಅವರು ಬ್ರಾಹ್ಮಣರೇ ಹೊರತು ಮಿಕ್ಕವರಲ್ಲ. ಇದರಲ್ಲಿ ಸಂಶಯವೂ ಇಲ್ಲ. ದೇವಕಿಯ ಮಗನೇ ಬ್ರಹ್ಮಣ್ಯನು. ಪುಂಡರೀಕಾಕ್ಷನೇ ಬ್ರಹ್ಮಣ್ಯನು. ಅವ್ಯಯಯನಾದ ವಿಷ್ಣುವೇ ಬ್ರಹ್ಮಣ್ಯನು. ಭಗವಂತನಾದ ನೀನೇ ಬ್ರಹ್ಮಣ್ಯನು. ವಾಸುದೇವನೂ ಹರಿಯೂ ಅಚ್ಯುತನೂ ಆದ ನೀನೇ ಬ್ರಹ್ಮಣ್ಯನು.

ಬ್ರಹ್ಮಣ್ಯೋ ನಾರಸಿಂಹಸ್ಸ್ಯಾತ್ ತಥಾ ನಾರಾಯಣೋವ್ಯಯಃ |
ಬ್ರಹ್ಮಣ್ಯಃ ಶ್ರೀಧರಃ ಶ್ರೀಶೋ ಗೋವಿಂದೋ ವಾಮನಸ್ತಥಾ || ೭೩ ||

ಬ್ರಹ್ಮಣ್ಯೋ ಯಜ್ಞವಾರಾಹಃ ಕೇಶವಃ ಪುರುಷೋತ್ತಮಃ |
ಬ್ರಹ್ಮಣ್ಯೋ ರಾಘವಃ ಶ್ರೀಮಾನ್ ರಾಮೋ ರಾಜೀವಲೋಚನಃ || ೭೪ ||

ಬ್ರಹ್ಮಣ್ಯಃ ಪದ್ಮನಾಭಶ್ಚ ತಥಾ ದಾಮೋದರಃ ಪ್ರಭುಃ |
ಬ್ರಹ್ಮಣ್ಯೋ ಮಾಧವೋ ಯಜ್ಞಃ ತಥಾ ತ್ರಿವಿಕ್ರಮಃ ಪ್ರಭುಃ || ೭೫ ||

ಬ್ರಹ್ಮಣ್ಯಶ್ಚ ಹೃಷೀಕೇಶಃ ಪೀತವಾಸಾ ಜನಾರ್ದನಃ |
ನಮೋ ಬ್ರಹ್ಮಣ್ಯದೇವಾಯ ವಾಸುದೇವಾಯ ಶಾಂರ್ಗಿಣೇ || ೭೬ ||

ನಾರಾಯಣಾಯ ಶ್ರೀಶಾಯ ಪುಂಡರೀಕೇಕ್ಷಣಾಯ ಚ |
ನಮೋ ಬ್ರಹ್ಮಣ್ಯದೇವಾಯ ವಾಸುದೇವಾಯ ವಿಷ್ಣವೇ || ೭೭ ||

---

೭೩-೭೫. ನಾರಸಿಂಹನು ಬ್ರಹ್ಮಣ್ಯನು. ಅವ್ಯಯನಾದ ನಾರಾಯಣನು ಬ್ರಹ್ಮಣ್ಯನು. ಯಜ್ಞವರಾಹನು ಬ್ರಹ್ಮಣ್ಯನು. ಶ್ರೀಧರನು ಬ್ರಹ್ಮಣ್ಯನು. ಗೋವಿಂದ ವಾಮನರು ಬ್ರಹ್ಮಣ್ಯರು. ಕೇಶವನೂ ವಾಮನನೂ ಬ್ರಹ್ಮಣ್ಯರು. ರಾಘವನು ಬ್ರಹ್ಮಣ್ಯನು. ರಾಜೀವಲೋಚನನಾದ ರಾಘವನು ಬ್ರಹ್ಮಣ್ಯನು. ಪದ್ಮನಾಭನು ಬ್ರಹ್ಮಣ್ಯನು. ದಾಮೋದರನು ಬ್ರಹ್ಮಣ್ಯನು. ಮಾಧವನು ಬ್ರಹ್ಮಣ್ಯನು ಯಜ್ಞಮೂರ್ತಿಯೂ ತ್ರಿವಿಕ್ರಮನೂ ಬ್ರಹ್ಮಣ್ಯರು. ಹೃಷೀಕೇಶನು ಬ್ರಹ್ಮಣ್ಯನು. ಹೊಂಬಣ್ಣದ ಬಟ್ಟೆಯುಳ್ಳ ಜನಾರ್ದನನು ಬ್ರಹ್ಮಣ್ಯನು.

೭೬-೭೭. ವಾಸುದೇವನೂ ಶಾಂರ್ಗಿಯೂ ಆದ ಬ್ರಹ್ಮಣ್ಯದೇವನಿಗೆ ನಮಸ್ಕಾರವು. ನಾರಾಯಣನೂ ಶ್ರೀಪತಿಯೂ ಪುಂಡರೀಕೇಕ್ಷಣನೂ ಆದ ಬ್ರಹ್ಮಣ್ಯದೇವನಿಗೆ ನಮಸ್ಕಾರವು.

ಕಲ್ಯಾಣಗುಣಪೂರ್ಣಾಯ ನಮಸ್ತೇ ಪರಮಾತ್ಮನೇ ।
ನಮೋ ಬ್ರಹ್ಮಣ್ಯದೇವಾಯ ಸರ್ಗಸ್ಥಿತ್ಯಂತಹೇತವೇ ॥ ೭೮ ॥

ಪ್ರದ್ಯುಮ್ನಾಯಾನಿರುದ್ಧಾಯ ತಥಾ ಸಂಕರ್ಷಣಾಯ ಚ ।
ನಮೋ ಬ್ರಹ್ಮಣ್ಯದೇವಾಯ ಸರ್ವದೇವಸ್ವರೂಪಿಣೇ ॥ ೭೯ ॥

ವರಾಹವಪುಷೇ ನಿತ್ಯಂ ತ್ರಯೀನಾಥಾಯ ತೇ ನಮಃ ।
ನಮೋ ಬ್ರಹ್ಮಣ್ಯದೇವಾಯ ನಾಗಪರ್ಯಂಕ ಶಾಯಿನೇ ॥ ೮೦ ॥

ರಾಜೀವದಳನೇತ್ರಾಯ ರಾಘವಾಯ ನಮೋ ನಮಃ ।
ಮಾಯಯಾ ಮೋಹಿತಾಸ್ಸರ್ವೇ ದೇವಾಶ್ಚ ಋಷಯಸ್ತವ ॥ ೮೧ ॥

ನ ಜಾನಂತಿ ಮಹಾತ್ಮಾನಂ ಸರ್ವಲೋಕೇಶ್ವರಂ ಪ್ರಭೋ ।
ತ್ವಾಂ ನ ಜಾನಂತಿ ಭಗವನ್ ಸರ್ವವೇದವಿದೋಽಪಿ ಹಿ ॥ ೮೨ ॥

---

೭೮. ಕಲ್ಯಾಣಗುಣಗಳಿಂದ ಕೂಡಿದ ಪರಮಾತ್ಮನಿಗೆ ನಮಸ್ಕಾರವು. ಸರ್ಗಸ್ಥಿತಿನಾಶಗಳನ್ನು ಮಾಡುವ ಆ ಬ್ರಹ್ಮಣ್ಯದೇವನಿಗೆ ನಮಸ್ಕಾರವು.

೭೯. ಪ್ರದ್ಯುಮ್ನನಿಗೆ ನಮಸ್ಕಾರವು. ಅನಿರುದ್ಧನಿಗೆ ನಮಸ್ಕಾರವು. ಸಂಕರ್ಷಣನಿಗೆ ನಮಸ್ಕಾರವು. ಸರ್ವದೇವಸ್ವರೂಪಿಯಾದ ಬ್ರಹ್ಮಣ್ಯದೇವನಿಗೆ ನಮಸ್ಕಾರವು.

೮೦-೮೧. ವರಾಹನ ಆಕಾರವುಳ್ಳ ನಿನಗೆ ನಮಸ್ಕಾರವು. ವೇದಗಳಿಗೆ ಒಡೆಯನಾದ ನಿನಗೆ ನಿತ್ಯವೂ ನಮಸ್ಕಾರವು. ಆದಿಶೇಷನ ಬೆನ್ನಿನಮೇಲೆ ಮಲಗಿರುವ ಬ್ರಹ್ಮಣ್ಯದೇವನಿಗೆ ನಮಸ್ಕಾರವು. ಕಮಲದ ದಳದಂತೆ ಕಣ್ಣುಳ್ಳ ರಾಘವನಾದ ನಿನಗೆ ನಮಸ್ಕಾರವು. ಎಲೈ ಸ್ವಾಮಿಯೆ! ದೇವತೆಗಳೂ ಋಷಿಗಳೂ ನಿನ್ನ ಮಾಯೆಯಿಂದ ಬಹುವಾಗಿ ಮೋಹಗೊಂಡಿದ್ದಾರೆ.

೮೨. ಆ ದೇವತೆಗಳೂ ಋಷಿಗಳೂ ಸರ್ವಲೋಕೇಶ್ವರನಾದ ನಿನ್ನನ್ನು ತಿಳಿಯರು. ಎಲ್ಲಾ ವೇದಗಳನ್ನು ಓದಿದವರೂ ಕೂಡಾ ನಿನ್ನ ಮಾಯೆಗೆ ಒಳಪಟ್ಟು ನಿನ್ನನ್ನು ತಿಳಿಯಲಾರರು.

ನಾಮರೂಪಗುಣೈಃ ಶ್ರೀಶ ಚಾರಿತ್ರೈರಪಿ ದುಷ್ಕರೈಃ ।
ಪರತ್ವಸೂಚಕಂ ಸತ್ತ್ವಂ ತವ ವೇದಿತುಮೀಶ್ವರ ॥ ೮೩ ॥

ಮಹರ್ಷಿಭಿಃ ಪ್ರೇಷಿತೋಽಹಂ ಆಗತೋಽಸ್ಮಿ ತವಾಂತಿಕಂ ।
ತವ ಶೀಲಂ ಗುಣಾನ್ ಜ್ಞಾತುಂ ಚರಣಂ ಮಮ ಕೇಶವ
ದತ್ತಂ ವಕ್ಷಸಿ ಗೋವಿಂದ ತತ್ ಕ್ಷಂತವ್ಯಂ ದಯಾನಿಧೇ ॥ ೮೪ ॥

॥ ವಸಿಷ್ಠ ಉವಾಚ ॥

ಏವಮುಕ್ತ್ವಾ ಭೃಗುರ್ದೇವಂ ಪ್ರಣಮ್ಯ ಚ ಮುಹುರ್ಮುಹುಃ ।
ದಿವ್ಯೈರ್ಮಹರ್ಷಿಭಿಸ್ತತ್ರ ಪೂಜ್ಯಮಾನೋ ಮಹಾತ್ಮಭಿಃ ॥ ೮೫ ॥

ಪುನರ್ಜಗಾಮ ಹೃಷ್ಟಾತ್ಮಾ ಯಜ್ಞೇ ಋಷಿಸಮಾಗಮೇ ।
ಸಮಾಗತಂ ಮಹಾತ್ಮಾನಂ ತತ್ರ ದೃಷ್ಟ್ವಾ ಮಹರ್ಷಯಃ ॥ ೮೬ ॥

---

೮೩. ಎಲೈ ರಮಾಪತಿಯೆ ! ನಿನ್ನ ನಾಮ, ರೂಪ, ಗುಣಗಳಿಂದಲೂ ಅದ್ಭುತವಾದ ಚರಿತ್ರೆಗಳಿಂದಲೂ ಪರತ್ವವನ್ನು ತೋರಿಸುವ ನಿನ್ನ ಸತ್ವವನ್ನು ಯಾರೂ ತಿಳಿಯಲಾರರು.

೮೪. ಮಹರ್ಷಿಗಳು ಕಳುಹಿಸಿದುದರಿಂದ ನಿನ್ನ ಗುಣಸ್ವಭಾವಗಳನ್ನು ತಿಳಿಯಲು ನಿನ್ನ ಬಳಿಗೆ ಬಂದೆನು. ಆದ್ದರಿಂದಲೇ ನಿನ್ನ ಎದೆಯಮೇಲೆ ಒದ್ದೆನು. ಎಲೈ ಕೃಪಾನಿಧಿಯೇ ! ಆ ತಪ್ಪನ್ನು ನೀನು ಕ್ಷಮಿಸು.

೮೫-೮೬. ವಸಿಷ್ಠನು ಹೇಳಿದನು–ಭೃಗುವು ಆ ಸ್ವಾಮಿಗೆ ಇಂತೆಂದು ಹೇಳಿ ಅನೇಕ ಬಾರಿ ನಮಸ್ಕರಿಸಿ ಅಲ್ಲಿದ್ದ ದೇವಋಷಿಗಳಿಂದ ಗೌರವಿತನಾಗಿ ಹಿಂದಿರುಗಿ ಆ ಋಷಿಗಳು ಸೇರಿರುವ ಯಜ್ಞ ನಡೆಯುತ್ತಿದ್ದ ಜಾಗಕ್ಕೆ ಬಂದನು. ಅಲ್ಲಿದ್ದ ಮಹರ್ಷಿಗಳೆಲ್ಲ ಭೃಗುವು ಬಂದುದನ್ನು ನೋಡಿ ಎದುರುಗೊಂಡು ನಮಸ್ಕರಿಸಿ

ಪ್ರತ್ಯುತ್ಥಾಯ ನಮಸ್ಕೃತ್ವಾ ಪೂಜಾಂ ಚಕ್ರುರ್ವಿಧಾನತಃ ।
ತೇಷಾಂ ವಿಜ್ಞಾಪಯಾಮಾಸ ತತ್ಸರ್ವಂ ಮುನಿಪುಂಗವಃ ॥ ೮೭ ॥

॥ ಭೃಗುರುವಾಚ ॥

ರಜಸ್ತಮೋಗುಣೋದ್ರಿಕ್ತೌ ವಿಧೀಶಾನೌ ಸುರೋತ್ತಮೌ ।
ಶಪ್ತೌ ಮಯಾ ನ ಪೂಜ್ಯೌ ತೌ ವಿಪ್ರಾಣಾಮೃಷಿಸತ್ತಮಾಃ ॥ ೮೮ ॥

ಅಬ್ರಹ್ಮಣ್ಯತ್ವಮಾಪನ್ನೋ ಗರ್ಹಿತಂ ರೂಪಮಾಸ್ಥಿತಃ ।
ಶಪ್ತಃ ಕೈಲಾಸಶಿಖರೇ ಶಂಕರಸ್ತಮಸಾವೃತಃ ॥ ೮೯ ॥

ಶುದ್ಧಸತ್ವಮಯೋ ವಿಷ್ಣುಃ ಕಲ್ಯಾಣಗುಣಸಾಗರಃ ।
ನಾರಾಯಣಃ ಪರಂ ಬ್ರಹ್ಮ ವಿಪ್ರಾಣಾಂ ದೈವತಂ ಹರಿಃ ॥ ೯೦ ॥

---

ಕ್ರಮವಾಗಿ ಪೂಜಿಸಿದರು. ಆಗ ಭೃಗುವು ಎಲ್ಲವನ್ನೂ ಅವರಿಗೆ ಕ್ರಮವಾಗಿ ಹೇಳಿದನು.

೮೮. ಭೃಗುವು ಹೇಳಿದನು–ಬ್ರಹ್ಮ ಮಹೇಶರು ರಜೋಗುಣ ತಮೋಗುಣಗಳಿಂದ ಕೂಡಿಕೊಂಡಿರುವರು. ಅವರನ್ನು ನಾನು ಶಪಿಸಿರುವೆನು. ಅವರು ವಿಪ್ರರಿಗೆ ಪೂಜ್ಯರಾಗುವುದಿಲ್ಲ. ವಿಪ್ರರು ಅವರನ್ನು ಪೂಜಿಸಬೇ ಬಾರದು.

೮೯. ಕೈಲಾಸ ಶಿಖರದಲ್ಲಿರುವ ಶಿವನು ಬ್ರಹ್ಮನನ್ನು ತಿಳಿಯದವನಾದನು. ನನ್ನಿಂದ ಶಾಪವನ್ನು ಹೊಂದಿನಿಂದಿತವಾದ ರೂಪವನ್ನು ಹೊಂದಿರುವನು. ಇವನು ತಮೋಗುಣದಿಂದ ಕೂಡಿಕೊಂಡಿರುವನು.

೯೦. ವಿಷ್ಣುವು ಕಲ್ಯಾಣಗುಣಸಾಗರನು. ಶುದ್ಧಸತ್ವದಿಂದ ಕೂಡಿರುವನು. ಆ ನಾರಾಯಣನೇ ಪರಬ್ರಹ್ಮನು ಆ ಹರಿಯೇ ವಿಪ್ರರಿಗೆ ದೇವರು.

ಬ್ರಹ್ಮಣ್ಯಃ ಶ್ರೀಪತಿರ್ವಿಷ್ಣುಃ ವಾಸುದೇವೋ ಜನಾರ್ದನಃ ।
ಬ್ರಹ್ಮಣ್ಯಃ ಪುಂಡರೀಕಾಕ್ಷೋ ಗೋವಿಂದೋ ಹರಿರಚ್ಯುತಃ ॥ ೯೧ ॥

ಸ ಏವ ಪೂಜ್ಯೋ ವಿಪ್ರಾಣಾಂ ನೇತರಃ ಪುರುಷರ್ಷಭಃ ।
ಮೋಹಾದ್ಯಃ ಪೂಜಯೇದನ್ಯಂ ಸ ಪಾಷಂಡೀ ಭವಿಷ್ಯತಿ ॥ ೯೨ ॥

ಸ್ಮರಣಾದೇವ ಕೃಷ್ಣಸ್ಯ ವಿಮುಕ್ತಿಃ ಪಾಪಿನಾಮಪಿ ।
ತಸ್ಯ ಪಾದೋದಕಂ ಸೇವ್ಯಂ ಭುಕ್ತೋಚ್ಛಿಷ್ಟಂ ಚ ಪಾವನಂ ॥ ೯೩ ॥

ಸ್ವರ್ಗಾಪವರ್ಗದಂ ನೃಣಾಂ ಬ್ರಾಹ್ಮಣಾನಾಂ ವಿಶೇಷತಃ ।
ವಿಷ್ಣೋರ್ನಿವೇದಿತಂ ನಿತ್ಯಂ ದೇವೇಭ್ಯೋ ಜುಹುಯಾದ್ಧವಿಃ ॥ ೯೪ ॥

ಪಿತೃಭ್ಯಶ್ಚೈವ ತದ್ದದ್ಯಾತ್ ಸರ್ವಮಾನಂತ್ಯಮುಶ್ನುತೇ ।
ಯೋ ನ ದದ್ಯಾದ್ಧರೇರ್ಭುಕ್ತಂ ಪಿತೄಣಾಂ ಶ್ರಾದ್ಧಕರ್ಮಣಿ ॥ ೯೫ ॥

---

೯೧. ಶ್ರೀಪತಿಯಾದ ವಿಷ್ಣುವೇ. ಬ್ರಹ್ಮಜ್ಞಾನಿಯು. ಬ್ರಾಹ್ಮಣರಿಗೆ ಹಿತಕಾರಿಯು ಆ ವಾಸುದೇವನೇ ಬ್ರಹ್ಮಣ್ಯನು. ಜನಾರ್ದನನೇ ಬ್ರಹ್ಮಣ್ಯನು. ಪುಂಡರೀಕಾಕ್ಷನೂ ಗೋವಿಂದನೂ ಹರಿಯೂ ಅಚ್ಯುತನೂ ಆದ ಆತನೇ ಬ್ರಹ್ಮಣ್ಯನು.

೯೨. ಆ ವಿಷ್ಣುವೇ ವಿಪ್ರರಿಗೆ ಪೂಜ್ಯನು. ಮತ್ತೊಬ್ಬರನ್ನು ಪೂಜಿಸಕೂಡದು. ಯಾವನಾದರೂ ಮೋಹದಿಂದ ಇತರರನ್ನು ಪೂಜಿಸಿದರೆ ಅವರು ಪಾಷಂಡಿಯಾಗುತ್ತಾರೆ.

೯೩. ಆ ಕೃಷ್ಣನನ್ನು ಸ್ಮರಿಸಿದರೇನೇ ಪಾಪಿಗಳಿಗೂ ಮುಕ್ತಿಯು ಲಭಿಸುತ್ತದೆ. ಆ ಹರಿಯ ಪಾದೋದಕವನ್ನು ಸೇವಿಸಬಹುದು. ಅವನ ಎಂಜಲೂ ಪಾವನವಾದುದೆ.

೯೪. ಆ ಕೃಷ್ಣನ ತೀರ್ಥವೂ ಪ್ರಸಾದವೂ ಸ್ವರ್ಗಮೋಕ್ಷಗಳನ್ನು ಕೊಡುತ್ತದೆ. ವಿಷ್ಣುವಿಗೆ ನಿವೇದನ ಮಾಡಿದುದನ್ನು ದೇವತೆಗಳಿಗೆ ಹವಿಸ್ಸನ್ನಾಗಿ ಹೋಮಮಾಡಬೇಕು.

೯೫-೯೬. ಆ ವಿಷ್ಣುವಿಗೆ ನಿವೇದನ ಮಾಡಿದುದನ್ನೇ ಪಿತೃಗಳಿಗೂ ಕೊಡಬೇಕು. ಅದನ್ನು ಆ ಪಿತೃಗಳೂ ಬಹುವಾಗಿ ಭುಂಜಿಸುತ್ತಾರೆ. ಯಾರು

ಅಶ್ನಂತಿ ಪಿತರಸ್ತಸ್ಯ ವಿಣ್ಮೂತ್ರಂ ಸತತಂ ದ್ವಿಜಾಃ ।
ತಸ್ಮಾದ್ವಿಷ್ಣೋಃ ಪ್ರಸಾದೋ ವೈ ಸೇವಿತವ್ಯೋ ದ್ವಿಜನ್ಮನಾ ॥ ೯೬ ॥

ಇತರೇಷಾಂ ತು ದೇವಾನಾಂ ನಿರ್ಮಾಲ್ಯಂ ಗರ್ಹಿತಂ ಭವೇತ್ ।
ಸಕೃದೇವ ಹಿ ಯೋಽಶ್ನಾತಿ ಬ್ರಾಹ್ಮಣೋ ಜ್ಞಾನದುರ್ಬಲಃ ॥ ೯೭ ॥

ನಿರ್ಮಾಲ್ಯಂ ಶಂಕರಾದೀನಾಂ ಸ ಚಂಡಾಲೋ ಭವೇದ್ಧ್ರುವಂ ।
ಕಲ್ಪಕೋಟಿಸಹಸ್ರಾಣಿ ಪಚ್ಯತೇ ನರಕಾಗ್ನಿನಾ ॥ ೯೮ ॥

ನಿರ್ಮಾಲ್ಯಂ ಭೋ ದ್ವಿಜಶ್ರೇಷ್ಠಾ ರುದ್ರಾದೀನಾಂ ದಿವೌಕಸಾಂ ।
ರಕ್ಷೋಯಕ್ಷಪಿಶಾಚಾನ್ನಂ ಮದ್ಯಮಾಂಸಸಮಂ ಸ್ಮೃತಂ ॥ ೯೯ ॥

ತದ್ಬ್ರಾಹ್ಮಣೈರ್ನ ಭೋಕ್ತವ್ಯಂ ದೇವನಾಮರ್ಪಿತಂ ಹವಿಃ ।
ತಸ್ಮಾದನ್ಯಂ ಪರಿತ್ಯಜ್ಯ ವಿಷ್ಣುಮೇವ ಸನಾತನಂ ॥ ೧೦೦ ॥

---

ಹರಿಗೆ ನಿವೇದನಮಾಡದೆ ಶ್ರಾದ್ಧದಲ್ಲಿ ಬ್ರಾಹ್ಮಣರಿಗೆ ಬಡಿಸುವರೋ ಅವರ ಮೂತ್ರ ಅಮೇಧ್ಯಗಳನ್ನು ಪಿತೃಗಳು ತಿನ್ನುತ್ತಾರೆ. ಆದ್ದರಿಂದ ವಿಷ್ಣುವಿನ ಪ್ರಸಾದವನ್ನೇ ದ್ವಿಜರು ಸೇವಿಸಬೇಕು.

೯೭-೧೦೧. ವಿಷ್ಣುವನ್ನು ಹೊರತಾಗಿ ಇತರ ದೇವತೆಗಳ ನಿರ್ಮಾಲ್ಯವು ನಿಂದಿತವಾದುದು. ಜ್ಞಾನವಿಲ್ಲದೆ ಯಾವ ಬ್ರಾಹ್ಮಣನು ಒಂದುಬಾರಿಯಾದರೂ ಆ ಶಂಕರಾದಿ ದೇವತೆಗಳ ನಿರ್ಮಾಲ್ಯವನ್ನು ತಿಂದರೆ ಚಂಡಾಲನಾಗುತ್ತಾನೆ. ಸಂಶಯವಿಲ್ಲ. ಆ ರೀತಿಯಾಗಿ ಇತರ ದೇವತೆಗಳ ನಿವೇದನವನ್ನು ತಿಂದರೆ ಸಾವಿರಕೋಟಿಕಲ್ಪಗಳವರೆಗೆ ನರಕದಲ್ಲಿ ಬೇಯಿಸಲ್ಪಡುತ್ತಾನೆ ಎಲೈ ದ್ವಿಜಶ್ರೇಷ್ಠರಿರಾ ! ರುದ್ರಾದಿದೇವತೆಗಳ ಮತ್ತು ದಕ್ಷರ ಯಕ್ಷರ ಪಿಶಾಚಗಳ ನಿವೇದನದ ಅನ್ನವನ್ನು ತಿನ್ನಬಾರದು. ಅದು ಮದ್ಯಮಾಂಸಗಳಿಗೆ ಸಮವಾದುದು. ಆದ್ದರಿಂದ ಬ್ರಾಹ್ಮಣರಾದವರು ದೇವತೆಗಳಿಗೆ ಅರ್ಪಿಸಿದ ಅನ್ನವನ್ನು ತಿನ್ನಬಾರದು. ಇತರ ದೇವತೆಗಳಿಗೆ ಅರ್ಪಿಸಿದ ನಿವೇದನವನ್ನು ಬಿಟ್ಟು ವಿಷ್ಣುವಿನ ನಿವೇದನವನ್ನು ತಿನ್ನಿರಿ.

ಪೂಜಯಧ್ವಂ ದ್ವಿಜಶ್ರೇಷ್ಠಾ ಯಾವಜ್ಜೀವಮತಂದ್ರಿತಾಃ ।
ತದ್ವಿಷ್ಣೋಃ ಪರಮಂ ಧಾಮ ಸತ್ಯಂ ಜ್ಯೋತಿರಸಂಶಯಃ ॥ ೧೦೧ ॥

ತಾಪಾದಿಪಂಚಸಂಸ್ಕಾರೈರನ್ವಿಷ್ಯ ಶುಭಚೇತಸಾ ।
ಅಪ್ರಾಕೃತಂ ಹರಿಂ ಸಮ್ಯಗರ್ಚಯಧ್ವಂ ದ್ವಿಜರ್ಷಭಾಃ ॥ ೧೦೨ ॥

ಚಕ್ರಾಂಕಿತಭುಜಾ ವಿಪ್ರಾ ಭವಂತ್ಯಪ್ರಾಕೃತಾಃ ಶುಭಾಃ ।
ಚಕ್ರಲಾಂಛನಹೀನಾಸ್ತು ಪ್ರಾಕೃತಾಸ್ತಾಮಸಾಃ ಸ್ಮೃತಾಃ ॥ ೧೦೩ ॥

ತಸ್ಮಾತ್ ಪ್ರಾಕೃತಸಂಸರ್ಗಪಾಪೌಘದಹನಂ ಹರೇಃ ।
ಪ್ರತಪ್ತಂ ಬಿಭೃಯಾಚ್ಚಕ್ರಂ ಶಂಖಂ ಚ ಭುಜಮೂಲಯೋಃ ॥ ೧೦೪ ॥

ಊರ್ಧ್ವಪುಂಡ್ರಾಣಿ ಚಾಂಗೇಷು ಧೃತ್ವಾ ಶಾಸ್ತ್ರೋಕ್ತಮಾರ್ಗತಃ ।
ಅರ್ಚಯೇನ್ಮಂತ್ರರತ್ನೇನ ವಿಧಿನಾ ಪುರುಷೋತ್ತಮಂ ॥ ೧೦೫ ॥

---

ಸನಾತನನಾದ ವಿಷ್ಣುವನ್ನೇ ಪೂಜಿಸಿರಿ. ಹಾಗೆ ಮಾಡಿದರೆ ವಿಷ್ಣುವಿನ ಲೋಕವಾದ ವೈಕುಂಠವು ಸಿಕ್ಕುತ್ತದೆ. ಅದೇ ಸತ್ಯಮಯವೂ ಜ್ಯೋತಿರ್ಮಯವೂ ಅದುದು. ಸಂಶಯವಿಲ್ಲ.

೧೦೨. ತಾಪವೇ ಮುಂತಾದ ಐದುಬಗೆಯ ಸಂಸ್ಕಾರಗಳನ್ನು ಹೊಂದಿ ಒಳ್ಳೆಯ ಮನಸ್ಸಿನಿಂದ ಕೂಡಿ ಆ ಅಪ್ರಾಕೃತನಾದ ಹರಿಯನ್ನು ಚೆನ್ನಾಗಿ ಪೂಜಿಸಿರಿ.

೧೦೩-೧೦೪. ಭುಜದಲ್ಲಿ ಚಕ್ರವನ್ನು ಗುರುತುಮಾಡಿಸಿಕೊಂಡ ವಿಪ್ರರು ಉತ್ತಮೋತ್ತಮ ಗುಣವುಳ್ಳವರಾಗುತ್ತಾರೆ. ಅವರಿಗೆ ಅಪ್ರಾಕೃತರೆಂದು ಹೆಸರು ಬರುತ್ತದೆ. ಚಕ್ರಲಾಂಛನವನ್ನು ಮಾಡಿಸಿಕೊಳ್ಳದವರು ಪ್ರಾಕೃತರೆಂದು ತಿಳಿಯಬೇಕು. ಪ್ರಾಕೃತರ ಸಂಸರ್ಗದಿಂದುಂಟಾದ ಪಾಪವನ್ನು ನಾಶಮಾಡುವ ಆ ಹರಿಯ ಶಂಖಚಕ್ರಗಳನ್ನು ಕಾಯಿಸಿ ಬ್ರಾಹ್ಮಣನಾದವನು ಭುಜಗಳಲ್ಲಿ ಅಂಕನ ಮಾಡಿಸಿಕೊಳ್ಳಬೇಕು.

೧೦೫. ಶಾಸ್ತ್ರದಲ್ಲಿ ಹೇಳಿರುವಂತೆ ಊರ್ಧ್ವಪುಂಡ್ರಗಳನ್ನು ಮೈಗೆ ಹಚ್ಚಿಕೊಳ್ಳಬೇಕು. ಮಂತ್ರವನ್ನು ಹೇಳುತ್ತಾ ವಿಧಿಯಂತೆ ಆ ಪುರುಷೋತ್ತಮನನ್ನು ಪೂಜಿಸಬೇಕು.

ತಸ್ಯ ಪ್ರಸಾದಸೇವಾಂ ಚ ಕುರ್ಯಾನ್ನಿತ್ಯಮತಂದ್ರಿತಃ ।
ತಸ್ಯಾವರಣಪೂಜಯಾಂ ತ್ರಿದಶಾನರ್ಚಯೇತ್ಸದಾ ॥ ೧೦೬ ॥

ತಮೇವ ಸರ್ವಯಜ್ಞಾನಾಂ ಭೋಕ್ತಾರಂ ಪರಮೇಶ್ವರಂ ।
ಜ್ಞಾತ್ವಾ ವೈ ಜುಹುಯಾದದ್ಯಾಜ್ಜಪೇದ್ವ್ರಿ ಸತತಂ ದ್ವಿಜಾಃ ॥ ೧೦೭ ॥

॥ ವಸಿಷ್ಠ ಉವಾಚ ॥

ಏವಮುಕ್ತಾಸ್ತು ತೇ ಸರ್ವೇ ಋಷಯಃ ಕ್ಷೀಣಕಲ್ಮಷಾಃ ।
ನಮಸ್ಕೃತ್ಯ ಭೃಗುಂ ಸಮ್ಯಗೂಚುಃ ಪ್ರಾಂಜಲಯಸ್ತದಾ ॥ ೧೦೮ ॥

॥ ಋಷಯ ಊಚುಃ ॥

ಭಗವನ್ ಸಂಶಯಚ್ಛೇತ್ತಾ ತ್ವಮೇವ ದ್ವಿಜಸತ್ತಮ ।
ತ್ವಂ ವೈ ಲೋಕೇ ಗತಿರ್ಬ್ರಹ್ಮನ್ ತ್ವಮೇವ ಪರಮಾಗತಿಃ ॥ ೧೦೯ ॥

---

೧೦೬. ಆ ವಿಷ್ಣುವಿನ ಪ್ರಸಾದವನ್ನು ನಿತ್ಯವೂ ಬಿಡದೆ ಸೇವಿಸಬೇಕು. ಆ ಸ್ವಾಮಿಯ ಆವರಣಪೂಜೆಯಲ್ಲಿ ಮಿಕ್ಕ ದೇವತೆಗಳನ್ನು ಪೂಜಿಸಬೇಕು.

೧೦೭. ಸರ್ವ ಯಜ್ಞಗಳಲ್ಲಿಯೂ ಹವಿಸ್ಸನ್ನು ತಿನ್ನುವ ಪರಮೇಶ್ವರನಾದ ಆ ಸ್ವಾಮಿಯನ್ನು ತಿಳಿದುಕೊಂಡು ಅವನನ್ನು ಪೂಜಿಸಬೇಕು. ಅವನಿಗೆ ಹವಿಸ್ಸನ್ನು ಹೋಮಮಾಡಬೇಕು. ಅವನ ನಿರ್ಮಾಲ್ಯವನ್ನು ಬ್ರಾಹ್ಮಣನು ಷೇವಿಸಬೇಕು. ಅವನ ಮಂತ್ರವನ್ನು ಬ್ರಾಹ್ಮಣನು ಯಾವಾಗಲೂ ಜಪಿಸಬೇಕು.

೧೦೮. ವಸಿಷ್ಠನು ಹೇಳಿದನು—ಇದೆಲ್ಲವನ್ನೂ ಹೇಳಲು ಆ ಋಷಿಗಳು ಪಾಪವನ್ನೆಲ್ಲಾ ಕಳೆದುಕೊಂಡು ಭೃಗುವಿಗೆ ನಮಸ್ಕರಿಸಿ ಕೈಮುಗಿದುಕೊಂಡು ಇಂತೆಂದರು.

೧೦೯-೧೧೦. ಋಷಿಗಳು ಹೇಳಿದರು—ಎಲೈ ಪೂಜ್ಯನಾದ ಭೃಗುವೆ! ನೀನೇ ನಮ್ಮಗಳ ಸಂಶಯವನ್ನು ನಾಶಮಾಡತಕ್ಕವನು. ನೀನೇ ಲೋಕಕ್ಕೆಲ್ಲಾ ಗತಿಯು. ಉತ್ತಮವಾದ ಗತಿಯನ್ನು ಕೊಡತಕ್ಕವನೂ ನೀನೇ. ನೀನೇ

ತ್ವಮೇವ ಪರಮೋ ಧರ್ಮಃ ತ್ವಮೇವ ಪರಮಂ ತಪಃ ।
ತ್ವತ್ಪ್ರಸಾದಾದ್ವಯಂ ವಿಪ್ರಾ ಭವಿಷ್ಯಾಮೋ ಹಿ ನಾನ್ಯಥಾ ॥ ೧೧೦ ॥

॥ ವಸಿಷ್ಠ ಉವಾಚ ॥

ಏವಂ ಸ್ತುತ್ವಾ ಭೃಗುಂ ವಿಪ್ರಂ ಸರ್ವೆ ಏವ ಮಹರ್ಷಯಃ ।
ತಸ್ಮಾತ್ ಸಂಪ್ರಾಪ್ತಮಂತ್ರಾ ವೈ ಪೂಜಯಾಮಾಸುರಚ್ಯುತಂ ॥ ೧೧೧ ॥

ಏತತ್ತೇ ಸರ್ವಮಾಖ್ಯಾತಂ ಪ್ರಸಂಗಾತ್ ಪಾರ್ಥಿವಾತ್ಮಜ ।
ರಾಮಸ್ಯ ಹಸ್ತಕಮಲಸ್ಪರ್ಶನಾದ್ವೈ ನೃಪೋತ್ತಮ ॥ ೧೧೨ ॥

ಭವಿಷ್ಯತ್ಯಮಲಂ ತಚ್ಚ ರೂಪಂ ಲೋಕವಿಗರ್ಹಿತಂ ।
ರಾಘವಃ ಸರ್ವದೇವಾನಾಂ ಪಾವನಃ ಪುರುಷೋತ್ತಮಃ ॥ ೧೧೩ ॥

ಸ್ಪೃಷ್ಟ್ವಾ ದೃಷ್ಟ್ವಾಶ್ಚ ತೇನೈವ ವಿಮಲಾಃ ಶಂಕರಾದಯಃ ।
ಸರ್ವೇಷಾಮಪಿ ದೇವಾನಾಂ ಪಿತಾ ಮಾತಾ ಜನಾರ್ದನಃ ॥ ೧೧೪ ॥

---

ಉತ್ತಮವಾದ ಧರ್ಮವು. ನೀನೇ ಪರಮವಾದ ತಪಸ್ಸು. ನಿನ್ನ ಅನುಗ್ರಹದಿಂದಲೇ ನಾವೆಲ್ಲರೂ ಬ್ರಹ್ಮನನ್ನು ಬಲ್ಲ ವಿಪ್ರರಾಗುತ್ತೇವೆ. ಇಲ್ಲದಿದ್ದರೆ ಆಗುತ್ತಿರಲಿಲ್ಲ.

೧೧೧. ವಸಿಷ್ಠನು ಹೇಳಿದನು–ಎಲ್ಲಾ ಋಷಿಗಳೂ ವಿಪ್ರನಾದ ಭೃಗುವನ್ನು ಹೀಗೆ ಸ್ತುತಿಸಿ ಅವನಿಂದ ಮಂತ್ರವನ್ನುಪದೇಶಿಸಿಕೊಂಡು ಅನಂತರ ಸ್ವಾಮಿಯಾದ ಅಚ್ಯುತನನ್ನು ಪೂಜಿಸಿದರು.

೧೧೨–೧೧೩. ಎಲೈ ದೊರೆಯೆ ! ವಿಷ್ಣುವು ಸರ್ವೋತ್ಕೃಷ್ಟನೆಂದು ಈ ರೀತಿಯಾಗಿ ಪ್ರಸಂಗದಿಂದ ನಿನಗೆ ಹೇಳಿದ್ದೇನೆ. ಶ್ರೀರಾಮನ ಹಸ್ತಕಮಲದ ಸ್ಪರ್ಶದಿಂದಲೇ ರೂಪವು ಎಷ್ಟು ನಿಂದಿತವಾಗಿದ್ದರೂ ಒಳ್ಳೆಯದಾಗಿ ಮಂಗಳಕರವಾಗುತ್ತದೆ. ರಾಘವನು ಎಲ್ಲಾ ದೇವತೆಗಳಲ್ಲಿಯೂ ಪಾವನನು. ಪುರುಷೋತ್ತಮನು.

೧೧೪-೧೧೫. ಆ ಶ್ರೀರಾಮನು ಮುಟ್ಟಿದರೆ ಕಡೆಗೆ ನೋಡಿದರೂ ಕೂಡ ಶಂಕರನೇ ಮುಂತಾದವರೆಲ್ಲರೂ ಪವಿತ್ರರಾಗುತ್ತಾರೆ. ಆ ಶ್ರೀರಾಮನು ಎಲ್ಲಾ ದೇವತೆಗಳಿಗೂ ತಾಯಿಯು. ತಂದೆಯು. ಎಲ್ಲಾ ಲೋಕವನ್ನೂ ಕಾಪಾಡತಕ್ಕವನು.

ತ್ರಾತಾ ಚ ಸರ್ವಲೋಕಾನಾಂ ವತ್ಸಲೋ ಗುಣಸಾಗರಃ |
ತಮೇವ ಶರಣಂ ಗಚ್ಛ ಯದೀಚಸಿ ಪರಂ ಪದಂ ॥ ೧೧೫ ॥

ಏತತ್ತೇ ಸರ್ವಮಾಖ್ಯಾತಂ ಪುರಾಣಂ ವೇದಸಮ್ಮಿತಂ |
ಬ್ರಹ್ಮಣಾ ಕಥಿತಂ ರಾಜನ್ ಮನೋಃ ಸ್ವಾಯಂಭುವೇಽನ್ತರೇ ॥ ೧೧೬ ॥

ಯಸ್ತ್ವಿದಂ ಶ್ರಾವಯೇನ್ನಿತ್ಯಂ ಪಠೇದ್ವಾ ಸುಸಮಾಹಿತಃ |
ಅನನ್ಯಭಕ್ತಿಃ ಶ್ರೀಶಸ್ಯ ಜಾಯತೇ ತಸ್ಯ ಸರ್ವದಾ ॥ ೧೧೭ ॥

ವಿದ್ಯಾರ್ಥೀ ಲಭತೇ ವಿದ್ಯಾಂ ಧರ್ಮಾರ್ಥೀ ಧರ್ಮಮಾಪ್ನುಯಾತ್ |
ಮೋಕ್ಷಾರ್ಥೀ ಲಭತೇ ಮೋಕ್ಷಂ ಕಾಮಾರ್ಥೀ ಲಭತೇ ಸುಖಂ ॥ ೧೧೮ ॥

ದ್ವಾದಶ್ಯಾಂ ಶ್ರವಣೇ ಸೂರ್ಯಚಂದ್ರಯೋರ್ಗ್ರಹಣೇ ತಥಾ |
ಅಮಾವಾಸ್ಯಾಂ ಪೌರ್ಣಮಾಸ್ಯಾಂ ಪಠೇದ್ಭಕ್ತಿಸಮನ್ವಿತಃ ॥ ೧೧೯ ॥

---

ಬಹು ಪ್ರೀತಿಯುಳ್ಳವನು. ಗುಣನಿಧಿಯು. ನೀನು ಪರಮಪದವನ್ನು ಹೊಂದ ಬೇಕಾದ ಪಕ್ಷದಲ್ಲಿ ಆ ಸ್ವಾಮಿಯನ್ನು ಧ್ಯಾನಿಸಿ ಮರೆಹೊಗಬೇಕು.

೧೧೬. ಎಲೈ ರಾಜನೆ ! ವೇದಕ್ಕೆ ಸಮವಾದ ಈ ಪುರಾಣವನ್ನು ನಿನಗೆ ಹೇಳಿದ್ದೇನೆ. ಇದನ್ನು ಬ್ರಹ್ಮನು ಸ್ವಾಯಂಭುವಮನ್ವಂತರದಲ್ಲಿ ಎಲ್ಲರಿಗೂ ಹೇಳಿದ್ದಾನೆ.

೧೧೭. ಇದನ್ನು ಯಾವನು ನಿತ್ಯವೂ ಹೇಳುತ್ತಾನೆಯೋ ಅಥವಾ ಏಕಾಗ್ರತೆಯಿಂದ ಕೇಳುತ್ತಾನೆಯೋ ಅವನಿಗೆ ಯಾವಾಗಲೂ ವಿಷ್ಣುವಿನಲ್ಲಿ ಭಕ್ತಿಯು ಹುಟ್ಟುತ್ತದೆ. ಮತ್ತೊಬ್ಬರಲ್ಲಿ ಮನಸ್ಸು ಖಂಡಿತವಾಗಿಯೂ ಉಂಟಾಗುವುದೇ ಇಲ್ಲ.

೧೧೮. ಇದನ್ನು ಕೇಳಿದರೆ ವಿದ್ಯಾರ್ಥಿಯಾದವನು ವಿದ್ಯೆಯನ್ನೂ ಧರ್ಮಾರ್ಥಿಯಾದವನು ಧರ್ಮವನ್ನೂ ಮೋಕ್ಷಾರ್ಥಿಯಾದವನು ಮೋಕ್ಷವನ್ನೂ ಕಾಮಾರ್ಥಿಯು ಸುಖವನ್ನೂ ಹೊಂದುತ್ತಾರೆ.

೧೧೯. ದ್ವಾದಶಿ, ಶ್ರವಣನಕ್ಷತ್ರ, ಸೂರ್ಯಗ್ರಹಣ, ಚಂದ್ರಗ್ರಹಣ, ಅಮಾವಾಸ್ಯೆ, ಹುಣ್ಣಿಮೆಗಳಲ್ಲಿ ಇದನ್ನು ಭಕ್ತಿಯಿಂದ ಓದಬೇಕು.

ಶ್ಲೋಕಾರ್ಧಂ ಶ್ಲೋಕಪಾದಂ ವಾ ಪಠೇದ್ಯಸ್ತು ಸಮಾಹಿತಃ ।
ಅಶ್ವಮೇಧಸಹಸ್ರಸ್ಯ ಫಲಂ ಪ್ರಾಪ್ನೋತ್ಯಸಂಶಯಂ ॥ ೧೨೦ ॥

ಏತದೇವ ಯದಾಪದ್ಮಮಭೂದ್ಧೈರಣ್ಮಯಂ ಜಗತ್ ।
ತದ್ವೃತ್ತಾಂತಾಶ್ರಯಂ ತದ್ವತ್ಪಾದ್ಮಮಿತ್ಯುಚ್ಯತೇ ಬುಧೈಃ ॥ ೧೨೧ ॥

ಪಾದ್ಮಂ ತತ್ಪಂಚಪಂಚಾಶತ್ಸಹಸ್ರಾಣೀಹ ಪಠ್ಯತೇ ।
ತತ್ಪುರಾಣಂ ಚ ಯೋ ದದ್ಯಾತ್ ಸುವರ್ಣಕಲಶಾನ್ವಿತಂ ॥ ೧೨೨ ॥

ಜ್ಯೇಷ್ಠೇ ಮಾಸಿ ತಿಲೈರ್ಯುಕ್ತಂ ಸೋಽಶ್ವಮೇಧಫಲಂ ಲಭೇತ್ ।
ಇತ್ಯೇತತ್ಕಥಿತಂ ಗುಹ್ಯಂ ಪುರಾಣಂ ಪದ್ಮಸಂಜ್ಞಿತಂ
ಅರ್ಚಯಸ್ವ ಹೃಷೀಕೇಶಂ ಯದೀಚ್ಛಸಿ ಪರಂ ಪದಂ ॥ ೧೨೩ ॥

---

೧೨೦. ಒಂದುಶ್ಲೋಕವನ್ನಾಗಲೀ ಅರ್ಧಶ್ಲೋಕವನ್ನಾಗಲೀ ಯಾವನು ನಿಯಮದಿಂದ ಓದುತ್ತಾನೆಯೋ ಅವನಿಗೆ ಸಾವಿರ ಅಶ್ವಮೇಧಗಳನ್ನು ಮಾಡಿದ ಫಲವು ಬರುತ್ತದೆ. ಇದರಲ್ಲಿ ಸಂಶಯವಿಲ್ಲ.

೧೨೧. ಈ ಪ್ರಪಂಚವೆಲ್ಲವೂ ಯಾವಾಗ ಚಿನ್ನಂದಂತಿದ್ದ ಪದ್ಮದ ಆಕಾರವಾಗಿದ್ದಿತೋ ಆಗಿನ ಅದರ ವೃತ್ತಾಂತಗಳನ್ನು ಹೇಳಿರುವುದಾದುರಿಂದ ಇದನ್ನು ಪಾದ್ಮವೆಂದು ತಿಳಿದವರು ಹೇಳುತ್ತಾರೆ.

೧೨೨–೧೨೩. ಈ ಪದ್ಮಪುರಾಣವು ಐವತ್ತೈದುಸಾವಿರ ಗ್ರಂಥಗಳಿಂದ ಕೂಡಿದೆ. ಈ ಪುರಾಣದ ಪುಸ್ತಕವನ್ನೂ ಇದರ ಜೊತೆಯಲ್ಲಿ ಚಿನ್ನದ ಕಲಶವನ್ನೂ ಶಕ್ತಿಗನುಗುಣವಾಗಿ ಎಳ್ಳನ್ನೂ ಜ್ಯೇಷ್ಠಮಾಸದಲ್ಲಿ ದಾನಮಾಡಿದರೆ ಅವನಿಗೆ ಅಶ್ವಮೇಧ ಯಜ್ಞವನ್ನು ಮಾಡಿದ ಫಲವು ಬರುತ್ತದೆ. ಈ ರೀತಿಯಾಗಿ ಗುಹ್ಯವಾದ ಈ ಪದ್ಮಪುರಾಣವನ್ನು ನಿನಗೆ ಹೇಳಿದ್ದೇನೆ. ನಿನಗೆ ಪರಮಪದವು ಬೇಕಾದರೆ ಆ ಹೃಷೀಕೇಶನನ್ನು ಪೂಜಿಸು.

|| ಸೂತ ಉವಾಚ ||

ಏವಮುಕ್ತೋ ವಸಿಷ್ಠೇನ ಗುರುಣಾ ನೃಪಭಾಸುರಃ |
ಪ್ರಣಮ್ಯ ಚ ಗುರುಂ ರಾಜಾ ಪೂಜಯಿತ್ವಾ ಯಥಾರ್ಹತಃ || ೧೨೪ ||

ತಸ್ಮಾತ್ ಸಂಪ್ರಾಪ್ತಮನ್ತ್ರೋಽಸೌ ವಿಧಿನಾ ದ್ವಿಜಸತ್ತಮಾತ್ |
ಅರ್ಚಯಿತ್ವಾ ಹೃಷೀಕೇಶಂ ಯಾವಜ್ಜೀವಮತಂದ್ರಿತಃ
ಕಾಲೇ ಹರಿಪದಂ ಪ್ರಾಪ ಯೋಗಿಗಮ್ಯಂ ಸನಾತನಂ || ೧೨೫ ||

ಇತಿ ಶ್ರೀ ಮಹಾಪುರಾಣೇ ಪಾದ್ಮೇ ಉತ್ತರಖಂಡೇ ಉಮಾಮಹೇಶ್ವರ ಸಂವಾದೇ ವಸಿಷ್ಠ ದಿಲೀಪ ಸಂವಾದೇ ಭೃಗುಶಾಪ ಕಥನಂ ನಾಮ ದ್ವ್ಯಶೀತ್ಯಧಿಕದ್ವಿಶತತಮೋಽಧ್ಯಾಯಸ್ಸಮಾಪ್ತಃ

---

೧೨೪. ಸೂತನು ಹೇಳಿದನು–ಆ ದಿಲೀಪನಿಗೆ ಗುರುವಾದ ವಸಿಷ್ಠನು ಹೀಗೆಂದು ಹೇಳಲು ರಾಜನು ಗುರುವಿಗೆ ನಮಸ್ಕರಿಸಿ ಅವನ ಯೋಗ್ಯತೆಗೆ ತಕ್ಕಂತೆ ಪೂಜಿಸಿದನು.

೧೨೫. ಆ ಮಹಾಮುನಿಯೂ ಗುರುವೂ ತಪೋನಿಧಿಯೂ ಆದ ವಸಿಷ್ಠನಿಂದ ರಾಜಾಧಿರಾಜನಾದ ಆ ದಿಲೀಪನು ವಿಧಿವತ್ತಾಗಿ ಶಾಸ್ತ್ರದಲ್ಲಿ ಹೇಳಿರುವಂತೆ ಮಂತ್ರೋಪದೇಶವನ್ನು ತೆಗೆದುಕೊಂಡು ತನ್ನ ಜೀವಮಾನವು ಇರುವವರೆಗೂ ಎಂದರೆ ತಾನು ಬದುಕಿರುವವರೆಗೂ ಆಲಸ್ಯಪಡದೇನೇ ಪರಮಪಾವನನೂ ಪರಮಾತ್ಮನೂ ಆದ ಹೃಷೀಕೇಶನನ್ನು ಪೂಜಿಸುತ್ತಿದ್ದು ಕೊನೆಗೆ ಯೋಗಿಗಳು ಹೊಂದತಕ್ಕ ಸನಾತನವಾದ ವೈಕುಂಠವನ್ನು ಹೊಂದಿದನು.

ಇಂತು ಶ್ರೀ ಪದ್ಮಮಹಾಪುರಾಣದ ಉತ್ತರಖಂಡದ ಉಮಾಮಹೇಶ್ವರ ಸಂವಾದದ ವಸಿಷ್ಠ ದಿಲೀಪರ ಸಂವಾದದಲ್ಲಿ ಭೃಗುಶಾಪ ಕಥನವೆಂಬ ಇನ್ನೂರ ಎಂಭತ್ತೆರಡನೆಯ ಅಧ್ಯಾಯವು ಮುಗಿದುದು.



ನಾರಾಯಣಸುಧೀಸ್ಸೋಽಹಂ ಸೂರ್ಯೇತಿ ಪದಪೂರ್ವಕಃ |
ದತ್ತಸಾಹಿತ್ಯವಿದ್ವತ್ಕೋಽ ಕರ್ಣಾಟಿಕ್ಯಾಂಕೃತಶ್ರಮಃ ||

ಭಾಷಾದ್ವಯಸ್ಯ ಮರ್ಯಾದಾಂ ವೇದ್ಮಿ ಸಮ್ಯಗ್ವಿಧಾನತಃ |
ಪೌತ್ರೋಽಹಂ ತಿಮ್ಮಣಾರ್ಯಸ್ಯ ಸುಬ್ರಹ್ಮಣ್ಯ ತನೂಭವಃ ||

ಆದೇಶಾಜ್ಜನನಾಥಸ್ಯ ಜಯಚಾಮೇಂದ್ರ ಭೂಪತೇಃ |
ಭಾಷಾನುವಾದಂ ಪಾದ್ಮಸ್ಯ ಯಥಾಮತಿ ಕೃತೋಽಸ್ಮ್ಯಹಂ |

ಸಾರಂ ಗೃಹ್ಣಂತು ಸಂತೋಽತ್ರ ನಿಸ್ಸಾರೇ ಮಾಸ್ತು ಮಾತ್ಸರಂ ||
ಅನೇನ ಭಗವಾನೀಶಃ ತುಷ್ಯತು ಶ್ರೀರಮಾಪತಿಃ ||

ಅನುವಾದಕ :

ಮೈಸೂರು,
ಆಶ್ವಯುಜ ಶುದ್ಧ ಪೂರ್ಣಿಮಾ
ಗುರುವಾರ

ಬೇಲದಕೆರೆ ಸೂರ್ಯನಾರಾಯಣಶಾಸ್ತ್ರೀ
ಸಾಹಿತ್ಯ ವಿದ್ವಾನ್
ಕನ್ನಡ ಪಂಡಿತ (ಮೈಸೂರು) ಕನ್ನಡ ವಿದ್ವಾನ್ (ಮದ್ರಾಸ್)



ಇತಿ ಶ್ರೀ ಮಹಾಮುನಿ ವ್ಯಾಸಪ್ರಣೀತೇ ಮಹಾಪುರಾಣೇ ಪಾದ್ಮೇ
ಷಷ್ಠಮುತ್ತರಖಂಡಂ ಸಮಾಪ್ತಂ

॥ ಪದ್ಮಮಹಾಪುರಾಣಂ ಸಮಾಪ್ತಂ ॥



ಇಂತು ಶ್ರೀ ಮಹಾಮುನಿ ವ್ಯಾಸ ಪ್ರಣೀತವಾದ ಪದ್ಮ ಮಹಾ ಪುರಾಣದಲ್ಲಿ
ಆರನೆಯದಾದ ಉತ್ತರಖಂಡವು ಮುಗಿದುದು

॥ ಪದ್ಮಮಹಾಪುರಾಣವು ಮುಗಿದುದು ॥

ಮೈಸೂರು ಶಿವರಾಂಪೇಟೆ ಶ್ರೀ ಹನುಮಾನ್ ಪ್ರೆಸ್ಸಿನಲ್ಲಿ ಪ್ರೊಪ್ರೈಟರ್,
ಎನ್. ನಾರಾಯಣರಾಜುರವರಿಂದ ಮುದ್ರಿಸಲ್ಪಟ್ಟಿತು. 10—10—1946.